ಶ್ರೀಜಯತೀರ್ಥವಿದ್ಯಾಪೀಠ



ರಜತಮಹೋತ್ಸವ

# ಪ್ರಪಂಚಮಿಥ್ಯಾತ್ವಾನುಮಾನಖಂಡನ

## ಕನ್ನಡ ಅನುವಾದ

ಅನುವಾದ – ಡಾ. ಕಾಂತೇಶಾಚಾರ್ಯ ಕದರಮಂಡಲಗಿ

ಇವರ 25ನೇಯ ಕೃತಿಕುಸುಮ

ಪ್ರಕಾಶನ - ವಿಶ್ವಮಧ್ವಮಹಾಪರಿಷತ್, ಉತ್ತರಾದಿಮಠ, ಬೆಂಗಳೂರು.

K. ಶೈಲೇಶಕುಮಾರ್,
26725419

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 147

# ಪ್ರಪಂಚ-ಮಿಥ್ಯಾತ್ವಾನುಮಾನಖಂಡನ

ಕನ್ನಡ ಅನುವಾದ

ಶ್ರೀಜಯತೀರ್ಥವಿದ್ಯಾಪೀಠದ
ರಜತಮಹೋತ್ಸವದ ಶುಭಸಂದರ್ಭದಲ್ಲಿ
ಅರಳಿದ ಕೃತಿಕುಸುಮ

... ಅನುವಾದ ...

ಡಾ. ಕಾಂತೇಶಾಚಾರ್ಯ ಕದರಮಂಡಲಗಿ

25ನೇ ಕೃತಿಕುಸುಮ

... ಪ್ರಕಾಶನ ...
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಉತ್ತರಾದಿಮಠ

ವಿಶ್ವಮಧ್ವಮಹಾಪರಿಷತ್
ಬಸವನಗುಡಿ ಬೆಂಗಳೂರು - 4

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 147

# ಪ್ರಪಂಚ-ಮಿಥ್ಯಾತ್ವಾನುಮಾನಖಂಡನ

ಕನ್ನಡ ಅನುವಾದ

ಶ್ರೀಜಯತೀರ್ಥವಿದ್ಯಾಪೀಠದ
ರಜತಮಹೋತ್ಸವದ ಶುಭಸಂದರ್ಭದಲ್ಲಿ
ಅರಳಿದ ಕೃತಿಕುಸುಮ

... ಅನುವಾದ ...

ಡಾ. ಕಾಂತೇಶಾಚಾರ್ಯ ಕದರಮಂಡಲಗಿ

25ನೇ ಕೃತಿಕುಸುಮ

... ಪ್ರಕಾಶನ ...
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಉತ್ತರಾದಿಮಠ

ವಿಶ್ವಮಧ್ವಮಹಾಪರಿಷತ್
ಬಸವನಗುಡಿ ಬೆಂಗಳೂರು - 4

ಪ್ರಪಂಚಮಿಥ್ಯಾತ್ವಾನುಮಾನಖಂಡನ

ಕನ್ನಡ ಅನುವಾದ :- ಡಾ.ಕಾಂತೇಶಾಚಾರ್ಯ ಕದರಮಂಡಲಗಿ

ಪ್ರಕಾಶನ : **ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ ಬೆಂಗಳೂರು**

ಮೊದಲ ಮುದ್ರಣ :- ಡಿಸೆಂಬರ್ 2014

( ಶ್ರೀಜಯತೀರ್ಥವಿದ್ಯಾಪೀಠದ ರಜತಮಹೋತ್ಸವದ ಶುಭಸಂದರ್ಭ)

ಪ್ರತಿಗಳು - 1000

No.of Pages : 200



Price : Rs. **60**

Copies can be had from :

**Vishva Madhwa Maha Parishat**
#11 2nd Floor Uttaradimath Building.
UttaradiMath Road, Shankarpuram,
Basavanagudi BANGALORE - 4
080-26603692 e-mail : vmmp05@gmail.com

ಮುಖಪುಟ ವಿನ್ಯಾಸ : ಶೇಷಗಿರಿ ಕೆ.ಎಂ

ಅಕ್ಷರ ಜೋಡಣೆ : ವಿಶ್ವಮಧ್ವಮಹಾಪರಿಷತ್ ಸಂಶೋಧನ ವಿಭಾಗ

Printed at :

**VAGARTHA,** 149, 8th Cross, N.R.Colony, Bangalore - 4 22427677



ಶ್ರೀಮಜ್ಜಗದ್ಗುರುಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ ಸಂಸ್ಥಾಪಕರಾದ
**ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ**
**ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ**



ಶ್ರೀಮಜ್ಜಗದ್ಗುರುಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ ಪೋಷಕರಾದ

**ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ**

**ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ**

॥ ಶ್ರೀದಿಗ್ವಿಜಯರಾಮೋ ವಿಜಯತೇ ॥
ಶ್ರೀಮಜ್ಜಗದ್ಗುರುಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ
ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಸತ್ಯವಾದ ಜಗತ್ತಿನ ಸೃಷ್ಟಿ ಮಾಡಿದ ಸತ್ಯನಾಮಕ ಪರಮಾತ್ಮನ ಮಹಾಮಹಿಮೆಯನ್ನು ಸಮರ್ಥಿಸುವುದಕ್ಕೆ ಜಗತ್ತಿನ ಸತ್ಯತ್ವವನ್ನು ಸಮರ್ಥಿಸುವದು ಅತ್ಯಂತ ಆವಶ್ಯಕ. ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಪ್ರಾಯಃ ತಮ್ಮ ಎಲ್ಲ ಕೃತಿಗಳಲ್ಲಿ ಇದರ ನಿರೂಪಣೆಯನ್ನು ಮಾಡಿದ್ದಾರೆ. ಪ್ರಪಂಚದ ಮಿಥ್ಯಾತ್ವವನ್ನು ನಿರಾಕರಿಸಿ ಸತ್ಯತ್ವವನ್ನು ಸಮರ್ಥನೆ ಮಾಡುವದಕ್ಕೋಸ್ಕರವಾಗಿಯೇ ಪ್ರತ್ಯೇಕವಾಗಿ ಒಂದು ಗ್ರಂಥವನ್ನು ರಚಿಸಿದ್ದಾರೆ. ಅದುವೇ ''ಪ್ರಪಂಚಮಿಥ್ಯಾತ್ವಾನುಮಾನ-ಖಂಡನ.'' ಶ್ರೀಮಟ್ಟೀಕಾಕೃತ್ಪಾದರ ದಿವ್ಯವಾದ ಟೀಕೆ ಈ ಗ್ರಂಥಕ್ಕೆ ಇದೆ. ಆ ಟೀಕೆಗೆ ಶ್ರೀವ್ಯಾಸರಾಜರ, ಶ್ರೀಸತ್ಯನಾಥರ, ಶ್ರೀಶ್ರೀನಿವಾಸತೀರ್ಥರ, ಪಾಂಡುರಂಗೀ ಆಚಾರ್ಯರ ಟಿಪ್ಪಣಿಗಳು ಇವೆ. ಈ ಟೀಕಾ-ಟಿಪ್ಪಣಿಗಳ ಸಹಾಯದಿಂದಲೇ ಸ್ಪಷ್ಟವಾಗಿ ಮೂಲದ ಭಾವವನ್ನು ತಿಳಿಯುವುದಕ್ಕೆ ಸಾಧ್ಯ.

ಈ ನಿಟ್ಟಿನಲ್ಲಿ ನಮ್ಮ ಪ್ರಿಯಶಿಷ್ಯರಾದ ಪಂ. ಕಾಂತೇಶಾಚಾರ್ಯ ಕದರಮಂಡಲಗಿ ಇವರು ಎಲ್ಲ ಟಿಪ್ಪಣಿಗಳ ಸಾರ ಬರುವಂತೆ ಸಟೀಕ ಮೂಲದ ಕನ್ನಡಾನುವಾದವನ್ನು ಮಾಡಿದ್ದಾರೆ. ಈಗಾಗಲೇ ವಾದಾವಲೀ, ಉಪಾಧಿಖಂಡನ, ಮಾಯಾವಾದಖಂಡನ, ಈ ಮೊದಲಾದ ಗ್ರಂಥಗಳ ಅನುವಾದ ಮಾಡಿ ವಿದ್ಯಾರ್ಥಿಗಳ ವಿದ್ವಾಂಸರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಚಿಕ್ಕ ವಯಸ್ಸಿನಲ್ಲಿ ಮಾಡಿದ ಈ ಸಾಧನೆಯು ನಿಜವಾಗಿಯೂ ಸ್ತುತ್ಯವಾದದ್ದು. ಇದರ ಲಾಭವನ್ನು ಜಿಜ್ಞಾಸುಗಳು ಪಡೆಯಬೇಕು.

ಇವರಿಗೆ ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲಸೀತಾಸಮೇತ ಶ್ರೀಮೂಲರಾಮ ದಿಗ್ವಿಜಯರಾಮ, ವೇದವ್ಯಾಸದೇವರು ಜ್ಞಾನ-ಭಕ್ತಿ-ವೈರಾಗ್ಯಗಳನ್ನು ಕೊಟ್ಟು, ಇದೇ ತರಹದ ಗ್ರಂಥರಚನಾಸೇವೆಯನ್ನು ನಿರಂತರವಾಗಿ ಮಾಡಿಸಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀಮತ್ಸತ್ಯಾತ್ಮತೀರ್ಥಾಃ ಉತ್ತರಾದಿಮಠಃ.

# ಇಣಕು ನೋಟ

'ಸತ್ಯಂ ಜ್ಞಾನಮಂತಂ ಬ್ರಹ್ಮ' 'ನೇಹ ನಾನಾಽಸ್ತಿ ಕಿಂಚನ' ಇತ್ಯಾದಿಶ್ರುತಿಗಳು ಹೇಳುವಂತೆ ಪರಬ್ರಹ್ಮನೊಬ್ಬನೇ ಸತ್ಯ. ಉಳಿದ ಜೀವರೆಲ್ಲರೂ ಬ್ರಹ್ಮನಿಂದ ಅಭಿನ್ನರು. ಉಳಿದದ್ದು ಜಡವಾದ ಜಗತ್ತು. ಆ ಜಡವಾದ ಜಗತ್ತು ಶುಕ್ತಿಯಲ್ಲಿ ರಜತವು ಆರೋಪಿತವಾಗುವಂತೆ ಪರಬ್ರಹ್ಮನಲ್ಲಿ ಆರೋಪಿತವಾಗಿದೆ. ಈ ಅಭಿಪ್ರಾಯದಲ್ಲಿಯೇ ಜಗತ್ತು ಮಿಥ್ಯೆ ಎನಿಸಿದೆ.

ಇದು ಅದ್ವೈತವೇದಾಂತದ ಪ್ರಧಾನತತ್ತ್ವಗಳು. ದ್ವೈತಸಿದ್ಧಾಂತಪ್ರತಿಷ್ಠಾಪಕರಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ಅದ್ವೈತವೇದಾಂತದ ಈ ಎಲ್ಲ ತತ್ತ್ವಗಳನ್ನು ತಮ್ಮ ಸರ್ವಮೂಲಗ್ರಂಥಗಳಲ್ಲಿ ವಿಕ್ಷಿಪ್ತವಾಗಿ ನಿರಾಕರಿಸಿದ್ದಾರೆ. ಶ್ರೀಮಟ್ಟೀಕಾಕೃತ್ಪಾದರು ಆಚಾರ್ಯರ ಅಪ್ಪಣೆಯಂತೆ ಸರ್ವಮೂಲಗ್ರಂಥಗಳಿಗೆ ಅಸಾಧಾರಣರೀತಿಯಲ್ಲಿ ವಿಶಿಷ್ಟಶೈಲಿಯಲ್ಲಿ ಅತ್ಯದ್ಭುತಟೀಕಾಗ್ರಂಥಗಳನ್ನು ವಿರಚಿಸಿ ಸಕಲಸಜ್ಜನರಿಗೂ ತೀರಿಸಲಾಗದ ಉಪಕಾರ ಮಾಡಿದ್ದಾರೆ. ಆಚಾರ್ಯರ ನಿಜವಾದ ಭಾವ-ತಾತ್ಪರ್ಯಗಳನ್ನು ತಿಳಿಸಿಕೊಟ್ಟಿದ್ದಾರೆ.

**ಯದಿ ಶಬ್ದಾಹ್ವಯಂ ಜ್ಯೋತಿಃ ಆಸಂಸಾರಂ ನ ದೀಪ್ಯತೇ ।**
**ಇದಮಂಧಂತಮಃ ಕೃತ್ಸ್ನಂ ಜಾಯೇತ ಭುವನತ್ರಯಮ್ ॥**

ಎಂಬುದಾಗಿ ಕವಿಯು ಹೇಳುವಂತೆ ಶಬ್ದ ಎಂಬ ಬೆಳಕೇ ಈ ಜಗತ್ತಿನಲ್ಲಿ ಇಲ್ಲವಾಗಿದ್ದರೆ ಸಮಗ್ರಜಗತ್ತೇ ಅಂಧಂತಮಸ್ಸಾಗಿರುತ್ತಿತ್ತು. (ಕತ್ತಲುಮಯವಾಗಿರುತ್ತಿತ್ತು.) ಅದರಂತೆಯೇ ಶ್ರೀಮಟ್ಟೀಕಾಕೃತ್ಪಾದರೆಂಬ ಸೂರ್ಯ ಉದಯಿಸದೇ ಇದ್ದಿದ್ದರೆ, ಯಾರಿಗೂ ಆಚಾರ್ಯರ ನಿಜವಾದ ಆಂತರ್ಯ ಅರ್ಥವಾಗದೇ ಸಜ್ಜನಲೋಕವೇ ಜ್ಞಾನಶೂನ್ಯವಾಗಿರುತ್ತಿತ್ತು ಎನ್ನುವುದು ಸಕಲವಿದ್ವಾಂಸರ ಅನುಭವಸಿದ್ಧವಿಚಾರ.

ಆಚಾರ್ಯರು ಜೀವ-ಬ್ರಹ್ಮೈಕ್ಯ ಎಂಬ ತತ್ತ್ವವನ್ನು ಮಾಯಾವಾದಖಂಡನ - ಉಪಾಧಿಖಂಡನ ಗ್ರಂಥಗಳಲ್ಲಿ ನಿರಾಕರಿಸಿದ್ದರೆ, ಮೂರನೆಯ ಈ ಪ್ರಪಂಚ-ಮಿಥ್ಯಾತ್ವಾನುಮಾನಖಂಡನದಲ್ಲಿ ಹೆಸರೇ ತಿಳಿಸುವಂತೆ ಜಗತ್ತು ಮಿಥ್ಯಾ ಎಂಬ ತತ್ತ್ವವನ್ನು ನಿರಾಕರಿಸಿದ್ದಾರೆ.

ಶ್ರೀಮಟ್ಟೀಕಾಕೃತ್ಪಾದರು ಗ್ರಂಥಪ್ರಾರಂಭದಲ್ಲಿಯೇ ತಿಳಿಸಿದಂತೆ,

**'ಓಂ ಜನ್ಮಾದ್ಯಸ್ಯ ಯತಃ ಓಂ'**

ಎಂಬ ಸೂತ್ರದಲ್ಲಿ ವೇದವ್ಯಾಸರು ಹೇಳಿದ ಜಗಜ್ಜನ್ಮಾದಿನಿಮಿತ್ತಕಾರಣತ್ವ ಎನ್ನುವುದು ಪರಬ್ರಹ್ಮನ ಪ್ರಧಾನಲಕ್ಷಣವಾಗಿದೆ. ಜಗತ್ತು ಸತ್ಯವಾಗದೇ ಹೋದಲ್ಲಿ ಪರಬ್ರಹ್ಮನಿಗೆ ಜಗಜ್ಜನ್ಮಾದಿಕಾರಣತ್ವವು ಕೂಡುವುದಿಲ್ಲ. ಹಾಗಾಗಿ ಜಗತ್ತಿಗೆ ಸತ್ಯತ್ವಸಮರ್ಥನೆ ಆವಶ್ಯಕ. ಜಗತ್ತಿನ ಮಿಥ್ಯಾತ್ವವಿಷಯದಲ್ಲಿ ಪರರು ಹೇಳುವ ಪ್ರಮಾಣಗಳನ್ನು ನಿರಾಕರಿಸಿದ ಹೊರತು ಜಗತ್ತಿಗೆ ಸತ್ಯತ್ವವು ಸಿದ್ಧಿಸುವುದಿಲ್ಲ. ಹಾಗಾಗಿ ಸತ್ಯತ್ವವಿಷಯದಲ್ಲಿ ಪ್ರಮಾಣಗಳನ್ನು ಉದಾಹರಿಸುವ ಜೊತೆಗೆ ಮಿಥ್ಯಾತ್ವವಿಷಯದಲ್ಲಿ ಪರರು ಉದಾಹರಿಸುವ ಪ್ರಮಾಣಗಳನ್ನು ನಿರಾಕರಿಸುವುದೂ ಅತ್ಯಗತ್ಯ. ಈ ಕಾರ್ಯವನ್ನು ಪ್ರಪಂಚಮಿಥ್ಯಾತ್ವಾನುಮಾನಖಂಡನ ಗ್ರಂಥದಲ್ಲಿ ಕಾಣುತ್ತೇವೆ. ದುಷ್ಟವಾದ ಅನುಮಾನಕ್ಕೆ ಏನೇನು ದೋಷಗಳನ್ನು ಹೇಳಬಹುದೋ ಅದೆಲ್ಲವನ್ನೂ

**ವಿಮತಂ ಮಿಥ್ಯಾ ದೃಶ್ಯತ್ವಾತ್**

ಎಂಬ ಪರಕೀಯರ ಅನುಮಾನಕ್ಕೆ ಹೇಳಿ ಮಿಥ್ಯಾತ್ವಾನುಮಾನವನ್ನು ನಿರಾಕರಿಸಿ ಜಗತ್ತಿಗೆ ಸತ್ಯತ್ವವನ್ನು ಸಮರ್ಥಿಸುತ್ತಾರೆ. ಭಗವಂತ ಸತ್ಯವಾದ ಜಗತ್ತಿನ ಸೃಷ್ಟ್ಯಾದಿಕರ್ತಾ ಎನ್ನುವುದನ್ನು ದೃಢಪಡಿಸುತ್ತಾರೆ.

ಆಚಾರ್ಯರ ಮೂಲಗ್ರಂಥಕ್ಕೆ ಶ್ರೀಮಟ್ಟೀಕಾಕೃತ್ಪಾದರ ಅದ್ಭುತ ಸುಂದರ ಟೀಕೆ ಇದೆ. ಶ್ರೀವ್ಯಾಸರಾಜರ ಮಂದಾರಮಂಜರೀ, ಶ್ರೀಸತ್ಯನಾಥತೀರ್ಥರ ಪರಶು ವ್ಯಾಖ್ಯಾನ, ಶ್ರೀಶ್ರೀನಿವಾಸತೀರ್ಥರ ಟಿಪ್ಪಣೀ, ಶ್ರೀ ಪಾಂಡುರಂಗೀ ಕೇಶವಾಚಾರ್ಯರ ಟಿಪ್ಪಣೀ ಇವು ಟೀಕೆಯ ಭಾವವನ್ನು ತಿಳಿಯಲು ಅತ್ಯಂತ ಸಹಕಾರಿಯಾಗಿವೆ.

ಟಿಪ್ಪಣಿಗಳ ವಿಚಾರಗಳನ್ನು ತೆಗೆದುಕೊಂಡು, ವಿಶೇಷವಾಗಿ ಶ್ರೀಶ್ರೀನಿವಾಸತೀರ್ಥರ ಟಿಪ್ಪಣಿಯನ್ನು ಸಂಪೂರ್ಣವಾಗಿ ಬಳಸಿಕೊಂಡು ಪ್ರಪಂಚಮಿಥ್ಯಾತ್ವಾನುಮಾನಟೀಕೆಗೆ ಅನುವಾದ ಮಾಡಲಾಗಿದೆ.

ಕೃತಿಯಲ್ಲಿ ಗುಣ-ದೋಷಗಳು ಸಹಜ. ಸಜ್ಜನರು ಹಂಸಕ್ಷೀರನ್ಯಾಯದಿಂದ ದೋಷಗಳನ್ನು ನನಗೆ ಬಿಟ್ಟು, ಏನಾದರೂ ನಾಲ್ಕು ಗುಣಗಳಿದ್ದರೆ ಅದು ನನ್ನ ಸ್ವರೂಪೋದ್ಧಾರಕಗುರುಗಳಾದ ಶ್ರೀಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರಿಗೆ ಹಾಗೂ

ವಿದ್ಯಾಪೀಠದಲ್ಲಿ ವೇದಾಂತಪಾಠ ಹೇಳಿದ ಪಂ. ಆಲೂರು ಶ್ರೀನಿವಾಸಾಚಾರ್ಯರಿಗೆ, ಪಂ. ನರಸಿಂಹಾಚಾರ್ಯರಿಗೆ ಸೇರಬೇಕಾದದ್ದು ಎಂದು ತಿಳಿಸುತ್ತಾ, ಈ ಕೃತಿ ಸುಂದರವಾಗಿ ಮೂಡಿಬರಲು ಕಾರಣರಾದ ಪಂ. ಮಹಿದಾಸಾಚಾರ್ಯ ಜೋಷಿ, ವೇಣುಗೋಪಾಲಾಚಾರ್ಯ, ಶೇಷಗಿರಿ ಕೆ ಎಂ, ವಾಗರ್ಥ ಮುದ್ರಣಾಲಯ ಎಲ್ಲರಿಗೆ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

**25ನೇ ವರ್ಷದ ರಜತಮಹೋತ್ಸವಕ್ಕೆ 25 ನೇ ಕೃತಿಸಮರ್ಪಣೆ**

ಶ್ರೀಜಯತೀರ್ಥವಿದ್ಯಾಪೀಠವು 25 ವರ್ಷಗಳನ್ನು ಯಶಸ್ವಿಯಾಗಿ ಪೂರೈಸಿಕೊಂಡು ರಜತಮಹೋತ್ಸವವನ್ನು ಆಚರಿಸಿಕೊಳ್ಳುತ್ತಿದೆ. ಪಂ. ಸತ್ಯಧ್ಯಾನಾಚಾರ್ಯರ ವಿಶೇಷ ಆಶೀರ್ವಾದದ ಮೇರೆಗೆ, ತಂದೆ-ತಾಯಿಗಳ ವಿಶೇಷ ಪ್ರೋತ್ಸಾಹದೊಂದಿಗೆ ಜಯತೀರ್ಥವಿದ್ಯಾಪೀಠಕ್ಕೆ ಸೇರಿ, ಹತ್ತಾರುವರ್ಷಗಳ ಕಾಲ ಅಧ್ಯಯನ ಮಾಡಿ, ಶ್ರೀಗಳವರಲ್ಲಿ ಸುಧಾಮಂಗಳ ಮುಗಿಸಿ, ವಿದ್ಯಾಪೀಠದಿಂದ ಸಾಕಷ್ಟು ಉಪಕೃತನಾದವನು ನಾನು.

ವಿದ್ಯಾಪೀಠದ ರಜತಮಹೋತ್ಸವ ಸಂದರ್ಭದಲ್ಲಿ ವಿದ್ಯಾಪೀಠಕ್ಕೆ ವಿಶೇಷಸೇವೆ ಸಲ್ಲಿಸಬೇಕೆಂಬ ಹಂಬಲ. ಗುರುಗಳು ನನ್ನಲ್ಲಿ ನಿಂತು ಬರೆಸಿದ ಈವರೆಗಿನ 20 ಕೃತಿಗಳ ಜೊತೆಯಲ್ಲಿ

- ಆತ್ಮಲಹರಿ,
- ಮಾತೊಂದು ಮಾಣಿಕ್ಯ,
- ಪರಂಜ್ಯೋತಿ,
- ಸೂತ್ರಾರ್ಥರತ್ನಾವಲೀ ಕನ್ನಡ ಅನುವಾದ
- ಪ್ರಪಂಚಮಿಥ್ಯಾತ್ವಾನುಮಾನಖಂಡನ ಕನ್ನಡ ಅನುವಾದ

ಎಂಬ 5 ಕೃತಿಗಳನ್ನು ಗುರುಗಳ ಪ್ರೇರಣೆಯಿಂದ ಬರೆದು 25ನೇ ವರ್ಷದ ರಜತಮಹೋತ್ಸವದಲ್ಲಿ 25 ಕೃತಿಗಳನ್ನು (25ನೇ ಕೃತಿಯಾಗಿ ಪ್ರಪಂಚಮಿಥ್ಯಾತ್ವಾನುಮಾನಖಂಡನ ಕನ್ನಡ ಅನುವಾದ ಗ್ರಂಥವನ್ನು) ಗುರುಗಳ ಪಾದಾರವಿಂದಗಳಲ್ಲಿ ಸಮರ್ಪಣೆ ಮಾಡುತ್ತಿದ್ದೇನೆ.

**ಅನೇನ ಭಾವಿ ಯತ್ಪುಣ್ಯಂ ತದಾಪ್ನೋತು ಗುರುರ್ಮಮ ॥**

**-ಗುರುಪಾದಸೇವಕ ಕಾಂತೇಶಾಚಾರ್ಯ ಕದರಮಂಡಲಗಿ**

# ಪ್ರಪಂಚಮಿಥ್ಯಾತ್ವಾನುಮಾನಖಂಡನಮ್

**॥ ಹನುಮ-ಭೀಮ-ಮಧ್ವಾಂತರ್ಗತ ರಾಮ-ಕೃಷ್ಣ-ವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥ ಶ್ರೀ ಗುರುಭ್ಯೋ ನಮಃ ॥**

**ಅವತಾರಿಕೆ :-** ಸರ್ವಜ್ಞಕಲ್ಪರಾದ ಶ್ರೀಮಟ್ಟೀಕಾಕೃತ್ಪಾದರು ಶ್ರೀಮದಾಚಾರ್ಯರ ''ಪ್ರಪಂಚಮಿಥ್ಯಾತ್ವಾನುಮಾನಖಂಡನ'' ಎಂಬ ಪ್ರಕರಣಕ್ಕೆ (ಗ್ರಂಥಕ್ಕೆ) ವ್ಯಾಖ್ಯಾನವನ್ನು (ಟೀಕೆಯನ್ನು) ರಚಿಸಲು ಇಚ್ಛಿಸಿದವರಾಗಿ, ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗುವುದಕ್ಕಾಗಿ ಗ್ರಂಥದ ಪ್ರಾರಂಭದಲ್ಲಿ ಮಂಗಳಾಚರಣೆಯನ್ನು ಮಾಡಲು ಉದ್ಯುಕ್ತರಾಗಿ, ತಾವು ಏನು ಮಾಡಲು ಹೊರಟಿದ್ದೇವೆ ಎನ್ನುವುದನ್ನು ಪ್ರತಿಜ್ಞೆ ಮಾಡುತ್ತಾರೆ -

**ಟೀಕಾ :- ನತ್ವಾ ವಿಶ್ವೋದಯಸ್ಥೇಮಲಯಹೇತುಂ ಪತಿಂ ಶ್ರಿಯಃ ।**
**ಕುರ್ಮಃ ಪ್ರಪಂಚಮಿಥ್ಯಾತ್ವಮಾನಖಂಡನಪಂಚಿಕಾಮ್ ॥**

**ಅರ್ಥಃ :-** ವಿಶ್ವೋದಯಸ್ಥೇಮಲಯಹೇತುಂ=ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣನಾದ, ಶ್ರಿಯಃ ಪತಿಂ = ಲಕ್ಷ್ಮೀಪತಿಯಾದ ಭಗವಂತನನ್ನು ನತ್ವಾ=ನಮಸ್ಕರಿಸಿ ಪ್ರಪಂಚಮಿಥ್ಯಾತ್ವಮಾನಖಂಡನಪಂಚಿಕಾಮ್= 'ಪ್ರಪಂಚ-ಮಿಥ್ಯಾತ್ವಾನುಮಾನಖಂಡನ' ಗ್ರಂಥಕ್ಕೆ ಟೀಕೆಯನ್ನು ಕುರ್ಮಃ=ಮಾಡುತ್ತೇವೆ (ರಚಿಸುತ್ತೇವೆ).

**ವಿಗ್ರಹ :-** ಉದಯಶ್ಚ ಸ್ಥೇಮ ಚ ಲಯಶ್ಚ ಉದಯಸ್ಥೇಮಲಯಾಃ, ವಿಶ್ವಸ್ಯ ಉದಯಸ್ಥೇಮಲಯಾಃ ವಿಶ್ವೋದಯಸ್ಥೇಮಲಯಾಃ, ವಿಶ್ವೋದಯಸ್ಥೇಮಲಯಾನಾಂ ಹೇತುಃ, ತಮ್ ಇತಿ । ಪ್ರಪಂಚಸ್ಯ ಮಿಥ್ಯಾತ್ವಂ ಪ್ರಪಂಚಮಿಥ್ಯಾತ್ವಂ,

ಪ್ರಪಂಚಮಿಥ್ಯಾತ್ವೇ ಮಾನಂ ಪ್ರಪಂಚಮಿಥ್ಯಾತ್ವಮಾನಂ, ತಸ್ಯ ಖಂಡನಂ, ತಸ್ಯ (ಪ್ರಪಂಚಮಿಥ್ಯಾತ್ವಮಾನಖಂಡನಗ್ರಂಥಸ್ಯ) ಪಂಚಿಕಾ, ತಾಮಿತಿ ।

**ವಿಶೇಷ ವಿಚಾರ :-1) ಸ್ಥೇಮ ಶಬ್ದವನ್ನು ಮೊದಲು ಇಡಬೇಕಿತ್ತು ?**

ಶ್ರೀಮಟ್ಟೀಕಾಕೃತ್ಪಾದರು ಮಾಡಿದ ಮಂಗಳಾಚರಣೆಯಲ್ಲಿ ವಿಶ್ವೋದಯಸ್ಥೇಮ-ಲಯಹೇತುಂ ಎಂಬುದಾಗಿ ಭಗವಂತನಿಗೆ ವಿಶೇಷಣ ನೀಡಿ ಸ್ತುತಿಸಿದರು. ಇಲ್ಲಿ ಉದಯಶಬ್ದವನ್ನು ಮೊದಲು ಇಟ್ಟು ಅನಂತರ ಸ್ಥೇಮ ಶಬ್ದವನ್ನು ಇಟ್ಟಿದ್ದಾರೆ. ಆದರೆ ಇದು ಸರಿಯಲ್ಲ. ಏಕೆಂದರೆ -

**''ಅಲ್ಪಾಚ್‌ತರಂ ಪೂರ್ವಂ''**

ಎಂಬ ನ್ಯಾಯದ ಪ್ರಕಾರ ಕಡಿಮೆ ಸ್ವರ ಉಳ್ಳ ಪದವನ್ನು ಮೊದಲು ಉಪಯೋಗಿಸುವುದು ಉಚಿತ. ಪ್ರಕೃತದಲ್ಲಿ ಉದಯ-ಸ್ಥೇಮ ಶಬ್ದಗಳಲ್ಲಿ ಉದಯ ಶಬ್ದದಲ್ಲಿ ಮೂರು ಸ್ವರಗಳಿದ್ದರೆ, ಸ್ಥೇಮ ಶಬ್ದದಲ್ಲಿ ಎರಡು ಸ್ವರಗಳಿವೆ. ಹೀಗೆ ಸ್ಥೇಮ ಶಬ್ದವು ಕಡಿಮೆ ಸ್ವರ ಉಳ್ಳ ಶಬ್ದವಾದದ್ದರಿಂದ ಸ್ಥೇಮ ಶಬ್ದವನ್ನೇ ಮೊದಲು ಪ್ರಯೋಗಿಸಬೇಕಿತ್ತು. ಅಂದರೆ

**'ವಿಶ್ವಸ್ಥೇಮೋದಯಲಯಹೇತುಂ'**

ಎಂಬುದಾಗಿ ಟೀಕಾಕೃತ್ಪಾದರು ಹೇಳಬೇಕಿತ್ತು. ವಿಶ್ವೋದಯಸ್ಥೇಮಲಯಹೇತುಂ ಎಂಬುದಾಗಿ ಉದಯ ಶಬ್ದವನ್ನು ಮೊದಲು ಹೇಗೆ ಪ್ರಯೋಗಿಸಿದರು ?

ಈ ಪ್ರಶ್ನೆಗೆ ಈ ರೀತಿಯಾಗಿ ಸಮಾಧಾನ ಹೇಳುತ್ತಾರೆ :- ಉದಯ ಎಂದರೆ ಜನ್ಮ. ಸ್ಥೇಮ ಎಂದರೆ ಸ್ಥಿತಿ. ಮೊದಲು ಜನ್ಮ. ಜನ್ಮವನ್ನು ಹೊಂದಿದ ವ್ಯಕ್ತಿಗೆ ಅನಂತರ ಸ್ಥಿತ್ಯಾದಿಗಳು ಉಪಪನ್ನ. (ಹುಟ್ಟಿದ ವ್ಯಕ್ತಿಗೆ ಸ್ಥಿತ್ಯಾದಿಗಳು ಉಪಪನ್ನವಾಗುತ್ತವೆ. ವ್ಯಕ್ತಿಯೇ ಹುಟ್ಟಲಿಲ್ಲ ಎಂದರೆ ಸ್ಥಿತ್ಯಾದಿಗಳು ಉಪಪನ್ನವಾಗುವುದಿಲ್ಲ.) ಹೀಗಾಗಿ ಉದಯ-ಸ್ಥೇಮ ಇವುಗಳಲ್ಲಿ ಉದಯವೇ ಅಭ್ಯರ್ಹಿತವಾಗಿದೆ.

**'ಅಭ್ಯರ್ಹಿತಂ ಪೂರ್ವಂ'**

ಎಂಬ ನ್ಯಾಯಾನುಸಾರವಾಗಿ ಅಭ್ಯರ್ಹಿತವಾದದ್ದನ್ನು ಮೊದಲು ಪ್ರಯೋಗಿಸುವುದು ಸೂಕ್ತ. ಹಾಗಾಗಿ ಟೀಕಾಕೃತ್ಪಾದರು ಅಭ್ಯರ್ಹಿತವಾದ ಉದಯ ಶಬ್ದವನ್ನು ಮೊದಲು ಪ್ರಯೋಗಿಸಿರುವುದು ಅತ್ಯಂತ ಸಮಂಜಸವಾಗಿದೆ.

ಹೌದು, 'ಅಭ್ಯರ್ಹಿತಂ ಪೂರ್ವಂ' ಎಂಬ ನ್ಯಾಯವನ್ನು ಅನುಸರಿಸಿ ನಿರ್ಣಯ ಮಾಡುವುದಾದರೆ ಹಾಗಾದರೆ ಹಿಂದೆ ಉದಾಹರಿಸಿದ ? 'ಅಲ್ಪಾಚ್‌ತರಂ ಪೂರ್ವಂ' ಎಂಬ ನ್ಯಾಯದ ಗತಿಯೇನು ? (ಆ ನ್ಯಾಯವನ್ನು ಏಕೆ ಅನುಸರಿಸಲಿಲ್ಲ ?) ಎಂದು ಪ್ರಶ್ನೆ ಬಂದರೆ, ಅದು ಸರಿಯಲ್ಲ. ಏಕೆಂದರೆ 'ಅಲ್ಪಾಚ್‌ತರಂ ಪೂರ್ವಂ' ಎಂಬ ನ್ಯಾಯವು

**''ಸಮುದ್ರಾಭ್ರಾದ್ಧಃ''**

**''ಆನ್ಮಹತಃ ಸಮಾನಾಧಿಕರಣಜಾತೀಯಯೋಃ''**

ಇತ್ಯಾದಿ ಸ್ಥಳಗಳಲ್ಲಿ ವ್ಯಭಿಚರಿತವಾಗಿದೆಯಾದ್ದರಿಂದ ಸಮಂಜಸವಲ್ಲ. ಆದ್ದರಿಂದ ಆ ನ್ಯಾಯವನ್ನು ಪ್ರಕೃತ ಅನುಸರಿಸಿಲ್ಲ ಎಂದು ಅಭಿಪ್ರಾಯ.

**ವಿಶೇಷ ವಿಚಾರ 2) ಸ್ಥೇಮ ಶಬ್ದಕ್ಕೆ ದಾರ್ಢ್ಯ ಎಂದು ಅರ್ಥ ?**

ಯದ್ಯಪಿ ಸ್ಥಿರ ಶಬ್ದ ಪ್ರಕೃತಿಕವಾದ (ಸ್ಥಿರ ಶಬ್ದವೇ ಪ್ರಕೃತಿಯಾಗಿ ಉಳ್ಳ) ಸ್ಥೇಮ ಶಬ್ದಕ್ಕೆ ರೂಢಿವೃತ್ತಿಯಿಂದ ದಾರ್ಢ್ಯ ಎಂದು ಅರ್ಥವಿದೆ. ಹೊರತು ಸ್ಥಿತಿ ಎಂದು ಅರ್ಥ ಇಲ್ಲ.

ತಥಾಪಿ ಸ್ಥಾ ಧಾತುವಿನಿಂದ ನಿಷ್ಪನ್ನವಾದ್ದರಿಂದ 'ತಿಷ್ಠತೀತಿ ಸ್ಥಿರಂ' ಎಂದು ವ್ಯುತ್ಪತ್ತಿಯನ್ನು ಆಶ್ರಯಿಸಿದಾಗ ಸ್ಥೇಮ ಶಬ್ದಕ್ಕೆ ಸ್ಥಿತಿ ಎಂಬ ಅರ್ಥವು ಯೋಗವೃತ್ತಿಯಿಂದ ಉಪಪನ್ನವಾಗುತ್ತದೆ.

ಅನ್ನುವುದಕ್ಕಾಗಿಯೇ (ಸ್ಥೇಮ ಶಬ್ದಕ್ಕೆ ಯೋಗವೃತ್ತಿಯಿಂದ ಸ್ಥಿತಿ ಎಂಬ ಅರ್ಥ ಇರುವುದರಿಂದಲೇನೇ)

**'ನಿಖಿಲಭುವನಜನ್ಮಸ್ಥೇಮಭಂಗಾದಿಲೀಲಃ'**

ಎಂಬುದಾಗಿ ಶ್ರೀರಾಮಾನುಜರ ಭಾಷ್ಯನಾಂದೀಶ್ಲೋಕದಲ್ಲಿ ಸ್ಥಿತಿ ಎಂಬ ಅರ್ಥದಲ್ಲಿಯೇ ಸ್ಥೇಮ ಶಬ್ದವನ್ನು ಪ್ರಯೋಗಿಸಲಾಗಿದೆ. ಭಾಷ್ಯ ವ್ಯಾಖ್ಯಾನವಾದ ಶ್ರುತತತ್ತ್ವಪ್ರಕಾಶಿಕಾದಲ್ಲಿ ಹಾಗೂ ಬೇರೆ ಬೇರೆ ಗ್ರಂಥಗಳಲ್ಲಿ ಸ್ಥಿತಿ ಎಂಬ ಅರ್ಥವುಳ್ಳ ಸ್ಥೇಮಶಬ್ದವನ್ನು ಅಭಿಯುಕ್ತರು ಪ್ರಯೋಗಿಸಿರುತ್ತಾರೆ. ಆದ್ದರಿಂದ ಸ್ಥಿತಿ ಎಂಬ ಅರ್ಥದಲ್ಲಿ ಟೀಕಾಕೃತ್ಪಾದರು ಸ್ಥೇಮ ಶಬ್ದವನ್ನು ಪ್ರಯೋಗಿಸಿರುವುದು ಅತ್ಯಂತ ಸಮಂಜಸವೇ ಆಗಿದೆ ಎಂದು ಭಾವ.

**ವಿಶೇಷ ವಿಚಾರ 3) ಶ್ರಿಯಃ ಪತಿಂ ನತ್ವಾ**

ಚಿಕೀರ್ಷಿತವಾದ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತವಾಗುವುದಕ್ಕಾಗಿ ಗ್ರಂಥದ ಆರಂಭದಲ್ಲಿ ಮಂಗಳಾಚರಣೆ ಮಾಡಬೇಕು. ಮಂಗಳಾಚರಣೆ ಎಂದರೆ ಸ್ವಇಷ್ಟದೇವತಾನಮನ. ಟೀಕಾಕೃತ್ಪಾದರು ಭಾಗವತೋತ್ತಮರಾದ್ದರಿಂದ ಸ್ವಇಷ್ಟದೇವತೆಯಾದ ಭಗವಂತನನ್ನು ''ಶ್ರಿಯಃ ಪತಿಂ ನತ್ವಾ'' ಎಂಬುದಾಗಿ ನಮಸ್ಕರಿಸುತ್ತಿದ್ದಾರೆ.

ಇಲ್ಲಿ ಭಗವಂತನನ್ನು ನಮಿಸುವ ಉದ್ದೇಶವಷ್ಟೇ ಇದ್ದದ್ದಾದರೆ 'ನಾರಾಯಣಂ ನತ್ವಾ' ಇತ್ಯಾದಿಯಾಗಿ ಹೇಳಬಹುದಾಗಿತ್ತು. ''ಶ್ರಿಯಃ ಪತಿಂ ನತ್ವಾ (ಲಕ್ಷ್ಮೀಪತಿಯನ್ನು ನಮಸ್ಕರಿಸಿ)'' ಎಂದೇ ಏಕೆ ಹೇಳಬೇಕು ? ಎಂದರೆ, ಇಲ್ಲೊಂದು ಅಭಿಪ್ರಾಯವಿಶೇಷವಿದೆ. ಅದೇನೆಂದರೆ ರಃ- ಗ್ರಂಥದ ಆರಂಭದಲ್ಲಿ ಭಗವಂತನನ್ನು ನಮಿಸುವುದು ಎಷ್ಟು ಆವಶ್ಯಕವೋ ಲಕ್ಷ್ಮೀದೇವಿಯನ್ನು ನಮಿಸುವುದೂ ಅಷ್ಟೇ ಆವಶ್ಯಕವಾಗಿದೆ. ಕಾರಣ - ಗ್ರಂಥವು ವಾಙ್ಮನೋವ್ಯಾಪಾರರೂಪವಾಗಿರುತ್ತದೆ. ಗ್ರಂಥವನ್ನು ಬರೆಯಬೇಕಾದರೆ ವಾಙ್ಮನಸ್ಸುಗಳಿಗೆ ಅಭಿಮಾನಿಯಾದ ದೇವತೆಯ ಅನುಗ್ರಹ ಅತ್ಯಾವಶ್ಯಕ. ವಾಙ್ಮನಸ್ಸುಗಳಿಗೆ ಅಭಿಮಾನಿನಿಯಾದವಳು ಮಹಾಲಕ್ಷ್ಮೀದೇವಿ. ಹಾಗಾಗಿ ಗ್ರಂಥದ ಆರಂಭದಲ್ಲಿ ಸಕಲವಾಙ್ಮನಸ-ದೇವತೆಯಾದ ಲಕ್ಷ್ಮೀದೇವಿಯನ್ನೂ ನಮಸ್ಕರಿಸಬೇಕಾದದ್ದು ಅತ್ಯಾವಶ್ಯಕ.

ಆದರೆ ಲಕ್ಷ್ಮೀದೇವಿಯು ನಿತ್ಯಾವಿಯೋಗಿನಿಯಾದ್ದರಿಂದ ಅವಳನ್ನು ಭಗವಂತನಿಂದ ಪ್ರತ್ಯೇಕವಾಗಿ ನಮಸ್ಕರಿಸುವಂತಿಲ್ಲ.

**''ವಿಷ್ಣುನಾ ಸಹಿತಾ ಧ್ಯಾತಾ ಮಹಾಲಕ್ಷ್ಮೀ ಫಲಪ್ರದಾ ।''**

ಇತ್ಯಾದಿ ಪ್ರಮಾಣಗಳು ಅದನ್ನು ಸ್ಪಷ್ಟಪಡಿಸುತ್ತವೆ. ಹಾಗಾದರೆ ನಮಸ್ಕರಿಸದೇ ಇರುವಂತಿಲ್ಲ. ಪ್ರತ್ಯೇಕವಾಗಿ ನಮಸ್ಕರಿಸುವ ಹಾಗಿಲ್ಲ. ಆದ್ದರಿಂದ ''ವಿಶಿಷ್ಟಸ್ಯ ಯದ್ ಭವತಿ ವಿಶೇಷಣಸ್ಯಾಪಿ ತದ್ ಭವತಿ'' ಎಂಬ ನಿಯಮದಂತೆ, ಕುಂಡಲವಿಶಿಷ್ಟನಾದ ದೇವದತ್ತನು ಬಂದಾಗ ಆಗಮನಕ್ರಿಯೆಯು ವಿಶೇಷಣವಾದ ಕುಂಡಲದಲ್ಲಿಯೂ ಅನ್ವಯಿಸುವಂತೆ, ''ಶ್ರಿಯಃ ಪತಿಂ ನತ್ವಾ'' ಎಂಬುದಾಗಿ ಲಕ್ಷ್ಮೀವಿಶಿಷ್ಟನಾದ ಭಗವಂತನಿಗೆ ನಮಸ್ಕಾರ ಸಲ್ಲಿಸಿದರೆ ವಿಶೇಷಣಳಾದ ಲಕ್ಷ್ಮೀದೇವಿಗೂ ನಮಸ್ಕಾರ ಸಲ್ಲುತ್ತದೆ. ವಿಷ್ಣುವಿನಿಂದ ಸಹಿತಳಾಗಿ ನಮಸ್ಕೃತಳಾದದ್ದಕ್ಕೆ ಲಕ್ಷ್ಮೀದೇವಿಯೂ

ಸಂತುಷ್ಟಳಾಗಿ ಗ್ರಂಥಕ್ಕೆ ನಿರ್ವಿಘ್ನಸಮಾಪ್ತಿ ಕೊಡುತ್ತಾಳೆ. ಈ ಉದ್ದೇಶದಿಂದ ''ನಾರಾಯಣಂ ನತ್ವಾ'' ಇತ್ಯಾದಿಯಾಗಿ ಹೇಳದೇ ''ಶ್ರಿಯಃ ಪತಿಂ ನತ್ವಾ'' ಎಂಬುದಾಗಿ ಟೀಕಾಕೃತ್ಪಾದರು ಹೇಳಿರುವುದು ಅತ್ಯಂತ ಸಮಂಜಸವಾಗಿದೆ ಎಂದು ಅಭಿಪ್ರಾಯ.

**ಅವತಾರಿಕೆ :- (ಶ್ರೀನಿ ವ್ಯಾಖ್ಯಾ ಪ್ರಕಾರ )**

''ಇದಂ ಪ್ರಕರಣಂ ನ ಆರಂಭಣೀಯಂ ವಿಷಯಾದ್ಯನುಬಂಧಚತುಷ್ಟಯಶೂನ್ಯತ್ವಾತ್'' ಅಂದರೆ =ಆಚಾರ್ಯರ ಪ್ರಪಂಚಮಿಥ್ಯಾತ್ವಾನುಮಾನಖಂಡನ ಎಂಬ ಪ್ರಕರಣವು ವಿಷಯಾದಿ ಅನುಬಂಧಚತುಷ್ಟಯರಹಿತವಾದ್ದರಿಂದ ಆರಂಭಣೀಯವಾಗಿಲ್ಲ ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ - ಇದು ಪ್ರಕರಣವಾಗಿದೆ. ಪ್ರಕರಣವು ಶಾಸ್ತ್ರೈಕದೇಶಸಂಬಂಧಿಯಾಗಿರುತ್ತದೆ. ಹೀಗಾಗಿ ಶಾಸ್ತ್ರದಲ್ಲಿ ಯಾವುದು ವಿಷಯಾದಿಗಳು ಆಗಿವೆಯೋ ಅವೇ ವಿಷಯಾದಿಗಳೇ ಈ ಪ್ರಕರಣಕ್ಕೂ ಆಗಿವೆ (ಸಂಬಂಧಿಸಿವೆ) ಎಂಬ ಅಭಿಪ್ರಾಯದಿಂದ ಟೀಕಾಕೃತ್ಪಾದರು ಆಚಾರ್ಯರ ಈ ಪ್ರಕರಣಕ್ಕೆ ಶಾಸ್ತ್ರಸಂಬಂಧವನ್ನು ತೋರಿಸುತ್ತಾರೆ -

**(ಗುರುರಾಜೀಯ ವ್ಯಾಖ್ಯಾ ಪ್ರಕಾರ)**

ಅಥವಾ ಆಚಾರ್ಯರ ಪ್ರಪಂಚಮಿಥ್ಯಾತ್ವಾನುಮಾನಖಂಡನ ಎಂಬ ಪ್ರಕರಣ ಗ್ರಂಥವು ವಿಷಯ-ಪ್ರಯೋಜನ-ಅಧಿಕಾರಿ-ಸಂಬಂಧಗಳಿಂದ ರಹಿತವಾಗಿರುವುದರಿಂದ ಪ್ರೇಕ್ಷಾವಂತರಿಂದ ಅನುಪಾದೇಯವಾಗಿದೆ (ಉಪಾದೇಯವಾಗಿಲ್ಲ). ಹಾಗಾಗಿ ಅದು ವ್ಯಾಖ್ಯೇಯ(ವ್ಯಾಖ್ಯಾನಿಸಲು ಯೋಗ್ಯ)ವಾಗಿಲ್ಲ. ಅಂದಮೇಲೆ

''ಪ್ರಪಂಚಮಿಥ್ಯಾತ್ವಮಾನಖಂಡನಪಂಚಿಕಾಂ ಕುರ್ಮಃ''

ಎಂಬುದಾಗಿ ಗ್ರಂಥವ್ಯಾಖ್ಯಾನ ಮಾಡಲು ಪ್ರತಿಜ್ಞೆ ಮಾಡಿದ್ದು ಯುಕ್ತವಲ್ಲ ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ - ಇದು ಪ್ರಕರಣವಾಗಿದೆ. ಪ್ರಕರಣವು ಶಾಸ್ತ್ರೈಕದೇಶಸಂಬಂಧಿಯಾಗಿರುತ್ತದೆ. ಹೀಗಾಗಿ ಶಾಸ್ತ್ರಸಂಬಂಧಿಯಾದ ವಿಷಯಾದಿಗಳೇ ಈ ಪ್ರಕರಣಗ್ರಂಥಕ್ಕೂ ಸಂಬಂಧಿಸುವುದರಿಂದ (ಈ ಪ್ರಕರಣದಲ್ಲಿಯೂ ವಿಷಯಾದಿಗಳು ಇರುವುದರಿಂದ) ಇದು ಪ್ರೇಕ್ಷಾವಂತರಿಂದ ಉಪಾದೇಯವೇ ಆಗಿದೆ. ಅಂತೆಯೇ

ವ್ಯಾಖ್ಯೆಯೇಯವೇ ಆಗಿದೆ. ಆದ್ದರಿಂದ ಗ್ರಂಥವ್ಯಾಖ್ಯಾನ ಮಾಡಲು ಪ್ರತಿಜ್ಞೆ ಮಾಡಿದ್ದು ಯುಕ್ತವೇ ಆಗಿದೆ ಎಂಬ ಅಭಿಪ್ರಾಯದಿಂದ ಆಚಾರ್ಯರ ಈ ಪ್ರಕರಣಕ್ಕೆ ಶಾಸ್ತ್ರೈಕದೇಶಸಂಬಂಧಿತ್ವವನ್ನು ತೋರಿಸುವುದಕ್ಕಾಗಿ ಶಾಸ್ತ್ರಾರ್ಥವನ್ನು ಮೊದಲು ತಿಳಿಸುತ್ತಾರೆ-

**ಟೀಕಾ :- 'ಜನ್ಮಾದ್ಯಸ್ಯ ಯತಃ' ಇತಿ ಭಗವತಾ ಸೂತ್ರಕಾರೇಣ ಜಗದುದಯಾದಿ ನಿಮಿತ್ತಕಾರಣತ್ವಂ ಪರಸ್ಯ ಬ್ರಹ್ಮಣೋ ಲಕ್ಷಣಮಭಿಹಿತಮ್ । ನ ಚ ಜಗತ್ಸತ್ಯತಾಮಂತರೇಣ ತದ್ವಾಸ್ತವಂ ಸಂಭವತಿ । ಸಾಪಿ ನ ಪರೋದೀರಿತಪ್ರಪಂಚಮಿಥ್ಯಾತ್ವಪ್ರಮಾಣಸ್ಯ ಆಭಾಸತಾವ್ಯುತ್ಪಾದನೇನ ವಿನೋಪಪದ್ಯತ ಇತಿ ತದರ್ಥಮಿದಂ ಪ್ರಕರಣಮಾರಭತೇ ಭಗವಾನಾಚಾರ್ಯಃ ।**

**ಅನುವಾದ :-** ಸೂತ್ರಕಾರರಾದ ಭಗವಾನ್ ವೇದವ್ಯಾಸರು

**ಓಂ ಜನ್ಮಾದ್ಯಸ್ಯ ಯತಃ ಓಂ**

ಎಂಬ ಸೂತ್ರದಿಂದ ಪರಬ್ರಹ್ಮನಿಗೆ ಜಗದುದಯಾದಿನಿಮಿತ್ತಕಾರಣತ್ವವನ್ನು ಲಕ್ಷಣವನ್ನಾಗಿ ತಿಳಿಸಿದ್ದಾರೆ. ಆದರೆ ಜಗತ್ತಿಗೆ ಸತ್ಯತ್ವ ಹೇಳದಿದ್ದರೆ ಜಗದುದಯಾದಿ ನಿಮಿತ್ತಕಾರಣತ್ವ ಎಂಬ ಲಕ್ಷಣವೂ ಸತ್ಯವಾಗುವುದಿಲ್ಲ. (ಜಗದುದಯಾದಿ ನಿಮಿತ್ತಕಾರಣತ್ವ ಲಕ್ಷಣವು ಸತ್ಯವಲ್ಲ ಎಂದಾದರೆ ಅದನ್ನು ತಿಳಿಸುವ ಶ್ರುತಿ-ಸೂತ್ರಗಳು ಅಪ್ರಮಾಣವಾಗಬೇಕಾದ ಪ್ರಸಂಗ ಬರುತ್ತದೆ.) ಹಾಗಾಗಿ ಸೂತ್ರಕಾರರು ಹೇಳಿದ ಜಗದುದಯಾದಿನಿಮಿತ್ತಕಾರಣತ್ವ ಲಕ್ಷಣವು ಸತ್ಯವಾಗುವುದಕ್ಕಾಗಿ ಜಗತ್ತಿಗೆ ಸತ್ಯತ್ವವನ್ನು ಹೇಳಬೇಕಾದುದು ಅನಿವಾರ್ಯ.

ಜಗತ್ತಿಗೆ ಸತ್ಯತ್ವವಾದರೂ ಯಾವಾಗ ಸಿದ್ಧಿಸುತ್ತದೆ ? ಪರವಾದಿಗಳು ಹೇಳುವ ಪ್ರಪಂಚಮಿಥ್ಯಾತ್ವಪ್ರಮಾಣಕ್ಕೆ (ಜಗತ್ತಿನ ಮಿಥ್ಯಾತ್ವವಿಷಯದಲ್ಲಿ ಪರವಾದಿಗಳು ಉದಾಹರಿಸುವ ಪ್ರಮಾಣಕ್ಕೆ) ಆಭಾಸತ್ವವನ್ನು ಹೇಳಿ ನಿರಾಕರಿಸದ ಹೊರತು ಜಗತ್ತಿನ ಸತ್ಯತ್ವ ಸಿದ್ಧಿಸುವುದಿಲ್ಲ. ಹಾಗಾಗಿ ಪರವಾದಿಗಳು ಹೇಳುವ ಪ್ರಪಂಚಮಿಥ್ಯಾತ್ವ-ಪ್ರಮಾಣಕ್ಕೆ ಆಭಾಸತ್ವವನ್ನು ತೋರಿಸಿ ನಿರಾಕರಣೆ ಮಾಡುವುದಕ್ಕಾಗಿ, ಆ ಮೂಲಕ ಜಗತ್ತಿಗೆ ಸತ್ಯತ್ವವನ್ನು ಸಮರ್ಥಿಸುವುದಕ್ಕಾಗಿ ಈ ಪ್ರಕರಣವನ್ನು ಆರಂಭಿಸುತ್ತಿದ್ದಾರೆ ಭಗವಾನ್ ಶ್ರೀಮದಾಚಾರ್ಯರು.

## ವಿ.ವಿ. 1) ಜಗದುದಯಾದಿನಿಮಿತ್ತಕಾರಣತ್ವಂ ಲಕ್ಷಣಮ್

(ಶ್ರೀನಿ-ಮಂದಾರಮಂಜರೀ)

**ಓಂ ಜನ್ಮಾದ್ಯಸ್ಯ ಯತಃ ಓಂ**

ಎಂಬ ಸೂತ್ರದಲ್ಲಿ ವೇದವ್ಯಾಸರು ಜಗಜ್ಜನ್ಮಾದಿಕಾರಣತ್ವವನ್ನು ಪರಬ್ರಹ್ಮನ ಲಕ್ಷಣವನ್ನಾಗಿ ಹೇಳಿದ್ದಾರೆ. ಇಲ್ಲಿ ಜಗಜ್ಜನ್ಮಾದಿಕಾರಣತ್ವ ಎಂದರೆ ಜಗದುಪಾದಾನ-ಕಾರಣತ್ವ ಎಂಬುದಾಗಿ ಅರ್ಥ ಮಾಡಿ, ಮಣ್ಣೇ ಘಟವಾಗಿ ಪರಿಣಾಮವಾಗುವಂತೆ ಬ್ರಹ್ಮನೇ ಜಗದಾತ್ಮನಾ ಪರಿಣಾಮವಾಗುವುದರಿಂದ ಉಪಾದಾನತ್ವ ಎಂದರೆ ಪರಿಣಾಮಿತ್ವ ಎಂದು ಭಾಸ್ಕರಾಚಾರ್ಯರು ಅಭಿಪ್ರಾಯಪಡುತ್ತಾರೆ.

ಶುಕ್ತಿಯು ರಜತಾರೋಪಕ್ಕೆ ಅಧಿಷ್ಠಾನವಾದಂತೆ, ಬ್ರಹ್ಮನು ಜಗದಾರೋಪಕ್ಕೆ ಅಧಿಷ್ಠಾನನಾಗಿದ್ದಾನೆ. (ಅರ್ಥಾತ್ ಶುಕ್ತಿಯಲ್ಲಿ ರಜತವು ಆರೋಪಿತವಾದಂತೆ ಬ್ರಹ್ಮನಲ್ಲಿ ಜಗತ್ತು ಆರೋಪಿತವಾಗಿದೆ.) ಹಾಗಾಗಿ ಉಪಾದಾನತ್ವ ಎಂದರೆ ಆರೋಪಾಧಿಷ್ಠಾನತ್ವ ಎಂದು ಮಾಯಾವಾದಿಗಳು ಅಭಿಪ್ರಾಯಪಡುತ್ತಾರೆ.

ಈ ಎರಡೂ ಮತಗಳನ್ನು ನಿರಾಕರಿಸುವುದಕ್ಕಾಗಿ ಟೀಕಾಕೃತ್ಪಾದರು ''ಜಗದುದಯಾದಿನಿಮಿತ್ತಕಾರಣತ್ವಂ''ಎಂದು ಹೇಳಿದರು.

ಭಾಸ್ಕರಾಚಾರ್ಯರು ಹೇಳುವಂತೆ ಬ್ರಹ್ಮನಿಗೆ ಪರಿಣಾಮಿತ್ವೇನ ಉಪಾದಾನ ಕಾರಣತ್ವವನ್ನು ಹೇಳಿದರೆ (ಬ್ರಹ್ಮನಿಗೆ ಜಗದಾತ್ಮನಾ ವಿಕಾರವನ್ನು ಅಂಗೀಕರಿಸಿದಂತಾಗುವುದರಿಂದ) ನಿರ್ವಿಕಾರತ್ವವು ಅನುಪಪನ್ನವಾಗಬೇಕಾಗುತ್ತದೆ.

ಇನ್ನು ಮಾಯಾವಾದಿಗಳು ಹೇಳುವಂತೆ ಬ್ರಹ್ಮನಿಗೆ ಆರೋಪಾಧಿಷ್ಠಾನತ್ವವನ್ನು ಹೇಳಿದರೆ, ಶ್ರುತಿಯಲ್ಲಿ ''ಯತೋ ವಾ ಇಮಾನಿ ಭೂತಾನಿ ಜಾಯಂತೇ'' ಎಂಬುದಾಗಿ ನಿರ್ದೇಶ ಮಾಡಿದ್ದು ಹಾಗೂ ಸೂತ್ರದಲ್ಲಿ ''ಜನ್ಮಾದಿ ಅಸ್ಯ ಯತಃ'' ಎಂಬುದಾಗಿ ನಿರ್ದೇಶ ಮಾಡಿದ್ದು ಅಸಂಗತವಾಗಬೇಕಾಗುತ್ತದೆ. ಕಾರಣ ಶುಕ್ತಿಯು ರಜತಾರೋಪಾಧಿಷ್ಠಾನವಾಗಿರುವುದರಿಂದ

**ಶುಕ್ತಿಕಾತಃ ರಜತಂ ಜಾಯತೇ (ಶುಕ್ತಿಯಿಂದ ರಜತವು ಹುಟ್ಟುತ್ತದೆ)**

ಎಂಬುದಾಗಿ ವ್ಯಪದೇಶ ಎಲ್ಲಿಯೂ ಇಲ್ಲ. ಅದರಂತೆ ಬ್ರಹ್ಮನು ಜಗದಾರೋಪಕ್ಕೆ ಅಧಿಷ್ಠಾನವಾಗುವುದಾದರೆ ಬ್ರಹ್ಮನಿಂದ ಜಗತ್ತು ಹುಟ್ಟುತ್ತದೆ ಎಂಬ ಶ್ರೌತ-ಸೌತ್ರ ವ್ಯಪದೇಶಗಳು ಅನುಪಪನ್ನವಾಗಬೇಕಾಗುತ್ತದೆ.

ಆದ್ದರಿಂದ ಜಗಜ್ಜನ್ಮಾದಿಕಾರಣತ್ವ ಎಂದರೆ ಜಗದುಪಾದಾನಕಾರಣತ್ವ ಎಂದು ಅರ್ಥವಲ್ಲ. ಕಿಂತು ಜಗನ್ನಿಮಿತ್ತಕಾರಣತ್ವ ಎಂದು ಅರ್ಥ. ಕುಂಭಾರನು ಘಟಕ್ಕೆ ನಿಮಿತ್ತಕಾರಣನಾಗುವಂತೆ ಬ್ರಹ್ಮನು ಜಗತ್ತಿಗೆ ನಿಮಿತ್ತಕಾರಣನಾಗಿದ್ದಾನೆ ಎಂದು ಅರ್ಥ.

ಬ್ರಹ್ಮನು ಜಗತ್ತಿಗೆ ನಿಮಿತ್ತಕಾರಣನಾದ್ದರಿಂದ ನಿರ್ವಿಕಾರತ್ವವೂ ಉಪಪನ್ನವಾಗುತ್ತದೆ. ನಿಮಿತ್ತಕಾರಣನಾದ ಕುಂಭಾರನಿಂದ ಘಟವು ಹುಟ್ಟುವುದರಿಂದ ''ಕುಂಭಕಾರಾತ್ ಘಟೋ ಜಾಯತೇ'' ಎಂಬ ವ್ಯಪದೇಶವು ಉಪಪನ್ನವಾಗುವಂತೆ, ನಿಮಿತ್ತಕಾರಣನಾದ ಬ್ರಹ್ಮನಿಂದ ಜಗತ್ತು ಹುಟ್ಟುವದರಿಂದ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' 'ಜನ್ಮಾದಿ ಅಸ್ಯ ಯತಃ' ಎಂಬ ಶ್ರೌತ-ಸೌತ್ರ ವ್ಯಪದೇಶಗಳೂ ಉಪಪನ್ನವಾಗುತ್ತವೆ ಎಂದು ಅಭಿಪ್ರಾಯ.

**ವಿ.ವಿ. 2) ಜಗತ್ತು ಸತ್ಯವಾಗದಿದ್ದರೆ ಜಗತ್ಕಾರಣತ್ವವೂ ಸತ್ಯವಾಗುವುದಿಲ್ಲ (ಪರಶು ವ್ಯಾಖ್ಯಾ)**

''ನ ಚ ಜಗತ್ಸತ್ಯತಾಮಂತರೇಣ ತತ್ ವಾಸ್ತವಂ ಸಂಭವತಿ ।'' ( ಟೀಕಾ )

ಜಗತ್ತಿಗೆ ಪಾರಮಾರ್ಥಿಕಸತ್ಯತ್ವ ಹೇಳದಿದ್ದರೆ ಜಗದುದಯಾದಿನಿಮಿತ್ತಕಾರಣತ್ವ ಎಂಬ ಲಕ್ಷಣವೂ ಪಾರಮಾರ್ಥಿಕಸತ್ಯವಾಗುವುದಿಲ್ಲ.

ಹೌದು, ಜಗತ್ತಿಗೆ ವ್ಯಾವಹಾರಿಕಸತ್ಯತ್ವ ಇದ್ದರೂ ಸಹ (ಪಾರಮಾರ್ಥಿಕಸತ್ಯತ್ವ ಇಲ್ಲದಿದ್ದರೂ ಸಹ) ಜಗತ್ಕಾರಣತ್ವವು ಪಾರಮಾರ್ಥಿಕಸತ್ಯ ಎಂದು ಹೇಳಲು ಸಾಧ್ಯವಿದೆ. ಹಾಗೊಂದುವೇಳೆ ಜಗತ್ತು ವ್ಯಾವಹಾರಿಕಸತ್ಯವಾದ್ದರಿಂದ ಜಗತ್ಕಾರಣತ್ವವೂ ವ್ಯಾವಹಾರಿಕಸತ್ಯವೇ ಆಗುತ್ತದೆ ಎಂದೇ ಹೇಳುವುದಾದರೆ, ಗಜ-ತುರಗಾದಿ ಸ್ವಾಪ್ನ ಪದಾರ್ಥಗಳು ವಾಸನಾಮಯವಾದ್ದರಿಂದ ಸ್ವಾಪ್ನ-ಗಜತುರಗಾದಿಕಾರಣತ್ವವೂ ವಾಸನಾಮಯವೇ ಆಗಬೇಕಾಗುತ್ತದೆ. ಪ್ರಕೃತ ಗಜ-ತುರಗಾದಿ ಸ್ವಾಪ್ನಪದಾರ್ಥಗಳು ವಾಸನಾಮಯವಾದರೂ ತತ್ಕಾರಣತ್ವವು ವ್ಯಾವಹಾರಿಕಸತ್ಯವಾಗಿರುವಂತೆ, ಜಗತ್ತು ವ್ಯಾವಹಾರಿಕಸತ್ಯವಾದರೂ ಜಗತ್ಕಾರಣತ್ವವು ಪಾರಮಾರ್ಥಿಕಸತ್ಯವಾಗಬಹುದು ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ - ನಾವು ''ಕಾರ್ಯವು ವ್ಯಾವಹಾರಿಕವಾದ್ದರಿಂದ ಕಾರಣತ್ವವೂ ವ್ಯಾವಹಾರಿಕವಾಗಬೇಕಾಗುತ್ತದೆ'' ಎಂಬುದಾಗಿ ಹೇಳುತ್ತಿಲ್ಲ. ಒಂದುವೇಳೆ ಹಾಗೆ ಹೇಳುತ್ತಿದ್ದರೆ ಆಗ ನೀವು ಹೇಳಿದಂತೆ ದೋಷ ಬರುತ್ತಿತ್ತು. (ಜಗತ್ತು ವ್ಯಾವಹಾರಿಕವಾದರೂ ಜಗತ್ಕಾರಣತ್ವವು ಪಾರಮಾರ್ಥಿಕಸತ್ಯವಾಗಬಹುದು ಎಂದು ನೀವು ಹೇಳಬಹುದಿತ್ತು.) ಕಿಂತು -

**ವಿಮತಂ ಮಿಥ್ಯಾ ದೃಶ್ಯತ್ವಾತ್ ಶುಕ್ತಿರಜತವತ್**

ಎಂಬ ಯಾವ ಅನುಮಾನದಿಂದ ಜಗತ್ತಿಗೆ ವ್ಯಾವಹಾರಿಕಸತ್ಯತ್ವವನ್ನು ಸಾಧಿಸುತ್ತಿದ್ದೀರಿ ಅದೇ ಅನುಮಾನದಿಂದಲೇನೇ ಜಗತ್ತಿನಲ್ಲಿ ಅಂತರ್ಭೂತವಾಗುವ ಕಾರಣ ಪರಾಭಿಮತವಾದ (ಜಗತ್ಕಾರಣತ್ವಕ್ಕೂ ವ್ಯಾವಹಾರಿಕತ್ವವು ಸಿದ್ಧಿಸುತ್ತದೆ) ಜಗತ್ಕಾರಣತ್ವವೂ ವ್ಯಾವಹಾರಿಕವೇ ಆಗಬೇಕಾಗುತ್ತದೆ ಎಂದು ಹೇಳುತ್ತೇವೆ. ಜಗತ್ತು ಪಾರ್ಮಾರ್ಥಿಕ ಸತ್ಯವಲ್ಲ ಎನ್ನುವುದಾದರೆ ಜಗತ್ತಿನಲ್ಲಿ ಅಂತರ್ಭೂತವಾದ ಜಗತ್ಕಾರಣವೂ ಪಾರಮಾರ್ಥಿಕಸತ್ಯವಲ್ಲ ಎಂದೇ ನೀವು ಅಂಗೀಕರಿಸಿದಂತಾಗುತ್ತದೆ ಎನ್ನುವುದು ನಮ್ಮ ಆಂತರ್ಯ. ಆದ್ದರಿಂದ ನಿಮ್ಮ ಆಕ್ಷೇಪಕ್ಕೆ ಅವಕಾಶವಿಲ್ಲ ಎಂದು ಅಭಿಪ್ರಾಯ.

**ಟೀಕಾ :- ನನು ಕಥಂ ಸ್ವಪಕ್ಷಸಾಧನೇನ ವಿನಾ ನಿರ್ಣಯಃ ? ಸತ್ಯಂ, ತಥಾಪಿ ಶಾಸ್ತ್ರೈಕದೇಶಸಂಬಂಧಿತ್ವಾತ್ ಪ್ರಕರಣಸ್ಯ ನ ದೋಷಃ । ವಿಜ್ಞಾಸ್ಯತೇ ಚ ಕಾಲಾತೀತತಾವ್ಯುತ್ಪಾದನೇನ ಸ್ವಪಕ್ಷಸಾಧನಪ್ರಕಾರೋಽಪೀತಿ ।**

**ಅನುವಾದ :-** ಸ್ವಪಕ್ಷಸಾಧನ-ಪರಪಕ್ಷೋಪಾಲಂಭ ಇವೆರಡರಿಂದಲೇ ನಿರ್ಣಯ ಉಂಟಾಗುತ್ತದೆ. ಹೊರತು ಇವೆರಡರಲ್ಲಿ ಕೇವಲ ಒಂದರಿಂದ (ಕೇವಲ ಸ್ವಪಕ್ಷಸಾಧನದಿಂದ ಅಥವಾ ಕೇವಲ ಪರಪಕ್ಷೋಪಾಲಂಭದಿಂದ) ನಿರ್ಣಯ ಆಗುವುದಿಲ್ಲ.

ಪ್ರಕೃತ ಈ ಪ್ರಕರಣದಲ್ಲಿ ಪರವಾದಿಗಳು ಉದಾಹರಿಸುವ ಪ್ರಪಂಚಮಿಥ್ಯಾತ್ವ-ಪ್ರಮಾಣಕ್ಕೆ ಅನೇಕ ದೋಷಗಳನ್ನು ಹೇಳುವ ಮೂಲಕ ಆಭಾಸತ್ವವನ್ನು (ಅಪ್ರಾಮಾಣ್ಯವನ್ನು) ತೋರಿಸುವುದರಿಂದ ಕೇವಲ ಪರಪಕ್ಷೋಪಾಲಂಭವನ್ನು ಮಾತ್ರ ಇಲ್ಲಿ ಮಾಡುತ್ತಿದ್ದೀರಿ. ಹೊರತು ಸತ್ಯತ್ವಸಾಧಕವಾದ ಪ್ರಮಾಣವನ್ನು ಉದಾಹರಿಸಿ ಜಗತ್ತಿಗೆ ಸತ್ಯತ್ವವನ್ನು ಸಾಧಿಸುತ್ತಿಲ್ಲ. ಅರ್ಥಾತ್ ಇಲ್ಲಿ ಸ್ವಪಕ್ಷಸಾಧನ ಇಲ್ಲ.

ಅಂದಮೇಲೆ ಸ್ವಪಕ್ಷಸಾಧನ ಇಲ್ಲದೇ ಕೇವಲ ಪರಪಕ್ಷೋಪಾಲಂಭದಿಂದ ಹೇಗೆ ನಿರ್ಣಯ ಸಾಧ್ಯ ? ನಿಮಗೆ ನ್ಯೂನತಾದೋಷ ಬರುತ್ತದೆಯಲ್ಲವೇ ? ಎಂದು ಶಂಕೆ ಬಂದರೆ, ನೀವು ಹೇಳುವುದು ಸತ್ಯವೇ.

ಈ ಪ್ರಕರಣದಲ್ಲಿ ಪರವಾದಿಗಳು ಉದಾಹರಿಸುವ ಪ್ರಪಂಚಮಿಥ್ಯಾತ್ವ-ಪ್ರಮಾಣಕ್ಕೆ ದೋಷಗಳನ್ನು ಹೇಳುವ ಮೂಲಕ ಆಭಾಸತ್ವವನ್ನು ಮಾತ್ರವೇ ಹೇಳುತ್ತಿದ್ದೇವೆ. ಈ ಪ್ರಕರಣದಲ್ಲಿ ಜಗತ್ಸತ್ಯತ್ವಸಾಧಕವಾದ ಪ್ರಮಾಣವನ್ನು ಉದಾಹರಿಸಿ ಸತ್ಯತ್ವಸಾಧನೆ ಮಾಡುತ್ತಿಲ್ಲ. ತಥಾಪಿ - ಆದರೂ ಸಹ

**ಶಾಸ್ತ್ರೈಕದೇಶಸಂಬದ್ಧಂ ಶಾಸ್ತ್ರಕಾರ್ಯಾಂತರೇ ಸ್ಥಿತಮ್ ।**
**ಆಹುಃ ಪ್ರಕರಣಂ ನಾಮ ಗ್ರಂಥಭೇದಂ ವಿಪಶ್ಚಿತಃ ॥**

ಎಂದು ವಚನ ಇರುವುದರಿಂದ ಪ್ರಕರಣವು ಶಾಸ್ತ್ರೈಕದೇಶಸಂಬಂಧಿಯಾಗಿರುತ್ತದೆ. ಹಾಗಾಗಿ ಜಗತ್ಸತ್ಯತ್ವಸಾಧಕವಾದ ಪ್ರಮಾಣವನ್ನು ಉದಾಹರಿಸಿ ಸ್ವಪಕ್ಷಸಾಧನವನ್ನು ಶಾಸ್ತ್ರದಲ್ಲಿ ಮಾಡಿದ್ದಾರೆ. ಅಂತಹ ಶಾಸ್ತ್ರದಲ್ಲಿ ಮಾಡಿದ ಸ್ವಪಕ್ಷಸಾಧನಪ್ರಕಾರವು ಇಲ್ಲಿಯೂ ಅನ್ವಯಿಸುವುದರಿಂದ ನ್ಯೂನತಾದೋಷ ಬರುವುದಿಲ್ಲ.

ಅಷ್ಟೇ ಅಲ್ಲದೇ, ''ಪ್ರತ್ಯಕ್ಷಾದಿವಿರುದ್ಧತ್ವಾತ್ ವಿಶ್ವಂ ಸತ್ಯಮಿತ್ಯಾದಿವಾಕ್ಯ-ವಿರುದ್ಧತ್ವಾಚ್ಚ ಕಾಲಾತ್ಯಯಾಪದಿಷ್ಟಃ'' ಎಂಬ ವಾಕ್ಯದಿಂದ ಮುಂದೆ ಪ್ರಪಂಚಮಿಥ್ಯಾತ್ವಾನುಮಾನಕ್ಕೆ ಸತ್ಯತ್ವಗ್ರಾಹಿಪ್ರತ್ಯಕ್ಷಾದಿಪ್ರಮಾಣಬಾಧವನ್ನು ಹೇಳುವವರಿದ್ದಾರೆ. ಅಲ್ಲಿ ಬಾಧದೋಷವನ್ನು ಹೇಳುವಾಗ ಜಗತ್ತಿಗೆ ಸತ್ಯತ್ವವನ್ನು ಗ್ರಹಿಸುವ ಪ್ರತ್ಯಕ್ಷಾದಿಪ್ರಮಾಣಗಳನ್ನು ಉದಾಹರಿಸುವುದರಿಂದ, ಅವುಗಳಿಂದಲೂ ಇದೇ ಪ್ರಕರಣದಲ್ಲಿಯೇ ಜಗತ್ಸತ್ಯತ್ವರೂಪಸ್ವಪಕ್ಷಸಾಧನಪ್ರಕಾರವೂ ತಿಳಿಯಲ್ಪಡುತ್ತದೆ. ಆದ್ದರಿಂದಲೂ ನ್ಯೂನತಾದೋಷ ಬರುವುದಿಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** ಶ್ರೀಮದಾಚಾರ್ಯರು ಗ್ರಂಥಾರಂಭದಲ್ಲಿ ಮಂಗಳಾಚರಣೆ ಮಾಡಬೇಕಿತ್ತು. ಆದರೆ ಮಾಡಿಲ್ಲ. ಏಕೆ ಮಾಡಿಲ್ಲ ? ಎಂಬುದಾಗಿ ಶಂಕಿಸಿಕೊಂಡು, ಶ್ರೀಮದಾಚಾರ್ಯರು ಮಂಗಳಾಚರಣೆಯನ್ನು ಮಾಡಿಯೇ ಮಾಡಿದ್ದಾರೆ ಎಂದು ಸಮರ್ಥಿಸುತ್ತಾರೆ -

**ಟೀಕಾ :- ನನು ಅವಿಗೀತಶಿಷ್ಟಾಚಾರಪರಂಪರಾದಿಪ್ರಾಪ್ತಂ ಪ್ರಾರಿಪ್ಸಿತ-ಪರಿಸಮಾಪ್ತ್ಯಾದಿಪ್ರಯೋಜನಂ ಕಿಮಪಿ ಮಂಗಳಾಚರಣಂ ಪ್ರಕರಣಾದೌ ಕಸ್ಮಾದಾಚಾರ್ಯೈರ್ನಾನುಷ್ಠಿತವಾನಿತಿ ಚೇತ್, ಕಥಮೇತದವಗತಮ್ ?**

**ಅನುಪಲಂಭಾದಿತಿ ಚೇನ್ನ । ತತ್ಕಾಲೀನಸ್ಯ ಅಧುನೋಪಲಬ್ಧುಮಶಕ್ಯ-ತ್ವಾತ್ । ಗ್ರಂಥೇ ನಿವೇಶನಾಭಾವಸ್ತಾವತ್ ಪ್ರತ್ಯಕ್ಷಸಿದ್ಧ ಇತಿ ಚೇತ್ । ಕಿಮತಃ । ನ ಹಿ ಗ್ರಂಥೇ ನಿವೇಶನಮೇವ ತದನುಷ್ಠಾನಮ್ । ನಾಪಿ ತದ್ವ್ಯಾಪ್ತಮ್ । ಕಾಯವಾಕ್‌ಚಿತ್ತನಿಮಿತ್ತಾನಾಮನೇಕೇಷಾಂ ಭಾವಾತ್ । ಗ್ರಂಥಾಂತರೇ ನಿವೇಶನಾದಿನ್ಯೈವ ಶಿಷ್ಯಾ ಅವಗಮಿಷ್ಯಂತಿ । ಅತ ಏವ ನ ತದನುಷ್ಠಾನಸಂದೇಹೋಽಪೀತಿ ।**

**ಅನುವಾದ :-** ಹೌದು, ಸರ್ವಸಂಪ್ರತಿಪನ್ನಶಿಷ್ಟಾಚಾರಪರಂಪರಾದಿಗಳಿಂದ ಪ್ರಾಪ್ತವಾದ, ಪ್ರಾರಂಭಿಸಲು ಹೊರಟ ಗ್ರಂಥದ ಪರಿಸಮಾಪ್ತ್ಯಾದಿಗಳೇ ಪ್ರಯೋಜನವಾಗಿ ಉಳ್ಳ, ಯಾವುದೇ ತರಹದ ಮಂಗಳಾಚರಣೆಯನ್ನು ಗಂಥಾರಂಭದಲ್ಲಿ ಶ್ರೀಮದಾಚಾರ್ಯರು ಏಕೆ ಮಾಡಿಲ್ಲ ? ಎಂದು ಪ್ರಶ್ನೆ ಬಂದರೆ, ಆಚಾರ್ಯರು ಮಂಗಳಾಚರಣೆ ಮಾಡಿಲ್ಲ ಎನ್ನುವುದು ನಿಮಗೆ ಹೇಗೆ ತಿಳಿಯಿತು ?

ಗ್ರಂಥದಲ್ಲಿ ನಿವೇಶನ ಮಾಡಿಲ್ಲ ಎನ್ನುವುದಂತೂ ಪ್ರತ್ಯಕ್ಷಸಿದ್ಧವಾಗಿದೆಯಲ್ಲ ? ಎಂದರೆ, ಆಗಲಿ ಗ್ರಂಥದಲ್ಲಿ ನಿವೇಶನ ಮಾಡಿಲ್ಲ ಸರಿ. ಅದರಿಂದೇನು ? ಗ್ರಂಥದಲ್ಲಿ ನಿವೇಶನ ಮಾಡುವುದೇ ಮಂಗಳಾಚರಣ ಅನುಷ್ಠಾನ ಅಲ್ಲ. ಕಾರಣ - ಕಾಯನಿಮಿತ್ತವಾದದ್ದು (ದೈಹಿಕ ನಮಸ್ಕಾರ), ವಾಕ್‌ನಿಮಿತ್ತವಾದದ್ದು (ಸ್ತೋತ್ರ ಮಾಡುವುದು ಅಥವಾ ನಮಃ ಎಂದು ಶಬ್ದೋಚ್ಚಾರಣೆ ಮಾಡುವುದು), ಚಿತ್ತನಿಮಿತ್ತವಾದದ್ದು (ನಿನಗಿಂತ ನಾನು ಅಧಮ, ನನಗಿಂತ ನೀನು ಉತ್ತಮ ಎಂದು ಮನಸ್ಸಿನಲ್ಲಿ ಅನುಸಂಧಾನ ಮಾಡುವುದು) ಎಂಬುದಾಗಿ ಮಂಗಳಾಚರಣೆಯು ಅನೇಕವಿಧವಾಗಿದೆ. ಆದ್ದರಿಂದ ಗ್ರಂಥದಲ್ಲಿ ನಿವೇಶನ ಮಾಡುವದೇ ಮಂಗಳಾನುಷ್ಠಾನ ಅಲ್ಲ.

ಗ್ರಂಥದಲ್ಲಿ ನಿವೇಶನ ಮಾಡುವುದೇ ಮಂಗಳಾನುಷ್ಠಾನ ಅಲ್ಲ, ಸರಿ. ಆದರೆ ಒಂದುವೇಳೆ ಆಚಾರ್ಯರು ಮಂಗಳಾನುಷ್ಠಾನ ಮಾಡಿದ್ದೇ ಆಗಿದ್ದರೆ ಗ್ರಂಥದಲ್ಲಿ ನಿವೇಶನ ಮಾಡಲೇಬೇಕಿತ್ತು ಅಲ್ಲವೇ ? ಎಂದರೆ, ಅದೂ ಸರಿಯಲ್ಲ. ಕಾರಣ ಈಗ

ಹೇಳಿದಂತೆ ದೈಹಿಕ-ಮಾನಸಿಕ-ವಾಚನಿಕ ಎಂಬುದಾಗಿ ಮಂಗಳವು ಅನೇಕವಿಧವಾಗಿರುವುದರಿಂದ ಮಂಗಳಾನುಷ್ಠಾನವು ಗ್ರಂಥೇ ನಿವೇಶನದಿಂದ ವ್ಯಾಪ್ತವಾಗಿಲ್ಲ. (ಮಂಗಳಾನುಷ್ಠಾನ ಮಾಡಿದರೆ ಗ್ರಂಥದಲ್ಲಿ ನಿವೇಶನ ಮಾಡಲೇಬೇಕು ಎಂದು ನಿಯಮವಿಲ್ಲ.)

ಗ್ರಂಥಾರಂಭದಲ್ಲಿ ಮಂಗಳಾಚರಣೆಯು ಕರ್ತವ್ಯವಾಗಿದೆ ಎಂದು ಶಿಷ್ಯರನ್ನು ಕುರಿತು ತಿಳಿಸುವುದಕ್ಕಾಗಿಯಾದರೂ ಗ್ರಂಥದಲ್ಲಿ ನಿವೇಶನ ಮಾಡಬೇಕಿತ್ತು ? ಎಂದರೆ, ಆಚಾರ್ಯರು ಇತರ ಗ್ರಂಥಗಳಲ್ಲಿ ಮಂಗಳವನ್ನು ನಿವೇಶನ ಮಾಡಿರುವುದರಿಂದ ಅದನ್ನು ನೋಡಿ ಶಿಷ್ಯರು ಗ್ರಂಥಾರಂಭದಲ್ಲಿ ಮಂಗಳವು ಕರ್ತವ್ಯ ಎಂದು ತಿಳಿದುಕೊಳ್ಳುತ್ತಾರೆ. (ಇಲ್ಲಿ ನಿವೇಶನ ಮಾಡಲೇಬೇಕಾದ ಅನಿವಾರ್ಯತೆ ಇಲ್ಲ.)

ಆದ್ದರಿಂದಲೇ, ಆಚಾರ್ಯರು ಇತರ ಗ್ರಂಥಗಳಲ್ಲಿ ಮಂಗಳವನ್ನು ನಿವೇಶನ ಮಾಡಿದ್ದರಿಂದಲೇನೇ, ಮಂಗಳಾನುಷ್ಠಾನ ಬೇಕೇ ? ಬೇಡವೇ ? ಎಂಬ ಸಂದೇಹಕ್ಕೂ ಅವಕಾಶವಿಲ್ಲ ಎಂದು ಭಾವ.

**ವಿವರಣೆ :-** (ಮಧ್ಯಸ್ಥರ ಪ್ರಶ್ನೆ) ಗ್ರಂಥದ ಪ್ರಾರಂಭದಲ್ಲಿ ಮಂಗಳಾಚರಣೆ ಮಾಡುವುದು ಅತ್ಯಗತ್ಯವಾಗಿದೆ. ಪ್ರಕೃತ ಪ್ರಪಂಚಮಿಥ್ಯಾತ್ವಾನುಮಾನಖಂಡನ ಎಂಬ ಗ್ರಂಥವನ್ನು ರಚಿಸಲು ಹೊರಟಿರುವ ಆಚಾರ್ಯರು ಗ್ರಂಥದ ಪ್ರಾರಂಭದಲ್ಲಿ ಮಂಗಳಾಚರಣೆ ಏಕೆ ಮಾಡಿಲ್ಲ ?

ಮಂಗಳಾಚರಣೆ ಮಾಡುವುದರಿಂದ ಏನಾದರೂ ಪ್ರಯೋಜನ (ಫಲ) ಇರಬೇಕು. ಮತ್ತು ಆ ವಿಷಯದಲ್ಲಿ ಪ್ರಮಾಣವಿರಬೇಕು. ಆದರೆ ಮಂಗಳಾಚರಣೆಗೆ ಯಾವುದೇ ಫಲ ಇಲ್ಲ ಹಾಗೂ ಮಂಗಳಾಚರಣೆ ಮಾಡಲೇಬೇಕು ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಆದ್ದರಿಂದ ಆಚಾರ್ಯರು ಮಂಗಳಾಚರಣೆ ಮಾಡಿಲ್ಲ, ಎಂಬುದಾಗಿ ಸಮಾಧಾನ ಹೇಳುವುದು ಸರಿಯಲ್ಲ. ಅದಕ್ಕಾಗಿಯೇ ಟೀಕಾಕೃತ್ಪಾದರು

**'ಅವಿಗೀತಶಿಷ್ಟಾಚಾರಪರಂಪರಾದಿಪ್ರಾಪ್ತಂ'**

ಎಂದಿದ್ದಾರೆ. ಅಂದರೆ ಗ್ರಂಥಾರಂಭದಲ್ಲಿ ನಿಯಮೇನ ಮಂಗಳಾನುಷ್ಠಾನ ಮಾಡುತ್ತಲೇ ಬಂದಿದ್ದಾರೆ ಶಿಷ್ಟರು. ಅಂತಹ ಸರ್ವಸಂಪ್ರತಿಪನ್ನರಾದ ಶಿಷ್ಟರ ಆಚಾರ ಪರಂಪರೆಯಿಂದ ಸಿದ್ಧವಾಗಿದೆ ಮಂಗಳಾನುಷ್ಠಾನ. ಸದಾಚಾರವೂ ಒಂದು





ಮುಖ್ಯಪ್ರಮಾಣವಾಗಿದ್ದರಿಂದ ಮಂಗಳಾನುಷ್ಠಾನವು ಪ್ರಾಮಾಣಿಕವಾಗಿದೆ ಎಂದಾಯಿತು.

ಅಂದಮೇಲೆ ಗ್ರಂಥಾರಂಭದಲ್ಲಿ ಮಂಗಳಾಚರಣೆಯು ಅವಶ್ಯಕರ್ತವ್ಯ ಎಂಬ ವಿಷಯದಲ್ಲಿ ಶಿಷ್ಟಾಚಾರಪರಂಪರಾ ರೂಪವಾದ ಪ್ರಮಾಣ ಇರುವುದರಿಂದ ಆಚಾರ್ಯರು ಮಂಗಳಾನುಷ್ಠಾನ ಏಕೆ ಮಾಡಿಲ್ಲ ? ಮತ್ತು ಮಂಗಳಾಚರಣೆ ಮಾಡುವುದರಿಂದ ಪ್ರಾರಿಪ್ಸಿತಗ್ರಂಥವು ನಿರ್ವಿಘ್ನವಾಗಿ ಪರಸಮಾಪ್ತವಾಗುತ್ತದೆ. ಅಲ್ಲದೇ ಪ್ರಚಯ (ಅಧ್ಯಯನಪರಂಪರೆಯಲ್ಲಿ ಗ್ರಂಥಸೇರ್ಪಡೆ) ರೂಪವಾದ ಪ್ರಯೋಜನವೂ ಇದೆ. ಅಂದಮೇಲೆ ನಿರ್ವಿಘ್ನಪರಿಸಮಾಪ್ತಿಪ್ರಚಯ ಎಂಬ ಪ್ರಯೋಜನವೂ ಇರುವುದರಿಂದ ಆಚಾರ್ಯರು ಮಂಗಳಾನುಷ್ಠಾನ ಏಕೆ ಮಾಡಿಲ್ಲ ?

ಈ ರೀತಿಯಾಗಿ ಮಧ್ಯಸ್ಥರು ಪ್ರಶ್ನೆ ಮಾಡಿದರೆ, ಅದಕ್ಕೆ ಟೀಕಾಕೃತ್ಪಾದರು ಮರುಪ್ರಶ್ನೆ ಮಾಡುವ ಮೂಲಕ ಉತ್ತರ ನೀಡುತ್ತಾರೆ.' ಅದು ಹೇಗೆಂದರೆ :-

**ಟೀಕಾಕೃತ್ಪಾದರು :-** ಹೌದು, ಗ್ರಂಥಾರಂಭದಲ್ಲಿ ಆಚಾರ್ಯರು ಮಂಗಳಾನುಷ್ಠಾನ ಮಾಡಿಲ್ಲ ಎನ್ನುವುದು ನಿಮಗೆ ಹೇಗೆ ತಿಳಿಯಿತು ?

**ಮಧ್ಯಸ್ಥರು :-** ಆಚಾರ್ಯರ ಈ ಗ್ರಂಥಾರಂಭದಲ್ಲಿ ಮಂಗಳಾಚರಣೆಯು ಉಪಲಬ್ಧವಾಗುತ್ತಿಲ್ಲವಾದ್ದರಿಂದ ಮಂಗಳಾನುಷ್ಠಾನ ಮಾಡಿಲ್ಲ ಎಂದು ತಿಳಿಯುತ್ತದೆ.

''ಮಂಗಳಂ, ಏತದ್‌ಗ್ರಂಥಾರಂಭಸಮಯನಿಷ್ಠಾಭಾವಪ್ರತಿಯೋಗಿ, ತದಾ ಅನುಪಲಭ್ಯಮಾನತ್ವಾತ್ । ಯತ್ ಯದಾ ನೋಪಲಭ್ಯತೇ ತತ್ ತದಾ ನಾಸ್ತಿ । ಯಥಾ ಶಶವಿಷಾಣಮ್ ।''

**ಟೀಕಾಕೃತ್ಪಾದರು :-** ಈ ರೀತಿಯಾಗಿ ಹೇಳುವುದು ಸರಿಯಲ್ಲ. ಕಾರಣ ಆ ಕಾಲದಲ್ಲಿ ಆಚಾರ್ಯರು ಮಾಡಿದ ಮಂಗಳಾಚರಣೆಯು ಈಗ ಉಪಲಬ್ಧವಾಗಲು ಸಾಧ್ಯವಿಲ್ಲ.

ಆದರ ಅಭಿಪ್ರಾಯ ಯಃ- ನೀವು ಮೇಲೆ ಮಾಡಿದ ಅನುಮಾನದಲ್ಲಿ ಕೇವಲ ಅನುಪಲಂಭವು ಅಭಾವಸಾಧಕವಾಗುವುದಾದರೆ (ಉಪಲಬ್ಧವಾಗುತ್ತಿಲ್ಲ ಎಂದಮೇಲೆ ಅದು ಇಲ್ಲ ಎಂದು ಸಾಧಿಸುವುದಾದರೆ) ಪರಮಾಣು ಮೊದಲಾದ ಅತೀಂದ್ರಿಯಪದಾರ್ಥಗಳಲ್ಲಿ ವ್ಯಭಿಚಾರ ಬರುತ್ತದೆ. ಪರಮಾಣು ಮೊದಲಾದ

ಪದಾರ್ಥಗಳು ಕಣ್ಣಿಗೆ ಕಾಣದಿದ್ದರೂ ಸತ್ಯವಾದ ಪದಾರ್ಥಗಳೇ ಆಗಿದ್ದರಿಂದ ಅಲ್ಲಿ ಅಭಾವಪ್ರತಿಯೋಗಿತ್ವ ಎಂಬ ಸಾಧ್ಯ ಇಲ್ಲ. ಆದರೆ ತದಾ ಅನುಪಲಭ್ಯಮಾನತ್ವ ಹೇತುವಿದೆ. ಹಾಗಾಗಿ ವ್ಯಭಿಚಾರ ಬರುತ್ತದೆ. ಅದಕ್ಕಾಗಿ ಕೇವಲ ಅನುಪಲಭ್ಯಮಾನತ್ವ ಹೇತುವಲ್ಲ. ಕಿಂತು ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವವು ಹೇತುವಾಗಿದೆ ಎನ್ನಬೇಕು. ಪರಮಾಣು ಮೊದಲಾದ ಅತೀಂದ್ರಿಯ ಪದಾರ್ಥಗಳಲ್ಲಿ ಕೇವಲ ಅನುಪಲಭ್ಯಮಾನತ್ವ ಇದ್ದರೂ ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವವು ಇಲ್ಲವಾದ್ದರಿಂದ ವ್ಯಭಿಚಾರ ಬರುವುದಿಲ್ಲ ಎಂದು ಹೇಳಬೇಕು.

ಪ್ರಕೃತ ಮಂಗಳದಲ್ಲಿಯೂ ಸಹ ಕೇವಲ ಅನುಪಲಭ್ಯಮಾನತ್ವ ಬಂದರೂ ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವ ಹೇತು ಬರುವುದಿಲ್ಲ. ಆ ಕಾಲದಲ್ಲಿ ಮಾಡಿದ ಮಂಗಳಾಚರಣೆಯು ಈಗ ಉಪಲಬ್ಧವಾಗಲು ಯೋಗ್ಯವಾಗಿಲ್ಲ. ಹೀಗಾಗಿ ಯೋಗ್ಯತ್ವೇ ಸತಿ ಅನುಪಲಭ್ಯಮಾತ್ವಹೇತುವು ಮಂಗಳರೂಪ ಪಕ್ಷದಲ್ಲಿ ಬಾರದ ಕಾರಣ ನಿಮ್ಮ ಅನುಮಾನಕ್ಕೆ ಅಸಿದ್ಧಿದೋಷ ಬರುತ್ತದೆ. ಆ ಕಾರಣ ನೀವು ಮಾಡಿದ ಅನುಮಾನ ಸರಿಯಲ್ಲ.

**ಮಧ್ಯಸ್ಥರು :-** ಹಾಗಾದರೆ ನಾವು ಈ ರೀತಿಯಾಗಿ ಅನುಮಾನಪ್ರಯೋಗ ಮಾಡುತ್ತೇವೆ.

> **''ಮಂಗಳಂ ಏತದ್ಗ್ರಂಥಾರಂಭಸಮಯನಿಷ್ಠಾಭಾವಪ್ರತಿಯೋಗಿ ಗ್ರಂಥೇ ಅನಿವೇಶಿತತ್ವಾತ್ ।''**

ಗ್ರಂಥದಲ್ಲಿ ಮಂಗಳದ ನಿವೇಶನ ಮಾಡಿಲ್ಲವಾದ್ದರಿಂದ ಗ್ರಂಥಾರಂಭದಲ್ಲಿ ಮಂಗಳಾಚರಣೆ ಮಾಡಿಲ್ಲ ಎಂದು ಹೇಳುತ್ತೇವೆ. ಗ್ರಂಥದಲ್ಲಿ ಮಂಗಳದ ನಿವೇಶನ ಮಾಡಿಲ್ಲ ಎನ್ನುವುದು ಪ್ರತ್ಯಕ್ಷಸಿದ್ಧವಾಗಿದೆಯಾದ್ದರಿಂದ ಈ ಅನುಮಾನಕ್ಕೆ ಅಸಿದ್ಧಿದೋಷ ಬರುವುದಿಲ್ಲ !

**ಟೀಕಾಕೃತ್ಪಾದರು :-** ಆಗಲಿ. ಆಚಾರ್ಯರು ಗ್ರಂಥದಲ್ಲಿ ಮಂಗಳದ ನಿವೇಶನ ಮಾಡಿಲ್ಲ. ಅದಕ್ಕೇನು ? ಗ್ರಂಥದಲ್ಲಿ ನಿವೇಶನ ಮಾಡುವುದೇ ಮಂಗಳಾನುಷ್ಠಾನ ಅಲ್ಲ. ಏಕೆಂದರೆ -

1) ಕಾಯನಿಮಿತ್ತವಾದದ್ದು (ದೈಹಿಕ ನಮಸ್ಕಾರ)




2) ವಾಕ್‌ನಿಮಿತ್ತವಾದದ್ದು (ಸ್ತೋತ್ರ ಮಾಡುವುದು, ಅಥವಾ ನಮಃ ಎಂದು ಶಬ್ದೋಚ್ಚಾರಣೆ ಮಾಡುವುದು)

3) ಚಿತ್ತನಿಮಿತ್ತವಾದದ್ದು (ನಿನಗಿಂತ ನಾನು ಅಧಮ, ನನಗಿಂತ ನೀನು ಉತ್ತಮ ಎಂಬುದಾಗಿ ಮನಸ್ಸಿನಲ್ಲಿ ಅನುಸಂಧಾನ ಮಾಡುವುದು)

ಎಂಬುದಾಗಿ ಮಂಗಳಾಚರಣೆಯು ಅನೇಕವಿಧವಾಗಿದೆ. ಹಾಗಾಗಿ ಗ್ರಂಥದಲ್ಲಿ ನಿವೇಶನ ಮಾಡದಿದ್ದರೂ ಕಾಯ-ವಾಕ್-ಚಿತ್ತನಿಮಿತ್ತವಾದ ಬೇರೆ ರೀತಿಯ ಮಂಗಳಾಚರಣೆಯನ್ನು ಮಾಡಿರಲು ಸಾಧ್ಯ ಉಂಟು. ಅಂದಮೇಲೆ ಗ್ರಂಥದಲ್ಲಿ ನಿವೇಶನ ಮಾಡಿಲ್ಲ ಎಂಬ ಕಾರಣಕ್ಕೆ ಮಂಗಳಾಚರಣೆ ಮಾಡಿಯೇ ಇಲ್ಲ ಎನ್ನಲು ಬರುವುದಿಲ್ಲ.

**ಮಧ್ಯಸ್ಥರು :-** ಗ್ರಂಥದಲ್ಲಿ ನಿವೇಶನ ಮಾಡುವುದೇ ಮಂಗಳಾನುಷ್ಠಾನ ಅಲ್ಲ. ಸರಿ. ಆದರೂ -

**ಯದಿ ಅತ್ರ ಮಂಗಲಂ ಆಚಾರ್ಯೈಃ ಅನುಷ್ಠಿತಂ ಸ್ಯಾತ್ ತರ್ಹಿ ಗ್ರಂಥೇ ನಿವೇಶನೀಯಂ ಸ್ಯಾತ್ । ನ ಚೈವಂ, ತಸ್ಮಾತ್ ನ ಅನುಷ್ಠಿತಮ್ ।**

ಒಂದುವೇಳೆ ಆಚಾರ್ಯರು ಮಂಗಳಾಚರಣೆ ಮಾಡಿದ್ದೇ ಆದರೆ ಆಗ ಗ್ರಂಥದಲ್ಲಿ ನಿವೇಶನ ಮಾಡಲೇಬೇಕಿತ್ತು. ಈಗಲಾದರೋ ಗ್ರಂಥದಲ್ಲಿ ನಿವೇಶನ ಮಾಡಿಲ್ಲ. ಆದ್ದರಿಂದ ಆಚಾರ್ಯರು ಮಂಗಳಾನುಷ್ಠಾನ ಮಾಡಿಲ್ಲ ಎಂಬುದಾಗಿ ಆಪಾದನೆ ಮಾಡುತ್ತೇವೆ !

**ಟೀಕಾಕೃತ್ಪಾದರು :-** ಈ ರೀತಿ ಆಪಾದನೆ ಮಾಡುವುದೂ ಸರಿಯಲ್ಲ. ಏಕೆಂದರೆ ಆಪಾದನೆಯಲ್ಲಿ ಆಪಾದಕಕ್ಕೆ ಆಪಾದ್ಯದಿಂದ ವ್ಯಾಪ್ತಿ ಇರಬೇಕು. ಪ್ರಕೃತ

**ಯತ್ರ ಮಂಗಳಾನುಷ್ಠಾನಂ ತತ್ರ ಗ್ರಂಥೇ ನಿವೇಶನಂ**

ಎಂಬುದಾಗಿ ವ್ಯಾಪ್ತಿ ಹೇಳಬೇಕು. ಆದರೆ ಈ ಹಿಂದೆ ಹೇಳಿದಂತೆ ಗ್ರಂಥದಲ್ಲಿ ನಿವೇಶನ ಮಾಡದಿದ್ದರೂ ಕಾಯ-ವಾಕ್-ಚಿತ್ತನಿಮಿತ್ತವಾದ ಮಂಗಳಗಳು ಸಾಧ್ಯವಿದೆಯಾದ್ದರಿಂದ ಮಂಗಳಾನುಷ್ಠಾನವು ಗ್ರಂಥೇ ನಿವೇಶನದಿಂದ ವ್ಯಾಪ್ತವೂ ಆಗಿಲ್ಲ. ಆದ್ದರಿಂದ ಈ ರೀತಿಯಾಗಿ (ಮಂಗಳಾನುಷ್ಠಾನ ಮಾಡಿದ್ದರೆ ಗ್ರಂಥದಲ್ಲಿ ನಿವೇಶನ ಮಾಡಲೇಬೇಕಿತ್ತು ಎಂಬುದಾಗಿ) ಆಪಾದನೆ ಮಾಡುವುದೂ ಸರಿಯಲ್ಲ.

**ಮಧ್ಯಸ್ಥರು :-** ಮಂಗಳಾನುಷ್ಠಾನವು ಗ್ರಂಥೇ ನಿವೇಶನದಿಂದ ವ್ಯಾಪ್ತವಾಗದಿದ್ದರೂ ಸಹ, ಗ್ರಂಥಾರಂಭದಲ್ಲಿ ಮಂಗಳಾಚರಣೆಯು ಅವಶ್ಯ ಕರ್ತವ್ಯವಾಗಿದೆ ಎಂಬುದಾಗಿ ಶಿಷ್ಯರಿಗೆ ತಿಳಿಸುವುದಕ್ಕಾಗಿಯಾದರೂ ಗ್ರಂಥದಲ್ಲಿ ನಿವೇಶನ ಮಾಡಬೇಕಿತ್ತಲ್ಲವೇ ? ಆ ಉದ್ದೇಶದಿಂದಾದರೂ ಆಚಾರ್ಯರು ಗ್ರಂಥದಲ್ಲಿ ನಿವೇಶನ ಏಕೆ ಮಾಡಲಿಲ್ಲ ?

**ಟೀಕಾಕೃತ್ಪಾದರು :-** ಆಚಾರ್ಯರು ಈ ಗ್ರಂಥದಲ್ಲಿ ಮಂಗಳದ ನಿವೇಶನ ಮಾಡದಿದ್ದರೂ (ಕಾಯ-ವಾಕ್-ಚಿತ್ತನಿಮಿತ್ತ ಮಂಗಳಗಳನ್ನು ಆಚರಿಸಿ ಮುಗಿಸಿದ್ದರೂ) ತಮ್ಮ ಇತರಗ್ರಂಥಗಳಲ್ಲಿ ಮಂಗಳದ ನಿವೇಶನ ಮಾಡಿದ್ದಾರೆ. ಹಾಗಾದರೆ -

ಶಿಷ್ಯರು ಎರಡುವಿಧರಾಗಿದ್ದಾರೆ.

1) ಅಸನ್ನಿಹಿತರಾದ ಶಿಷ್ಯರು. (ಆಚಾರ್ಯರ ಕಾಲದಲ್ಲಿ ಇಲ್ಲದ, ಕಾಲಾಂತರದಲ್ಲಿ ಬರುವ ಶಿಷ್ಯರು.)

2) ಸನ್ನಿಹಿತರಾದ ಶಿಷ್ಯರು. (ಆಚಾರ್ಯರ ಕಾಲದಲ್ಲಿಯೇ ಆಚಾರ್ಯರ ಸನ್ನಿಧಾನದಲ್ಲಿಯೇ ಇರುವ ಪದ್ಮನಾಭತೀರ್ಥಾದಿ ಶಿಷ್ಯರು.)

ಇವರಲ್ಲಿ ಅಸನ್ನಿಹಿತರಾದ ಶಿಷ್ಯರು, ಆಚಾರ್ಯರು ಇತರ ಗ್ರಂಥಗಳಲ್ಲಿ ಮಾಡಿದ ಮಂಗಳದ ನಿವೇಶನದಿಂದ ಗ್ರಂಥಾರಂಭದಲ್ಲಿ ಮಂಗಳಾಚರಣೆಯ ಕರ್ತವ್ಯತ್ವವನ್ನು ತಿಳಿದುಕೊಳ್ಳುತ್ತಾರೆ.

ಇನ್ನು ಸನ್ನಿಹಿತರಾದ ಶಿಷ್ಯರು, ಅವರು ಆಚಾರ್ಯರು ಗ್ರಂಥ ಬರೆಯುವ ಸಂದರ್ಭದಲ್ಲಿ ಅಲ್ಲಿಯೇ ಇದ್ದವರಾದ್ದರಿಂದ ಆಚಾರ್ಯರು ಮಾಡಿದ ಕಾಯ-ವಾಕ್-ಚಿತ್ತನಿಮಿತ್ತವಾದ ಮಂಗಳಗಳನ್ನು ತಾವು ಪ್ರತ್ಯಕ್ಷವಾಗಿಯೇ ಕಂಡು ಗ್ರಂಥಾರಂಭದಲ್ಲಿ ಮಂಗಳಾಚರಣೆಯ ಕರ್ತವ್ಯತ್ವವನ್ನು ತಿಳಿಯುತ್ತಿದ್ದರು.

ಆದ್ದರಿಂದ ಇಲ್ಲಿ ನಿವೇಶನ ಮಾಡದೇ ಇದ್ದದ್ದು ಯಾವುದೇ ನ್ಯೂನತೆಗೆ ಕಾರಣವಲ್ಲ.

**ಮಧ್ಯಸ್ಥರು :-** ಈ ಗ್ರಂಥದಲ್ಲಿ ನಿವೇಶನ ಮಾಡಿಲ್ಲವಾದ್ದರಿಂದ ''ಗ್ರಂಥಾರಂಭದಲ್ಲಿ ಮಂಗಳಾನುಷ್ಠಾನ ಮಾಡಬೇಕೆ ? ಇಲ್ಲವೇ ?'' ಎಂದು




ಸಂದೇಹವೇ ಉಂಟಾಗುತ್ತದೆ ! ಮಂಗಳಾನುಷ್ಠಾನ ಮಾಡಲೇಬೇಕು ಎಂದು ನಿಶ್ಚಯವಾಗುವುದಿಲ್ಲವಲ್ಲ !

**ಟೀಕಾಕೃತ್ಪಾದರು :-** ಆಚಾರ್ಯರು ಯಾವುದೇ ಗ್ರಂಥದಲ್ಲಿಯೂ ನಿವೇಶನ ಮಾಡಿರದಿದ್ದರೆ ನೀವು ಹೇಳಿದಂತೆ ಸಂದೇಹಕ್ಕೆ ಅವಕಾಶವಿರುತ್ತಿತ್ತು. ಆದರೆ ಆಚಾರ್ಯರು ತಮ್ಮ ಇತರ ಗ್ರಂಥಗಳಲ್ಲಿ ಮಂಗಳದ ನಿವೇಶನ ಮಾಡಿದ್ದಾರಾದ್ದರಿಂದ, ಅವುಗಳನ್ನು ನೋಡಿ ಶಿಷ್ಯರಿಗೆ ಗ್ರಂಥಾರಂಭದಲ್ಲಿ ಮಂಗಳಾಚರಣೆ ಕರ್ತವ್ಯವೇ ಆಗಿದೆ ಎಂದು ನಿಶ್ಚಯವೇ ಉಂಟಾಗುತ್ತದೆ. ಹೊರತು ಮಂಗಳಾನುಷ್ಠಾನದ ಸಂಶಯ ಬರುವುದಿಲ್ಲ.

ಅಥವಾ ಕಾಯ-ವಾಕ್-ಚಿತ್ತನಿಮಿತ್ತವಾದ ಅನೇಕವಿಧ ಮಂಗಳಗಳು ಇರುವುದರಿಂದ ಪರಮಾಸ್ತಿಕರಾದ ಆಚಾರ್ಯರು ಇವುಗಳಲ್ಲಿ ಯಾವುದೇ ತರಹದ ಮಂಗಳವನ್ನು ಮಾಡಿಯೇ ಮಾಡಿರುತ್ತಾರೆ ಎಂಬುದಾಗಿ ನಿಶ್ಚಯ ಮಾಡಿಕೊಳ್ಳುತ್ತಾರೆಯೇ ಹೊರತು ಯಾರೂ ಸಂಶಯ ಉಂಟುಮಾಡಿಕೊಳ್ಳುವುದಿಲ್ಲ.

ಆದ್ದರಿಂದ, ಅವಿಗೀತಶಿಷ್ಟಾಚಾರಪರಂಪರಾಪ್ರಾಪ್ತವಾದ ಪ್ರಾರಿಪ್ಸಿತ-ಪರಿಸಮಾಪ್ತ್ಯಾದಿ ಪ್ರಯೋಜನಕವಾದ ಮಂಗಳವನ್ನು (ಕಾಯ-ವಾಕ್-ಚಿತ್ತ ನಿಮಿತ್ತವಾದ ಯಾವುದೇ ತರಹದ ಮಂಗಳಾಚರಣೆಯನ್ನು) ಪರಮಾಸ್ತಿಕರಾದ ಆಚಾರ್ಯರು ಮಾಡಿಯೇ ಮಾಡಿರುತ್ತಾರೆ ಎಂಬುದಾಗಿ ನಿರಾಬಾಧವಾಗಿ ಸಿದ್ಧವಾಗುತ್ತದೆ.

**ಅವತಾರಿಕೆ :-** ಜಗತ್ತಿಗೆ ಸತ್ಯತ್ವವನ್ನು ಅಂಗೀಕರಿಸದೇ ಹೋದರೆ, 'ಜನ್ಮಾದ್ಯಸ್ಯ ಯತಃ' ಎಂಬುದಾಗಿ ಸೂತ್ರಕಾರರು ಪರಬ್ರಹ್ಮನಿಗೆ ಹೇಳಿದ ಜಗದುದಯಾದಿನಿಮಿತ್ತ-ಕಾರಣತ್ವಲಕ್ಷಣವು ಉಪಪನ್ನವಾಗುವುದಿಲ್ಲ. ಹಾಗಾಗಿ ಜಗತ್ತಿಗೆ ಸತ್ಯತ್ವವನ್ನು ಹೇಳಬೇಕು. ಜಗತ್ತಿಗೆ ಸತ್ಯತ್ವವು ಯಾವಾಗ ಸಿದ್ಧಿಸುತ್ತದೆ ? ಪರವಾದಿಗಳು ಹೇಳುವ ಪ್ರಪಂಚಮಿಥ್ಯಾತ್ವಸಾಧಕಪ್ರಮಾಣಗಳಿಗೆ ಆಭಾಸತ್ವವನ್ನು ಹೇಳದ ಹೊರತು ಜಗತ್ತಿಗೆ ಸತ್ಯತ್ವ ಸಿದ್ಧಿಸುವುದಿಲ್ಲ. ಆದ್ದರಿಂದ ಪರವಾದಿಗಳು ಹೇಳುವ ಪ್ರಪಂಚಮಿಥ್ಯಾತ್ವಸಾಧಕ ಪ್ರಮಾಣಗಳಿಗೆ ಆಭಾಸತ್ವವನ್ನು ಹೇಳಿ, ಜಗತ್ತಿಗೆ ಸತ್ಯತ್ವ ಸಮರ್ಥಿಸುವುದಕ್ಕಾಗಿ ಈ ಪ್ರಕರಣವನ್ನು ಆರಂಭಿಸುತ್ತಿದ್ದಾರೆ ಆಚಾರ್ಯರು ಎಂಬುದಾಗಿ ಈ ಹಿಂದೆ ಸಂಗತಿ ತೋರಿಸಿದರು.

ಪರವಾದಿಗಳು ಹೇಳುವ ಪ್ರಪಂಚಮಿಥ್ಯಾತ್ವಪ್ರಮಾಣಗಳಿಗೆ ಆಭಾಸತ್ವವನ್ನು ಹೇಳಬೇಕಾದರೆ ಮೊದಲಿಗೆ ಪರವಾದಿಗಳು ಪ್ರಪಂಚಮಿಥ್ಯಾತ್ವಸಾಧಕಪ್ರಮಾಣ ಏನು ಹೇಳುತ್ತಾರೆ ? ಎನ್ನುವುದು ತಿಳಿಯಬೇಕಿದೆ. ಅದಕ್ಕಾಗಿ ಪರವಾದಿಗಳು ಪ್ರಪಂಚಮಿಥ್ಯಾತ್ವಸಾಧಕವಾಗಿ ಯಾವ ಪ್ರಮಾಣ ಹೇಳುತ್ತಾರೆ ? ಎನ್ನುವುದನ್ನು ತೋರಿಸಿಕೊಡುತ್ತಾರೆ. ಆ ಉದ್ದೇಶದಿಂದ ಮುಂದಿನ ಗ್ರಂಥವು ಪ್ರವೃತ್ತವಾಗುತ್ತದೆ.

**ಟೀಕಾ :- ತತ್ರ ತಾವನ್ಮಾಯಾವಾದಿನೋದಿತಂ ಪ್ರಪಂಚಮಿಥ್ಯಾತ್ವಾನುಮಾನಮನುವದತಿ -**

**ಮೂಲ :- ವಿಮತಂ ಮಿಥ್ಯಾ ದೃಶ್ಯತ್ವಾತ್, ಯದಿತ್ಥಂ ತತ್ತಥಾ, ಯಥಾ ಸಂಪ್ರತಿಪನ್ನಮ್ ।**

**ಸರ್ವಂ ಮಿಥ್ಯಾ ಇತ್ಯುಕ್ತೇ ಬ್ರಹ್ಮಣಿ ಪ್ರಮಾಣಬಾಧಃ ಶುಕ್ತಿರಜತಾದೌ ಸಿದ್ಧಾರ್ಥತಾ ಚ ಸ್ಯಾದಿತಿ ವಿಮತಮಿತ್ಯುಕ್ತಮ್ । ವಿಮತೇರನೇಕವಿಧತ್ವೇಽಪಿ ಸಾಧ್ಯವಿಶೇಷೋಪಾದಾನಾತ್ ತದ್ವಿಶೇಷಸಿದ್ಧಿಃ । ತಥಾ ಚ ಸತ್ಯತ್ವಮಿಥ್ಯಾತ್ವಾಭ್ಯಾಂ ವಾದಿಪ್ರತಿವಾದಿವಿಮತಿವಿಷಯೋ ವಿಯದಾದೀತ್ಯುಕ್ತಂ ಭವತಿ । ತರ್ಹಿ ವಿಯದಾದೀತ್ಯೇವ ವಕ್ತವ್ಯಮ್ । ನ ಚೈವಂ ಶಂಕ್ಯಮ್ । ಅವಚ್ಛೇದಕಾನುಕ್ತಾವುಕ್ತದೋಷಾನಿಸ್ತಾರಾತ್ ।**

**ಅನುವಾದ :-** ಈ ಪ್ರಕರಣಕ್ಕೆ ಆರಂಭಣೀಯತ್ವವು ಸಿದ್ಧವಾಗುತ್ತಿರಲು, ಅಥವಾ ಪರವಾದಿಗಳು ಹೇಳುವ ಪ್ರಪಂಚಮಿಥ್ಯಾತ್ವಾನುಮಾನಕ್ಕೆ ಆಭಾಸತ್ವವನ್ನು ಹೇಳಲು ಹೊರಟ ಸಂದರ್ಭದಲ್ಲಿ, ಮೊದಲಿಗೆ ಮಾಯಾವಾದಿಗಳು ಹೇಳುವ ಪ್ರಪಂಚಮಿಥ್ಯಾತ್ವಾನುಮಾನವನ್ನು ಆಚಾರ್ಯರು ಅನುವಾದ ಮಾಡುತ್ತಾರೆ :-

**ಮೂಲ :-** ವಿಮತಂ ಮಿಥ್ಯಾ ದೃಶ್ಯತ್ವಾತ್, ಯದಿತ್ಥಂ ತತ್ತಥಾ, ಯಥಾ ಸಂಪ್ರತಿಪನ್ನಮ್ ।

**ಮೂಲಾರ್ಥ :-** ವಿಯದಾದಿಪ್ರಪಂಚವು ಮಿಥ್ಯೆಯಾಗಿದೆ ದೃಶ್ಯವಾಗಿದೆಯಾದ್ದರಿಂದ (ಜ್ಞಾನವಿಷಯವಾಗಿದ್ದರಿಂದ) ಯಾವುದು ದೃಶ್ಯವಾಗಿದೆಯೋ ಅದು ಮಿಥ್ಯೆಯಾಗಿದೆ. ಶುಕ್ತಿರಜತದಂತೆ (ಶುಕ್ತಿರಜತವು ದೃಶ್ಯವಾಗಿದ್ದರಿಂದ = 'ಇದಂ ರಜತಂ' ಎಂದು ಜ್ಞಾನವಿಷಯವಾದ್ದರಿಂದ ಹೇಗೆ ಮಿಥ್ಯೆಯಾಗಿದೆಯೋ ಹಾಗೆ) ಎನ್ನುವುದು ಅನುಮಾನದ ಸಾಮಾನ್ಯ ಅರ್ಥ.

ಈ ಅನುಮಾನದಲ್ಲಿ 'ವಿಮತಂ ಮಿಥ್ಯಾ' ಎನ್ನುವುದು ಪ್ರತಿಜ್ಞೆ. ವಿಯದಾದಿ ಪ್ರಪಂಚವನ್ನು ಪಕ್ಷ ಮಾಡಲಾಗಿದೆ. ವಿಯದಾದಿಪ್ರಪಂಚವನ್ನು ಪಕ್ಷ ಮಾಡುವ ಉದ್ದೇಶವಿದ್ದದ್ದಾದರೆ 'ಸರ್ವಂ ಮಿಥ್ಯಾ' ಎಂದು ಪ್ರತಿಜ್ಞೆ ಮಾಡಬಹುದಲ್ಲ ? ಎಂದರೆ, ಅದು ಸರಿಯಲ್ಲ. ಏಕೆಂದರೆ - ಒಂದುವೇಳೆ 'ಸರ್ವಂ ಮಿಥ್ಯಾ' ಎಂದು ಪ್ರತಿಜ್ಞೆ ಮಾಡಿದರೆ (ಎಲ್ಲವನ್ನೂ ಪಕ್ಷದಲ್ಲಿ ಸೇರಿಸಿದರೆ) ಸರ್ವಪದಾರ್ಥಗಳ ಮಧ್ಯದಲ್ಲಿ ಬ್ರಹ್ಮ-ಶುಕ್ತಿರಜತಾದಿಗಳೂ ಅಂತರ್ಗತವಾಗುವುದರಿಂದ ಬ್ರಹ್ಮ- ಶುಕ್ತಿರಜತಾದಿಗಳೂ (ಪಕ್ಷವಾದಂತಾಗುತ್ತದೆ.) ಪಕ್ಷೈಕದೇಶರಾಗುತ್ತಾರೆ. ಹಾಗಾದರೆ ಎರಡು ದೋಷಗಳು ಸಂಭವಿಸುತ್ತವೆ.

1) ನಿಮ್ಮ ಸಿದ್ಧಾಂತ(ಅದ್ವೈತಸಿದ್ಧಾಂತ)ದಲ್ಲಿ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ಶ್ರುತಿಪ್ರಮಾಣಗಳಿಗನುಸಾರವಾಗಿ ಮತ್ತು ಜಗದ್ಭ್ರಮಾಧಿಷ್ಠಾನತ್ವಯುಕ್ತಿಯ ಹಿನ್ನೆಲೆಯಲ್ಲಿ ಬ್ರಹ್ಮನು ಪಾರಮಾರ್ಥಿಕ ಸತ್ಯನೇ ಆಗಿದ್ದಾನೆ. ಅಂತಹ ಸತ್ಯಭೂತನಾದ ಬ್ರಹ್ಮನಲ್ಲಿ (ಪಕ್ಷೈಕದೇಶದಲ್ಲಿ) ಮಿಥ್ಯಾತ್ವಾಭಾವವು (ಸಾಧ್ಯಾಭಾವವು) ಪ್ರಮಿತವಾದ್ದರಿಂದ ಪ್ರಮಾಣಬಾಧ ದೋಷ ಬರುತ್ತದೆ. (''ಯಸ್ಯ ಸಾಧ್ಯಾಭಾವಃ ಪ್ರಮಾಣಾಂತರೇಣ ನಿಶ್ಚಿತಃ ಸಃ ಬಾಧಿತಃ'' ಎನ್ನುವುದು ಬಾಧದೋಷದ ಲಕ್ಷಣ.)

2) ಶುಕ್ತಿರಜತಾದಿಗಳು 'ನೇದಂ ರಜತಂ' ಇತ್ಯಾದಿ ಜ್ಞಾನಗಳಿಂದ ಬಾಧ್ಯವಾಗುವ ಕಾರಣ ಮಿಥ್ಯೆಯಾಗಿವೆ. ಅಂತಹ ಮಿಥ್ಯಾಭೂತವಾದ ಶುಕ್ತಿರಜತಾದಿಗಳಲ್ಲಿ (ಪಕ್ಷೈಕದೇಶದಲ್ಲಿ ) ಮಿಥ್ಯಾತ್ವ ಸಾಧ್ಯವು ನಿಶ್ಚಿತವೇ ಆಗಿರುವುದರಿಂದ (ಸಿದ್ಧವಾದದ್ದನ್ನೇ ಸಾಧನೆ ಮಾಡಿದಂತಾಗಿ) ಸಿದ್ಧಸಾಧನತಾದೋಷ ಬರುತ್ತದೆ.

ಹೀಗೆ ಪ್ರಮಾಣಬಾಧ ಹಾಗೂ ಸಿದ್ಧಸಾಧನತಾ ದೋಷಗಳು ಬರುವುದರಿಂದ 'ಸರ್ವಂ ಮಿಥ್ಯಾ' ಎಂಬುದಾಗಿ ಪ್ರತಿಜ್ಞೆ ಮಾಡಲು ಬರುವುದಿಲ್ಲ. ಅದಕ್ಕಾಗಿ ವಿಮತಂ ಎಂಬುದಾಗಿ ಪಕ್ಷನಿರ್ದೇಶ ಮಾಡಿದ್ದಾರೆ.

ವಿಮತಂ ಎಂದು ಪಕ್ಷನಿರ್ದೇಶ ಮಾಡಿದಾಗಲೂ ವಿಮತಿ = ಸಂಶಯ, ವಿಮತ = ಸಂಶಯವಿಷಯ ಎಂದು ಅರ್ಥ ಬರುವುದರಿಂದ 'ನಿತ್ಯೋ ವಾ ಅನಿತ್ಯೋ ವಾ' 'ಭಾವೋ ವಾ ಅಭಾವೋ ವಾ' ಇತ್ಯಾದಿಯಾಗಿ ಜಗತ್ತಿನಲ್ಲಿ ಅನೇಕ ಸಂಶಯಗಳು ಇರುವುದರಿಂದ ಪ್ರಕೃತ ವಿಮತಿಪದದಿಂದ ಯಾವ ಸಂಶಯವನ್ನು ತೆಗೆದುಕೊಳ್ಳಬೇಕು ?

ಎಂದು ಪ್ರಶ್ನೆ ಬಂದೇ ಬರುತ್ತದೆ. ಆದಕ್ಕೆ ಈ ರೀತಿ ಸಮಾಧಾನ ತಿಳಿಯಬೇಕು. ಜಗತ್ತಿನಲ್ಲಿ ವಿಮತಿಗಳು ಅನೇಕ ಇದ್ದರೂ ಸಹ, ಸಾಧ್ಯ(ಮಿಥ್ಯಾತ್ವ )ರೂಪವಾದ ಒಂದು ಕೋಟಿಯನ್ನು ಪ್ರತಿಜ್ಞೆಯಲ್ಲಿ ಉಲ್ಲೇಖಿಸಿರುವುದರಿಂದ ಸಾಧ್ಯ-ತದಭಾವ ಕೋಟಿಕವಾದ (ಯಾವ ಅನುಮಾನದಲ್ಲಿ ಮಿಥ್ಯಾತ್ವ -ಸತ್ಯತ್ವಗಳು ಕೋಟಿಗಳಾಗಿರುತ್ತವೆಯೋ ಅಂತಹ) ವಿಮತಿವಿಶೇಷವನ್ನೇ (ಸಂಶಯವಿಶೇಷವನ್ನೇ) ತೆಗೆದುಕೊಳ್ಳಬೇಕೆಂದು ತಿಳಿದು ಬರುತ್ತದೆ. ಹಾಗಾದರೆ ವಿಮತ ಎಂದರೆ, ವಾದಿ-ಪ್ರತಿವಾದಿಗಳ ವಿರುದ್ಧವಾಕ್ಯಗಳಿಂದ ಜನ್ಯವಾದ ಸತ್ಯತ್ವ-ಮಿಥ್ಯಾತ್ವ ಕೋಟಿಕವಾದ ವಿಮತಿಗೆ ವಿಷಯವಾದ (ವಿಯದಾದಿಕಂ ಸತ್ಯಂ ವಾ ಮಿಥ್ಯಾ ವಾ ಎಂಬ ಸಂಶಯಕ್ಕೆ ಧರ್ಮಿಯಾದ) ವಿಯದಾದಿಪ್ರಪಂಚ ಎಂದು ಪರಿಷ್ಕೃತ ಅರ್ಥ ಹೇಳಿದಂತಾಗುತ್ತದೆ.

ಹಾಗಾದರೆ (ವಿಯದಾದಿಗಳನ್ನು ತೆಗೆದುಕೊಳ್ಳುವ ಉದ್ದೇಶ ಇದ್ದದ್ದಾದರೆ) 'ವಿಯದಾದಿ ಮಿಥ್ಯಾ' ಎಂದೇ ಹೇಳಬಹುದಲ್ಲ ? ವಿಮತಂ ಎಂದೇ ಏಕೆ ಹೇಳಬೇಕು ? ಎಂದು ಶಂಕಿಸುವುದು ಸರಿಯಲ್ಲ. ಏಕೆಂದರೆ, ಹಾಗೊಂದುವೇಳೆ 'ವಿಯದಾದಿ ಮಿಥ್ಯಾ' ಎಂದು ಹೇಳಿದರೆ ಆದಿಪದದಿಂದ ಯಾವುದನ್ನು ತೆಗೆದುಕೊಳ್ಳಬೇಕು ? ಎಂಬ ಪ್ರಶ್ನೆ ಬಂದು, ಆದಿಪದದಿಂದ ಇವುಗಳನ್ನು ತೆಗೆದುಕೊಳ್ಳಬೇಕು ಇವುಗಳನ್ನು ತೆಗೆದುಕೊಳ್ಳಬಾರದು ಎಂದು ನಿರ್ಣಯಿಸುವುದಕ್ಕೆ ಏನಾದರೂ ಅವಚ್ಛೇದಕ ಹೇಳಬೇಕಾಗುತ್ತದೆ. ಪ್ರಕೃತ ಅಂತಹ ಅವಚ್ಛೇದಕ ಯಾವುದೂ ಇಲ್ಲವಾದ್ದರಿಂದ ಒಂದನ್ನೂ ಬಿಡದೇ ಎಲ್ಲವನ್ನೂ (ಬ್ರಹ್ಮ-ಶುಕ್ತಿರೂಪ್ಯಾದಿಗಳನ್ನೂ) ಆದಿಪದದಿಂದ ತೆಗೆದುಕೊಂಡಂತಾಗಿ, ಹಿಂದೆ ಹೇಳಿದ ಪ್ರಕಾರ ಸರ್ವಪದಾರ್ಥಮಧ್ಯಪ್ರವಿಷ್ಟನಾದ ಬ್ರಹ್ಮನಲ್ಲಿ ಪ್ರಮಾಣಬಾಧ ದೋಷ , ಶುಕ್ತಿರಜತಾದಿಗಳಲ್ಲಿ ಸಿದ್ಧಸಾಧನತಾ ದೋಷ ಪುನಃ ಪ್ರಸಕ್ತವಾಗುತ್ತವೆ. ಆದ್ದರಿಂದ 'ವಿಯದಾದಿ ಮಿಥ್ಯಾ' ಎಂಬುದಾಗಿ ಪ್ರತಿಜ್ಞೆ ಮಾಡುವುದು ಸರಿಯಲ್ಲ.

'ವಿಮತಂ ಮಿಥ್ಯಾ' ಎಂದು ಪ್ರತಿಜ್ಞೆ ಮಾಡಿದರೆ ಈ ಯಾವ ದೋಷಕ್ಕೂ ಅವಕಾಶವಿರುವುದಿಲ್ಲ. ಬ್ರಹ್ಮನು ಸತ್ಯನೇ ಎಂದು ನಿಶ್ಚಯ ಇರುವುದರಿಂದ, ಶುಕ್ತಿರಜತಾದಿಗಳು ಮಿಥ್ಯೆಯಾಗಿವೆ ಎಂದು ನಿಶ್ಚಯ ಇರುವುದರಿಂದ, ಸತ್ಯತ್ವ-ಮಿಥ್ಯಾತ್ವಕೋಟಿಕವಾದ ಸಂಶಯಕ್ಕೆ ವಿಷಯವಾದದ್ದು ಎಂದರೆ

ಬ್ರಹ್ಮ-ಶುಕ್ತಿರಜತಾದಿಗಳು ಆಗುವುದಿಲ್ಲ. ಬಾಧ-ಸಿದ್ಧಸಾಧನತಾಗಳಿಗೆ ಅವಕಾಶವಿಲ್ಲ. ಹಾಗಾಗಿ 'ಸರ್ವಂ ಮಿಥ್ಯಾ' ಎಂದು ಹೇಳದೇ 'ವಿಯದಾದಿ ಮಿಥ್ಯಾ' ಎಂದೂ ಹೇಳದೇ 'ವಿಮತಂ ಮಿಥ್ಯಾ' ಎಂಬುದಾಗಿ ಹೇಳಿರುವುದು ಸಮಂಜಸವಾಗಿದೆ ಎನ್ನುವುದು ಮಾಯಾವಾದಿಗಳ ಅಭಿಪ್ರಾಯ.

**ಟೀಕಾ :- ಯದ್ಯಪಿ ದೃಶ್ಯತ್ವಹೇತುರನ್ವಯವ್ಯತಿರೇಕೀ । ತಥಾಪ್ಯ-ಕುಟಿಲೇಽನ್ವಯೀ ಸಂಭವತಿ ನ ಕುಟಿಲೋ ವ್ಯತಿರೇಕ ಆದರಣೀಯ ಇತಿ ಸೂಚಯಿತುಂ ಯದಿತ್ಥಂ ತತ್ತಥೇತ್ಯನ್ವಯ ಏವ ದರ್ಶಿತಃ ।**

**ಅನುವಾದ :-** 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬ ಅನೂದಿತ ದೃಶ್ಯತ್ವಾನುಮಾನವು ಅನ್ವಯವ್ಯತಿರೇಕಿ ಆಗಿದೆ. (ಅನ್ವಯವ್ಯಾಪ್ತಿ ಹಾಗೂ ವ್ಯತಿರೇಕ ವ್ಯಾಪ್ತಿ ಎರಡೂ ಉಳ್ಳದ್ದಾಗಿದೆ.) ಪರಮತದಲ್ಲಿ ವ್ಯತಿರೇಕವ್ಯಾಪ್ತಿಗೆ ಬ್ರಹ್ಮನು ದೃಷ್ಟಾಂತನಾಗಿ ಇರುವುದರಿಂದ

**'ಯತ್ ನ ಮಿಥ್ಯಾ ತತ್ ನ ದೃಶ್ಯಮ್ । ಯಥಾ ಬ್ರಹ್ಮ ।'**

ಯಾವುದು ಮಿಥ್ಯೆ ಆಗಿಲ್ಲವೋ ಅದು ದೃಶ್ಯವಾಗಿಲ್ಲ. ಉದಾ - ಬ್ರಹ್ಮ. ಬ್ರಹ್ಮನು (ಸತ್ಯನಾದ್ದರಿಂದ) ಮಿಥ್ಯೆ ಆಗಿಲ್ಲ. ಅಂತೆಯೇ ಅವನು ದೃಶ್ಯನೂ ಆಗಿಲ್ಲ.

ಎಂಬುದಾಗಿ ದೃಶ್ಯತ್ವಾನುಮಾನದಲ್ಲಿ ವ್ಯತಿರೇಕವ್ಯಾಪ್ತಿಯನ್ನೂ ತೋರಿಸಬೇಕಿತ್ತು.

ಆದರೂ ಅಕುಟಿಲವಾದ = ಕುಟಿಲವಲ್ಲದ, ವಕ್ರವಲ್ಲದ, ನೇರವಾದ ಅನ್ವಯವ್ಯಾಪ್ತಿಯು ಸಂಭವಿಸುವಾಗ ಕುಟಿಲವಾದ = ವಕ್ರವಾದ ವ್ಯತಿರೇಕವ್ಯಾಪ್ತಿಯು ಆದರಣೀಯವಲ್ಲ ಎಂಬುದನ್ನು ಸೂಚಿಸುವುದಕ್ಕಾಗಿ ''ಯತ್ ಇತ್ಥಂ ತತ್ ತಥಾ'' ಎಂಬುದಾಗಿ ಅನ್ವಯವ್ಯಾಪ್ತಿಯನ್ನು ಮಾತ್ರ ತೋರಿಸಿದ್ದಾರೆ.

**ಆದರ ಅಭಿಪ್ರಾಯ :-** ಅನ್ವಯವ್ಯಾಪ್ತಿ-ವ್ಯತಿರೇಕವ್ಯಾಪ್ತಿಗಳಲ್ಲಿ ಅನ್ವಯವ್ಯಾಪ್ತಿಯು ನೇರವಾಗಿ ಸಾಧ್ಯಸಿದ್ಧಿಗೆ ಅಂಗವಾಗಿದೆ.

**ಪರ್ವತೋ ವಹ್ನಿಮಾನ್ ಧೂಮಾತ್**

ಎಂದು ಅನುಮಾನ ಮಾಡಿದಾಗ, 'ಯತ್ರ ಧೂಮಃ ತತ್ರ ವಹ್ನಿಃ' ಎಲ್ಲಿ ಧೂಮ ಇರುತ್ತದೆಯೋ ಅಲ್ಲಿ ವಹ್ನಿ ಇದ್ದೇ ಇರುತ್ತದೆ ಎಂಬುದಾಗಿ ಅನ್ವಯವ್ಯಾಪ್ತಿಯನ್ನು

ತೋರಿಸಿದಾಗ, ಪ್ರಕೃತ ಪಕ್ಷವಾದ ಪರ್ವತದಲ್ಲಿ ಧೂಮ ಇರುವುದರಿಂದ ವಹ್ನಿ (ಸಾಧ್ಯ) ಇದ್ದೇ ಇದೆ ಎಂದು ನಿಶ್ಚಯ ಮಾಡಿಕೊಳ್ಳುತ್ತೇವೆ. ಹೀಗೆ ಅನ್ವಯವ್ಯಾಪ್ತಿಯು ನೇರವಾಗಿ ಸಾಧ್ಯಸಿದ್ಧಿಗೆ ಅಂಗವಾಗಿದೆ. ಅಂತೆಯೇ ಅನ್ವಯವ್ಯಾಪ್ತಿಯನ್ನು ಅಕುಟಿಲ (ನೇರವಾದದ್ದು ವಕ್ರವಲ್ಲದ್ದು) ಎಂದು ಕರೆದರು.

ಆದರೆ 'ಯತ್ರ ವಹ್ನ್ಯಭಾವಃ ತತ್ರ ಧೂಮಾಭಾವಃ' ಎಲ್ಲಿ ವಹ್ನಿ ಇರುವುದಿಲ್ಲವೋ ಅಲ್ಲಿ ಧೂಮ ಇರುವುದಿಲ್ಲ ಎಂಬ ವ್ಯತಿರೇಕವ್ಯಾಪ್ತಿಯು ಪರ್ವತದಲ್ಲಿ ವಹ್ನಿ ಇದೆ ಎಂಬ ಸಾಧ್ಯಸಿದ್ಧಿಗೆ ನೇರವಾಗಿ ಅಂಗವಾಗುವುದಿಲ್ಲ. ಕಿಂತು

**ಧೂಮಃ ವಹ್ನಿವ್ಯಾಪ್ಯಃ ತದನ್ವಯವ್ಯತಿರೇಕಾನುವಿಧಾಯಿತ್ವಾತ್**
**(ವಹ್ನ್ಯಭಾವವ್ಯಾಪಕಧೂಮಾಭಾವಪ್ರತಿಯೋಗಿತ್ವಾತ್ )।**

**ಯಃ ಯದಭಾವವ್ಯಾಪಕಾಭಾವಪ್ರತಿಯೋಗೀ ಸ ತೇನ ವ್ಯಾಪ್ಯಃ।**
**ಯಥಾ ಕಾರ್ಯತ್ವಂ ಸಕರ್ತೃಕತ್ವೇನ।**

'ಯತ್ರ ವಹ್ನ್ಯಭಾವಃ ತತ್ರ ಧೂಮಾಭಾವಃ' ಎಂದು ವ್ಯಾಪ್ತಿ ಇರುವುದರಿಂದ ವಹ್ನ್ಯಭಾವಕ್ಕೆ ಧೂಮಾಭಾವ ವ್ಯಾಪಕವಾಗಿದೆ. ಧೂಮವು ಅಂತಹ ವಹ್ನ್ಯಭಾವಕ್ಕೆ ವ್ಯಾಪಕವಾದ ಧೂಮಾಭಾವಕ್ಕೆ ಪ್ರತಿಯೋಗಿಯಾಗಿದ್ದರಿಂದ ಧೂಮವು ವಹ್ನಿಯಿಂದ ವ್ಯಾಪ್ಯವಾಗಿದೆ.

ಈ ರೀತಿಯಾಗಿ ವ್ಯತಿರೇಕವ್ಯಾಪ್ತಿಯಿಂದ ಅನ್ವಯವ್ಯಾಪ್ತಿಯನ್ನು ಸಾಧಿಸಿಕೊಂಡು (ವ್ಯತಿರೇಕವ್ಯಾಪ್ತಿ ಇದೆ ಎಂದಮೇಲೆ ಅನ್ವಯವ್ಯಾಪ್ತಿ ಇದ್ದೇ ಇದೆ ಎಂದು ಸಾಧಿಸಿಕೊಂಡು) ಆ ಅನ್ವಯವ್ಯಾಪ್ತಿಯಿಂದ ಮುಂದೆ ಸಾಧ್ಯವನ್ನು ಸಾಧಿಸುತ್ತೇವೆ. ಹೀಗಾಗಿ ವ್ಯತಿರೇಕವ್ಯಾಪ್ತಿಯು ನೇರವಾಗಿ ಸಾಧ್ಯಸಿದ್ಧಿಗೆ ಅಂಗವಾಗುವುದಿಲ್ಲ. ಅಂತೆಯೇ ಅದನ್ನು ಕುಟಿಲ (ವಕ್ರ) ಎಂದು ಕರೆದರು.

ಹೀಗೆ ಅಕುಟಿಲ - ಕುಟಿಲಗಳಲ್ಲಿ ಅಕುಟಿಲವಾದ (ನೇರವಾದ) ಅನ್ವಯವ್ಯಾಪ್ತಿ ಹೇಳಲು ಬರುವಾಗ ಕುಟಿಲವಾದ (ವಕ್ರವಾದ) ವ್ಯತಿರೇಕವ್ಯಾಪ್ತಿಯು ಆದರಣೀಯವಲ್ಲ. ಈ ದೃಷ್ಟಿಯಿಂದ ವ್ಯತಿರೇಕವ್ಯಾಪ್ತಿ ಇದ್ದರೂ ಅದನ್ನು ಹೇಳದೇ (ಆದರಿಸದೇ)

**ಯತ್ ಇತ್ಥಂ ತತ್ ತಥಾ। ಯಥಾ ಸಂಪ್ರತಿಪನ್ನಮ್।**

ಎಂಬುದಾಗಿ ಅನ್ವಯವ್ಯಾಪ್ತಿಯನ್ನು ಮಾತ್ರ ಹೇಳಿದ್ದಾರೆ ಎಂದು ಅಭಿಪ್ರಾಯ.

**ಟೀಕಾ :- ಯತ್ತದಿತಿ ಸಾಧಾರಣಪ್ರಯೋಗಾದೇವ ಸರ್ವೋಪಸಂಹಾರಸಿದ್ಧೇಃ ದ್ವಿರ್ವಚನಾಭಾವೋ ನ ದೋಷಾಯ । ಗೌರ್ನ ಪದಾ ಸ್ಪ್ರಷ್ಟವ್ಯಾ ಇತಿವತ್ ।**

**ಅನುವಾದ :-** ಸರ್ವೋಪಸಂಹಾರೇಣ (ಒಂದನ್ನೂ ಬಿಡದೇ ಎಲ್ಲವನ್ನೂ ಸಂಗ್ರಹಿಸಿ) ವ್ಯಾಪ್ತಿಗ್ರಹಣ ಮಾಡಬೇಕಾದ್ದರಿಂದ

**ಯತ್ ಯತ್ ಇತ್ಥಂ ತತ್ ತತ್ ತಥಾ**

ಎಂಬುದಾಗಿ ಯತ್-ತತ್ ಶಬ್ದಗಳ ದ್ವಿರ್ವಚನರೂಪವಾದ ವೀಪ್ಸಾ ಹೇಳಬೇಕಲ್ಲವೇ ? ಪ್ರಕೃತದಲ್ಲಿ 'ಯತ್ ಇತ್ಥಂ ತತ್ ತಥಾ' ಎಂಬುದಾಗಿ ಯತ್-ತತ್ ಶಬ್ದಗಳನ್ನು ಒಂದು ಬಾರಿ ಮಾತ್ರ ಉಚ್ಚರಿಸಿರುತ್ತಿರುವುದರಿಂದ ಸರ್ವೋಪಸಂಹಾರೇಣ ವ್ಯಾಪ್ತಿಗ್ರಹಣ ಹೇಗೆ ಆಗುವುದು ? ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಸಮಾಧಾನ ಹೇಳುತ್ತಾರೆ -

'ಯತ್ ತತ್' ಎಂಬುದಾಗಿ ಸರ್ವಸಂಗ್ರಾಹಕವಾದ ಸಾಧಾರಣಪ್ರಯೋಗದಿಂದಲೇನೇ ಸರ್ವೋಪಸಂಹಾರವು ಸಿದ್ಧಿಸುವುದರಿಂದ, ದ್ವಿರ್ವಚನ ಇಲ್ಲ (ಎರಡುಬಾರಿ ಹೇಳಿಲ್ಲ) ಎನ್ನುವುದು ದೋಷವಾಗುವುದಿಲ್ಲ.

'ಯತ್ ತತ್' ಎಂಬುದಾಗಿ ಒಂದುಬಾರಿ ಸಾಧಾರಣಪ್ರಯೋಗದಿಂದ ಸರ್ವೋಪಸಂಹಾರ ಆಗುತ್ತದೆಯೇ ? ಹಾಗೆ ಕಂಡಿದೆಯೇ ? ಎಂದರೆ, ಅದಕ್ಕೆ ಪ್ರಸಿದ್ಧ ದೃಷ್ಟಾಂತವನ್ನು ತೋರಿಸುತ್ತಾರೆ -

**ಯಾ ಗೌಃ ಸಾ ನ ಪದಾ ಸ್ಪ್ರಷ್ಟವ್ಯಾ**

ಎಂದು ಪ್ರಯೋಗಿಸುತ್ತಾರೆ. ಇಲ್ಲಿ ''ಯಾ ಯಾ ಗೌಃ ಸಾ ಸಾ ನ ಪದಾ ಸ್ಪ್ರಷ್ಟವ್ಯಾ'' ಎಂಬುದಾಗಿ ದ್ವಿರ್ವಚನ ಇಲ್ಲ. ಆದರೂ ಸಹ ಯಾವ ಆಕಳನ್ನೂ ಕಾಲಿನಿಂದ ಸ್ಪರ್ಶಿಸಬಾರದು ಎಂದು ಸರ್ವೋಪಸಂಹಾರವು (ಎಲ್ಲ ಗೋಗಳಿಗೂ ಪದಾ ಅಸ್ಪ್ರಷ್ಟವ್ಯತ್ವವು) ಸಿದ್ಧಿಸುತ್ತದೆ.

ಅದರಂತೆಯೇ ಪ್ರಕೃತದಲ್ಲಿಯೂ 'ಯತ್ ಇತ್ಥಂ ತತ್ ತಥಾ' ಎಂದು ಹೇಳಿದಾಗ ದ್ವಿರ್ವಚನ ಇಲ್ಲದಿದ್ದರೂ ಸರ್ವೋಪಸಂಹಾರವು (ದೃಶ್ಯವಾದ ಎಲ್ಲ

ವಸ್ತುಗಳಿಗೂ ಮಿಥ್ಯಾತ್ವವು) ಸಿದ್ಧಿಸುತ್ತದೆ. ಆದ್ದರಿಂದ ದ್ವಿರ್ವಚನ ಇಲ್ಲದಿರುವುದು ಯಾವುದೇ ದೋಷವಾಗುವುದಿಲ್ಲ ಎಂದು ಅಭಿಪ್ರಾಯ.

**ಟೀಕಾ :- ಸಂಪ್ರತಿಪನ್ನಂ ದೃಶ್ಯತ್ವಮಿಥ್ಯಾತ್ವವತ್ತಯೇತಿ ಶೇಷಃ । ಸಂಪ್ರತಿಪನ್ನಗ್ರಹಣೇನ ಸಾಧ್ಯವಿಕಲತ್ವಾದಿದೃಷ್ಟಾಂತದೋಷನಿರಾಸೋಽಪಿ ಕೃತಃ ಸ್ಯಾದಿತಿ ಶುಕ್ತಿರಜತಮಿತ್ಯೇವ ನೋಕ್ತಮ್ ।**

**ಅನುವಾದ :-** ಇಲ್ಲಿ ಅನುಮಾನದಲ್ಲಿ 'ಯಥಾ ಸಂಪ್ರತಿಪನ್ನಂ' ಎಂಬುದಾಗಿ ದೃಷ್ಟಾಂತ ಹೇಳಿದ್ದಾರೆ. ಸಂಪ್ರತಿಪನ್ನ ಎಂದರೆ ಸಂಪ್ರತಿಪತ್ತಿಗೆ ವಿಷಯವಾದದ್ದು (ಒಪ್ಪಲ್ಪಟ್ಟದ್ದು, ಅಂಗೀಕಾರವಿಷಯವಾದದ್ದು) ಎಂದು ಅರ್ಥ. ಏನೆಂದು ಸಂಪ್ರತಿಪನ್ನವಾದದ್ದು ? ಎಂದರೆ,

**ದೃಶ್ಯತ್ವಮಿಥ್ಯಾತ್ವವತ್ತಯಾ ಸಂಪ್ರತಿಪನ್ನಂ**

ದೃಶ್ಯತ್ವ-ಮಿಥ್ಯಾತ್ವಗಳು ಇವೆ ಎಂಬುದಾಗಿ ಸಂಪ್ರತಿಪನ್ನವಾದದ್ದು ಎಂದರ್ಥ. ದೃಷ್ಟಾಂತವಾದ ಶುಕ್ತಿರಜತದಲ್ಲಿ ಸಾಧನವಾದ ದೃಶ್ಯತ್ವ ಇದೆ, ಸಾಧ್ಯವಾದ ಮಿಥ್ಯಾತ್ವವೂ ಇದೆ ಎಂಬುದಾಗಿ ಇಬ್ಬರು ವಾದಿಗಳೂ ಅಂಗೀಕರಿಸಿದ್ದರಿಂದ ಶುಕ್ತಿರಜತವು ದೃಶ್ಯತ್ವ-ಮಿಥ್ಯಾತ್ವಗಳುಳ್ಳದ್ದಾಗಿ ಸಂಪ್ರತಿಪನ್ನವಾಗಿದೆ. ಹೀಗಾಗಿ ಸಂಪ್ರತಿಪನ್ನವಾದ ಶಕ್ತಿರಜತವನ್ನು ದೃಷ್ಟಾಂತ ಮಾಡಿದ್ದಾರೆ.

ಹೌದು, ಶುಕ್ತಿರಜತವನ್ನು ದೃಷ್ಟಾಂತ ಮಾಡುವುದಾಗಿದ್ದರೆ 'ಯಥಾ ಶುಕ್ತಿರಜತಂ' ಎಂದೇ ಹೇಳಬಹುದಿತ್ತಲ್ಲ ? ಶುಕ್ತಿರಜತಂ ಎಂಬುದಾಗಿ ಸ್ಪಷ್ಟವಾಗಿ ಹೇಳುವುದು ಬಿಟ್ಟು, 'ಯಥಾ ಸಂಪ್ರತಿಪನ್ನಂ' ಎಂದು ಏಕೆ ಹೇಳಿದರು ?

ಈ ಪ್ರಶ್ನೆಗೆ ಈ ರೀತಿಯಾಗಿ ಸಮಾಧಾನ ಹೇಳುತ್ತಾರೆ - ಸಂಪ್ರತಿಪನ್ನ ಎಂದು ಹೇಳುವುದರಿಂದ ಸಾಧ್ಯವೈಕಲ್ಯ ಮೊದಲಾದ ದೃಷ್ಟಾಂತದೋಷಗಳ ನಿರಾಕರಣೆಯೂ ಮಾಡಿದಂತಾಗುತ್ತದೆ. ಆ ಕಾರಣ 'ಯಥಾ ಶುಕ್ತಿರಜತಂ' ಎಂದೇ ಹೇಳದೇ 'ಯಥಾ ಸಂಪ್ರತಿಪನ್ನಂ' ಎಂದು ಹೇಳಿದ್ದಾರೆ.

**ವಿವರಣೆ :-** ಶುಕ್ತಿರಜತವನ್ನೇ ದೃಷ್ಟಾಂತ ಮಾಡುವ ಉದ್ದೇಶವಿದ್ದರೆ 'ಯಥಾ ಶುಕ್ತಿರಜತಂ' ಎಂದೇ ಹೇಳಬಹುದಾಗಿತ್ತು. 'ಯಥಾ ಸಂಪ್ರತಿಪನ್ನಂ' ಎಂದು ಸಂಪ್ರತಿಪನ್ನ ಶಬ್ದವನ್ನು ಏಕೆ ಪ್ರಯೋಗಿಸಿದರು ?

ನಿಜವೇ, ಶುಕ್ತಿರಜತವನ್ನೇ ದೃಷ್ಟಾಂತ ಮಾಡುವ ಉದ್ದೇಶವಿದೆ. ಆದರೆ ಪ್ರಕೃತದಲ್ಲಿ ಅಷ್ಟು ಮಾತ್ರವೇ ಉದ್ದೇಶವಲ್ಲ. ಕಿಂತು ಸಾಧ್ಯವೈಕಲ್ಯ-ಸಾಧನವೈಕಲ್ಯ-ಆಶ್ರಯವೈಕಲ್ಯ ಎಂಬ ದೃಷ್ಟಾಂತದೋಷಗಳ ನಿರಾಕರಣೆಯೂ ಆಗಬೇಕಿದೆ. ಅದು ಸಂಪ್ರತಿಪನ್ನ ಶಬ್ದಪ್ರಯೋಗ ಮಾಡಿದಾಗ ಮಾತ್ರ ಸಾಧ್ಯ. ಹೇಗೆಂದರೆ -

**ಸಂಪ್ರತಿಪನ್ನ ಶಬ್ದಪ್ರಯೋಗದಿಂದ ಸಾಧ್ಯ-ಸಾಧನವೈಕಲ್ಯ ದೋಷಗಳ ನಿರಾಕರಣೆ**

'ಯಥಾ ಸಂಪ್ರತಿಪನ್ನಂ' ಎಂದು ಹೇಳದೇ ಕೇವಲ 'ಯಥಾ ಶುಕ್ತಿರಜತಂ' ಎಂದಷ್ಟೇ ಹೇಳಿದ್ದರೆ, ಆಗ ದೃಷ್ಟಾಂತವಾದ ಶುಕ್ತಿರಜತದಲ್ಲಿ ಸಾಧ್ಯವಾದ ಮಿಥ್ಯಾತ್ವ ಇಲ್ಲವಾದ್ದರಿಂದ ಸಾಧ್ಯವೈಕಲ್ಯ ಮತ್ತು ಸಾಧನವಾದ ದೃಶ್ಯತ್ವ ಇಲ್ಲವಾದ್ದರಿಂದ ಸಾಧನವೈಕಲ್ಯದೋಷ ಬರುತ್ತದೆ ಎಂಬುದಾಗಿ ಸಾಧ್ಯವೈಕಲ್ಯ-ಸಾಧನವೈಕಲ್ಯ ದೋಷಗಳನ್ನು ಶಂಕಿಸಲು ಅವಕಾಶವಿರುತ್ತಿತ್ತು. ಆದರೆ ಕೇವಲ 'ಯಥಾ ಶುಕ್ತಿರಜತಂ' ಎಂದಷ್ಟೇ ಹೇಳದೇ 'ಯಥಾ ಸಂಪ್ರತಿಪನ್ನಂ' ಎಂದು ಸಂಪ್ರತಿಪನ್ನಶಬ್ದವನ್ನು ಪ್ರಯೋಗಿಸಿದ್ದರಿಂದ ಸಾಧ್ಯವೈಕಲ್ಯ-ಸಾಧನವೈಕಲ್ಯ ದೋಷಗಳ ಶಂಕೆಗೆ ಅವಕಾಶವಿಲ್ಲ.

ಅದು ಹೇಗೆಂದರೆ :-

**ಯದಿ ಶುಕ್ತಿರಜತೇ ಸಾಧ್ಯಸಾಧನಧರ್ಮೌ ನ ಸ್ಯಾತಾಂ ತದಾ**
**ಕಿಂಧರ್ಮವತ್ತಯಾ ತತ್ರ ಸಂಪ್ರತಿಪತ್ತಿಃ ಸ್ಯಾತ್ ।**

ಶುಕ್ತಿರಜತವು ಸಂಪ್ರತಿಪನ್ನವಾಗಿದೆ. ಏನೆಂದು ಸಂಪ್ರತಿಪನ್ನವಾಗಿದೆ ? ಸಾಧ್ಯ-ಸಾಧನಗಳು ಅಲ್ಲಿ ಇವೆ ಎಂದು ಸಂಪ್ರತಿಪನ್ನವಾಗಿದೆ. ಹಾಗಾದರೆ ಒಂದುವೇಳೆ ದೃಷ್ಟಾಂತವಾದ ಶುಕ್ತಿರಜತದಲ್ಲಿ ಸಾಧ್ಯ-ಸಾಧನಧರ್ಮಗಳು ಇಲ್ಲ ಎಂದಾಗಿದ್ದರೆ ಆಗ ಯಾವ ಧರ್ಮ ಉಳ್ಳದ್ದಾಗಿ ಅಲ್ಲಿ ಸಂಪ್ರತಿಪತ್ತಿ ಇರುತ್ತಿತ್ತು ? ಸಂಪ್ರತಿಪತ್ತಿಯೇ ಕೂಡದೇ ಹೋಗಬೇಕಾಗುತ್ತದೆ. ಈಗಲಾದರೋ ಸಂಪ್ರತಿಪತ್ತಿ ಇದೆ ಎಂದಮೇಲೆ ಶುಕ್ತಿರಜತದಲ್ಲಿ (ಸಾಧ್ಯ-ಸಾಧನಧರ್ಮಗಳು ಇವೆ ಎಂದು ಒಪ್ಪಿದಂತಾಗಿ) ಸಾಧ್ಯ-ಸಾಧನಧರ್ಮಗಳು ಇಲ್ಲ ಎಂದು ಶಂಕಿಸಲು ಅವಕಾಶವೇ ಇಲ್ಲ ಎಂದಾಗುತ್ತದೆ. ಆದ್ದರಿಂದ ಸಂಪ್ರತಿಪನ್ನ ಶಬ್ದಪ್ರಯೋಗದಿಂದ ಸಾಧ್ಯವೈಕಲ್ಯ-ಸಾಧನವೈಕಲ್ಯ ದೋಷಗಳ ನಿರಾಕರಣೆ ಎಂಬ ಪ್ರಯೋಜನವೂ ಇದೆಯಾದ್ದರಿಂದ 'ಯಥಾ ಸಂಪ್ರತಿಪನ್ನಂ' ಎಂದು ಹೇಳಿದ್ದು ಸಮಂಜಸವೇ ಆಗಿದೆ.

**ಸಂಪ್ರತಿಪನ್ನ ಶಬ್ದಪ್ರಯೋಗದಿಂದ ಆಶ್ರಯವೈಕಲ್ಯ ದೋಷನಿರಾಕರಣೆ**

ಮತ್ತು ಅದೇ ರೀತಿಯಾಗಿ 'ಯಥಾ ಸಂಪ್ರತಿಪನ್ನಂ' ಎಂದು ಹೇಳದೇ ಕೇವಲ 'ಯಥಾ ಶುಕ್ತಿರಜತಂ' ಎಂದಷ್ಟೇ ಹೇಳಿದ್ದರೆ ಆಗ ದೃಷ್ಟಾಂತವಾದ ಶುಕ್ತಿರಜತವೇ ಇಲ್ಲವಾದ್ದರಿಂದ ಆಶ್ರಯವೈಕಲ್ಯ (ದೃಷ್ಟಾಂತಾಸಿದ್ಧಿ) ದೋಷ ಬರುತ್ತದೆ ಎಂಬುದಾಗಿ ಆಶ್ರಯವೈಕಲ್ಯದೋಷವನ್ನು ಶಂಕಿಸಲು ಅವಕಾಶವಿರುತ್ತಿತ್ತು. ಆದರೆ ಕೇವಲ 'ಯಥಾ ಶುಕ್ತಿರಜತಂ' ಎಂದಷ್ಟೇ ಹೇಳದೇ 'ಯಥಾ ಸಂಪ್ರತಿಪನ್ನಂ' ಎಂಬುದಾಗಿ ಸಂಪ್ರತಿಪನ್ನ ಶಬ್ದವನ್ನು ಪ್ರಯೋಗಿಸಿದ್ದರಿಂದ ಆಶ್ರಯವೈಕಲ್ಯದೋಷದ ಶಂಕೆಗೆ ಅವಕಾಶವಿಲ್ಲ. ಅದು ಹೇಗೆಂದರೆ -

**ಯದಿ ಶುಕ್ತಿರಜತಮೇವ ನ ಸ್ಯಾತ್ ತದಾ ಸಾಧ್ಯಸಾಧನಧರ್ಮಯೋಃ ಕುತ್ರ ಸಂಪ್ರತಿಪತ್ತಿಃ ಸ್ಯಾತ್ ।**

ಶುಕ್ತಿರಜತವು ಸಂಪ್ರತಿಪನ್ನವಾಗಿದೆ. ಏನೆಂದು ಸಂಪ್ರತಿಪನ್ನವಾಗಿದೆ ? ಸಾಧ್ಯ-ಸಾಧನಗಳಿಗೆ ಅಧಿಕರಣವಾಗಿದೆ ಎಂದು ಸಂಪ್ರತಿಪನ್ನವಾಗಿದೆ. ಹಾಗಾದರೆ ಒಂದುವೇಳೆ ದೃಷ್ಟಾಂತವಾದ ಶುಕ್ತಿರಜತವೇ ಇಲ್ಲ ಎಂದಾಗಿದ್ದರೆ ಆಗ ಎಲ್ಲಿ (ಯಾವ ಅಧಿಕರಣದಲ್ಲಿ) ಸಂಪ್ರತಿಪತ್ತಿ ಇರುತ್ತಿತ್ತು ? ಸಂಪ್ರತಿಪತ್ತಿಯೇ ಕೂಡದೇ ಹೋಗಬೇಕಾಗುತ್ತದೆ. ಈಗಲಾದರೋ ಸಂಪ್ರತಿಪತ್ತಿ ಇದೆ ಎಂದಮೇಲೆ 'ಶುಕ್ತಿರಜತವೇ ಇಲ್ಲ' ಎಂದು ಶಂಕಿಸಲು ಅವಕಾಶವೇ ಇಲ್ಲ ಎಂದಾಗುತ್ತದೆ. ಆದ್ದರಿಂದ ಸಂಪ್ರತಿಪನ್ನ ಶಬ್ದಪ್ರಯೋಗದಿಂದ ಆಶ್ರಯವೈಕಲ್ಯ ದೋಷದ ನಿರಾಕರಣೆ ಎಂಬ ಪ್ರಯೋಜನವೂ ಇದೆಯಾದ್ದರಿಂದ 'ಯಥಾ ಸಂಪ್ರತಿಪನ್ನಂ' ಎಂದು ಹೇಳಿದ್ದು ಸಮಂಜಸವೇ ಆಗಿದೆ.

ಈ ರೀತಿಯಾಗಿ ಶುಕ್ತಿರಜತವನ್ನು ದೃಷ್ಟಾಂತ ಮಾಡುವ ಉದ್ದೇಶವಷ್ಟೇ ಅಲ್ಲದೇ ಸಾಧ್ಯವೈಕಲ್ಯ-ಸಾಧ್ಯನವೈಕಲ್ಯ-ಆಶ್ರಯವೈಕಲ್ಯ ದೋಷಗಳ ನಿರಾಕರಣೆ ಎಂಬ ಪ್ರಯೋಜನವೂ ಹಿನ್ನಲೆಯಲ್ಲಿ ಇರುವುದರಿಂದ 'ಸಂಪ್ರತಿಪನ್ನ'ಶಬ್ದಪ್ರಯೋಗವು ಸಮಂಜಸವಾಗಿದೆ ಎಂದು ಅಭಿಪ್ರಾಯ.

**ಟೀಕಾ :- ಯದ್ಯಪಿ ಪರೇಣ ಸ್ವಗ್ರಂಥೇ ಪಂಚಾವಯವಪ್ರಯೋಗೋಽಸ್ಯ ವಿಹಿತ ಇತಿ ತಥೈವಾನುವಾದೋ ಯುಕ್ತಃ । ತಥಾಽಪ್ಯುಪನಯನಿಗಮ-ನಯೋರಸಾಧನಾಂಗತ್ವಾದನುವಾದಾರ್ಹತಾಽಪಿ ನಾಸ್ತೀತಿ ಸೂಚಯಿತುಂ**

**ತ್ರ್ಯವಯವಾನುವಾದಃ । ತಚ್ಚಾನ್ಯತ್ರೋಪಪಾದಿತಮ್ । ಏವಂ ಚಾನುವದತೈವ ಅಧಿಕಂ ನಾಮ ನಿಗ್ರಹಸ್ಥಾನಮಪಿ ಸೂಚಿತಂ ಭವತಿ ।**

**ಅನುವಾದ ಃ-** 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬ ಅನುಮಾನವು ಜಗತ್ತಿನ ಮಿಥ್ಯಾತ್ವವಿಷಯದಲ್ಲಿ ಪರವಾದಿಗಳು ಉದಾಹರಿಸುವ ಅನುಮಾನವಾಗಿದೆ. ಅದನ್ನು ಆಚಾರ್ಯರು ಅನುವಾದ ಮಾಡುತ್ತಿದ್ದಾರೆ. ಹಾಗಾಗಿ ಪರವಾದಿಗಳು ಅನುಮಾನವನ್ನು ಹೇಗೆ ಉದಾಹರಿಸಿದ್ದಾರೆಯೋ ಅದೇ ರೀತಿಯಾಗಿ ಆಚಾರ್ಯರು ಅನುವಾದ ಮಾಡಬೇಕು. ಪರವಾದಿಗಳು ತಮ್ಮ ಗ್ರಂಥದಲ್ಲಿ ಪಂಚಾವಯವಸಹಿತವಾಗಿ ಈ ಅನುಮಾನವನ್ನು ಉದಾಹರಿಸಿರುವುದರಿಂದ ಅದನ್ನು ಅನುವಾದಿಸುವಾಗ ಪ್ರಕೃತ ಈ ಗ್ರಂಥದಲ್ಲಿ ಪಂಚಾವಯವಸಹಿತವಾಗಿಯೇ ಈ ಅನುಮಾನವನ್ನು ಆಚಾರ್ಯರು ಅನುವಾದಿಸಬೇಕಿತ್ತು. ಅಂದರೆ -

''ವಿಮತಂ ಮಿಥ್ಯಾ ದೃಶ್ಯತ್ವಾತ್ ಯದಿತ್ಥಂ ತತ್ತಥಾ ಯಥಾ ಸಂಪ್ರತಿಪನ್ನಂ'' ಎಂಬುದಾಗಿ ಹೇಳಿದ ಮೂರು ಅವಯವಗಳ ಜೊತೆಗೆ

**ತಥಾ ಚೇದಂ ದೃಶ್ಯಮ್ (ಉಪನಯ)**
**ತಸ್ಮಾತ್ ಮಿಥ್ಯಾ (ನಿಗಮನ)**

ಎಂಬ ಉಪನಯ-ನಿಗಮನ ರೂಪವಾದ ಇನ್ನೆರಡು ಅವಯವಗಳ ಅನುವಾದವನ್ನೂ ಆಚಾರ್ಯರು ಮಾಡಬೇಕಿತ್ತು. ಆದರೆ ಆಚಾರ್ಯರು ಪರವಾದಿಗಳು ಉದಾಹರಿಸಿದಂತೆ ಪಂಚಾವಯವಗಳಿಂದ ಸಹಿತವಾಗಿ ಅನುಮಾನವನ್ನು ಅನುವಾದಿಸದೇ ಉಪನಯ-ನಿಗಮನಗಳನ್ನು ಬಿಟ್ಟು, ಕೇವಲ ಮೂರು ಅವಯವಗಳಿಂದ ಸಹಿತವಾದ ಅನುಮಾನವನ್ನು ಮಾತ್ರ ಏಕೆ ಅನುವಾದಿಸಿದರು ? (ಉಪನಯ-ನಿಗಮನಗಳನ್ನು ಏಕೆ ಹೇಳಲಿಲ್ಲ ?)

ಅದಕ್ಕೆ ಟೀಕಾಕೃತ್ಪಾದರು ಈ ರೀತಿ ಸಮಾಧಾನ ಹೇಳುತ್ತಾರೆ -

ಪ್ರತಿಜ್ಞಾ, ಹೇತು, ಉದಾಹರಣ ಈ ಮೂರು ಅವಯವಗಳು ಸಾಧನಾಂಗವಾಗಿರುವಂತೆ ಉಪನಯ-ನಿಗಮನಗಳು ಸಾಧನಾಂಗವಾಗಿಲ್ಲ. ಉಪನಯವಾಕ್ಯವು ಹೇತುವಾಕ್ಯದಿಂದ ಗತಾರ್ಥವಾದ್ದರಿಂದ, ನಿಗಮನವು ಪ್ರತಿಜ್ಞಾ ವಾಕ್ಯದಿಂದ ಗತಾರ್ಥವಾದ್ದರಿಂದ ಈ ಎರಡು ಸಾಧನಾಂಗವಾಗಿಲ್ಲ. ಇದನ್ನು (ಉಪನಯ-

ನಿಗಮನಗಳು ಸಾಧನಾಂಗವಲ್ಲ ಎನ್ನುವುದನ್ನು) ಅನ್ಯತ್ರ = ವಿಷ್ಣುತತ್ತ್ವನಿರ್ಣಯಾದಿ ಗ್ರಂಥಗಳಲ್ಲಿ ಉಪಪಾದನೆ ಮಾಡಲಾಗಿದೆ. ಹೀಗೆ ಉಪನಯ-ನಿಗಮನಗಳು ಸಾಧನಾಂಗವಾಗಿಲ್ಲವಾದ್ದರಿಂದ ಅನುವಾದ ಮಾಡಲೂ ಅರ್ಹವಲ್ಲ ಎಂಬುದನ್ನು ಸೂಚಿಸುವುದಕ್ಕಾಗಿ ಆಚಾರ್ಯರು ಮೂರು ಅವಯವಗಳ ಅನುಮಾನವನ್ನೇ ಅನುವಾದ ಮಾಡಿದ್ದಾರೆ.

**ತ್ರೀನುದಾಹರಣಾಂತಾನ್ ವಾ ಯದ್ವೋದಾಹರಣಾದಿಕಾನ್ ।**
**ಮೀಮಾಂಸಕಾಃ ...........**

ಎಂಬ ಕಾರಿಕೆಯಂತೆ ಮೀಮಾಂಸಕರು ಅವಯವತ್ರಯನಿಯಮವನ್ನು ಅಂಗೀಕರಿಸಿದವರು. (ಮೂರು ಅವಯವಗಳು ಸಾಕು, ಐದು ಅವಯವಗಳು ಬೇಕಿಲ್ಲ ಎಂದು ಹೇಳುವವರು.) ಪ್ರಕೃತ ಮಾಯಾವಾದಿಗಳು ''ವ್ಯವಹಾರೇ ಭಟ್ಟನಯಃ'' ಎಂದು ಅಂಗೀಕರಿಸಿದ್ದರಿಂದ ಮೂರು ಅವಯವಗಳ ಅನುಮಾನವು ಮೀಮಾಂಸಕರಂತೆ ಮಾಯಾವಾದಿಗಳಿಗೂ ಸಮ್ಮತವೇ ಆಗಿದೆ. ಆದ್ದರಿಂದ ಆಚಾರ್ಯರು ಪಂಚಾವಯವಸಹಿತ ಅನುಮಾನವನ್ನು ಹೇಳದಿರುವುದು (ಅನುಪಪನ್ನ ಅಲ್ಲ) ಸಮಂಜಸವೇ ಆಗಿದೆ ಎಂದು ಅಭಿಪ್ರಾಯ.

ಮಾಯಾವಾದಿಗಳು ತಮ್ಮ ಗ್ರಂಥದಲ್ಲಿ ಪಂಚಾವಯವಪ್ರಯೋಗ ಮಾಡಿದ್ದರೂ ಸಹ ಮೂರು ಅವಯವಗಳನ್ನು ಮಾತ್ರ ಅನುವಾದ ಮಾಡುವ ಮೂಲಕ ಆಚಾರ್ಯರು ಅಧಿಕ ಎಂಬ ನಿಗ್ರಹಸ್ಥಾನವನ್ನೂ ಸೂಚಿಸುತ್ತಿದ್ದಾರೆ.

ಮೂರು ಅವಯವಗಳ ನಿಯಮವನ್ನು ಅಂಗೀಕರಿಸಿದವರು ಮೀಮಾಂಸಕರು. ಅಂತಹ ಮೀಮಾಂಸಕರ ನ್ಯಾಯವನ್ನು ಅಳವಡಿಸಿಕೊಂಡು, ''ವ್ಯವಹಾರೇ ಭಟ್ಟನಯಃ'' ಎಂದು ಹೇಳಿಸಿಕೊಂಡ ಮಾಯಾವಾದಿಗಳು ಆ ಮೂಲಕ ಮೂರು ಅವಯವಗಳ ನಿಯಮವನ್ನು ತಾವೂ ಅಂಗೀಕರಿಸಿ, ಮತ್ತೆ ಪಂಚಾವಯವಪ್ರಯೋಗ ಮಾಡಿದರೆ ಆಧಿಕ್ಯ ಬಂದು ಅಧಿಕ ಎಂಬ ನಿಗ್ರಹಸ್ಥಾನ ಮತ್ತು ಅಪಸಿದ್ಧಾಂತ (ಮೂರು ಅವಯವಗಳ ನಿಯಮವನ್ನು ಅಂಗೀಕರಿಸಿದ ಪೂರ್ವಜರ ವಿರುದ್ಧವಾಗಿ ಪಂಚಾವಯವವಾಕ್ಯಪ್ರಯೋಗ ಮಾಡಿದರೆ ಸಿದ್ಧಾಂತವಿರೋಧ) ಎಂಬ ಎರಡು ದೋಷಗಳು ಮಾಯಾವಾದಿಗಳಿಗೆ ಬರುತ್ತವೆ ಎಂಬುದನ್ನು ಆಚಾರ್ಯರು ಸೂಚಿಸುತ್ತಿದ್ದಾರೆ.




**ಟೀಕಾ :- ಏವಮನೂದಿತಮನುಮಾನಂ ದೂಷಯಿಷ್ಯನ್ ಪ್ರಥಮಪ್ರಾಪ್ತತ್ವಾತ್ ಪ್ರತಿಜ್ಞಾಶ್ರಯಂ ದೋಷಮಾಹ -**

**ಮೂಲ :- ಇತ್ಯುಕ್ತೇ ಜಗತೋಽಭಾವಾದಾಶ್ರಯಾಸಿದ್ಧಃ ಪಕ್ಷಃ ।**

**ಇತಿ ಮಾಯಾವಾದಿನೋಕ್ತೇ ವಕ್ತವ್ಯಮಿತಿ ಶೇಷಃ । ಅಗ್ನ್ಯಾಹಿತಾದಿವತ್ ಅಸಿದ್ಧ ಆಶ್ರಯೋ ಯಸ್ಯಾಸಾವಾಶ್ರಯಾಸಿದ್ಧಃ । ಪಕ್ಷ ಇತಿ ತದೇಕದೇಶಸ್ಸಾಧ್ಯಧರ್ಮೋ ಲಕ್ಷ್ಯತೇ । ಅಥ ವಾ ಸಪ್ತಮ್ಯರ್ಥೇ ಬಹುವ್ರೀಹಿರಿತಿ ಮುಖ್ಯಾರ್ಥ ಏವ ಪಕ್ಷಶಬ್ದಃ ।**

**ಅನುವಾದ :-** ಈ ರೀತಿಯಾಗಿ ಅನುವಾದ ಮಾಡಿದ ಪ್ರಪಂಚಮಿಥ್ಯಾತ್ವಾನುಮಾನವನ್ನು ಆಚಾರ್ಯರು ನಿರಾಕರಿಸುವವರಾಗಿ, ಪ್ರಥಮಪ್ರಾಪ್ತವಾದದ್ದರಿಂದ ಪ್ರತಿಜ್ಞೆಗೆ ಸಂಬಂಧಿಸಿದ ದೋಷವನ್ನು ಮೊದಲಿಗೆ ಹೇಳುತ್ತಾರೆ -

**ಮೂಲ :-** ಇತ್ಯುಕ್ತೇ ಜಗತೋಽಭಾವಾತ್ ಆಶ್ರಯಾಸಿದ್ಧಃ ಪಕ್ಷಃ ।

**ಮೂಲಾರ್ಥ :-** ಈ ರೀತಿಯಾಗಿ ಮಾಯಾವಾದಿಗಳು ಹೇಳಿದರೆ, ಜಗತ್ತು ಇಲ್ಲವಾದ್ದರಿಂದ (ಜಗತ್ತು ಇಲ್ಲ ಎಂದು ಹೇಳುವುದರಿಂದ) ಪಕ್ಷವು ಆಶ್ರಯಾಸಿದ್ಧವಾಗುತ್ತದೆ.

ಮೂಲದಲ್ಲಿ 'ಇತ್ಯುಕ್ತೇ ಪಕ್ಷಃ (ಆಶ್ರಯಾಸಿದ್ಧಃ)' ಎನ್ನುವುದು ಅನನ್ವಿತವಾಗುತ್ತದೆ. ಆದಕ್ಕಾಗಿ (ಅನ್ವಯ ತೋರಿಸುವುದಕ್ಕಾಗಿ)

**ಇತಿ ಮಾಯಾವಾದಿನೋಕ್ತೇ ವಕ್ತವ್ಯಮಿತಿ ಶೇಷಃ ।**

ಎಂಬುದಾಗಿ ವಕ್ತವ್ಯಂ ಎನ್ನುವುದನ್ನು ಶೇಷ ಮಾಡಿಕೊಳ್ಳಬೇಕೆಂದು ಟೀಕಾಕೃತ್ಪಾದರು ತಿಳಿಸುತ್ತಿದ್ದಾರೆ. ಹಾಗಾದರೆ -

**''ಇತ್ಯುಕ್ತೇ ಜಗತೋಽಭಾವಾತ್ ಆಶ್ರಯಾಸಿದ್ಧಃ ಪಕ್ಷ ಇತಿ ವಕ್ತವ್ಯಂ''**

ಎಂಬುದಾಗಿ ಇತಿ ಶಬ್ದವನ್ನು ಅನುವರ್ತನ ಮಾಡಿಕೊಂಡು (ವಕ್ತವ್ಯಂ ಪದದ ಜೊತೆಗೆ) ಯೋಜನೆ ಮಾಡಿಕೊಳ್ಳಬೇಕು.

ಅಸಿದ್ಧ ಶಬ್ದವು ನಿಷ್ಠಾಪ್ರತ್ಯಯಾಂತವಾಗಿದೆ. ನಿಷ್ಠಾಪ್ರತ್ಯಯಾಂತವಾದ ಶಬ್ದಕ್ಕೆ ''ನಿಷ್ಠಾ'' ಎಂಬ ಸೂತ್ರದಿಂದ ಪೂರ್ವನಿಪಾತವು ವಿಹಿತವಾಗಿದೆ. ಅಂತೆಯೇ 'ಕೃತಕಟಃ ಪುಮಾನ್' ಎನ್ನುವಲ್ಲಿ (ಕೃತಃ ಕಟಃ ಯೇನ ಸಃ ಕೃತಕಟಃ) ಕೃತಶಬ್ದವು ನಿಷ್ಠಾಪ್ರತ್ಯಯಾಂತವಾಗಿದ್ದರಿಂದ ಪೂರ್ವನಿಪಾತವಾಗಿದೆ. (ಕೃತಶಬ್ದವು ಮೊದಲು ಬಂದು ಕೃತಕಟಃ ಎಂದಾಗಿದೆ ಹೊರತು ಕಟಕೃತಃ ಎಂದು ಆಗಿಲ್ಲ.) ಪ್ರಕೃತದಲ್ಲಿ ಕೃತಶಬ್ದದಂತೆ ಅಸಿದ್ಧಶಬ್ದವೂ ನಿಷ್ಠಾಪ್ರತ್ಯಯಾಂತವಾದ ಶಬ್ದವಾಗಿದ್ದರಿಂದ ಅಸಿದ್ಧಶಬ್ದವೂ ಪೂರ್ವನಿಪಾತವಾಗಬೇಕು. 'ಅಸಿದ್ಧಃ ಆಶ್ರಯಃ ಯಸ್ಯ ಸಃ ಅಸಿದ್ಧಾಶ್ರಯಃ' ಎಂದು ಆಗಬೇಕು. 'ಆಶ್ರಯಾಸಿದ್ಧಃ' ಎಂದು ಹೇಗೆ ಹೇಳಿದರು ಆಚಾರ್ಯರು ?

ಈ ಪ್ರಶ್ನೆಗೆ ಟೀಕಾಕೃತ್ಪಾದರು 'ಅಗ್ನ್ಯಾಹಿತಾದಿವತ್' ಎಂಬುದಾಗಿ ಸಮಾಧಾನ ಹೇಳುತ್ತಿದ್ದಾರೆ.

ಅಂದರೆ :- 'ಆಹಿತಾಗ್ನಿಃ' ಎನ್ನುವಲ್ಲಿ 'ಆಹಿತಃ ಅಗ್ನಿಃ ಯೇನ ಸಃ ಆಹಿತಾಗ್ನಿಃ' ಎಂದೇ ಆಗಬೇಕು. (ಹಿಂದೆ ಉದಾಹರಿಸಿದ ನಿಷ್ಠಾ ಎಂಬ ಸೂತ್ರದಲ್ಲಿ ನಿಷ್ಠಾಪ್ರತ್ಯಯಾಂತವಾದ ಶಬ್ದಕ್ಕೆ ಪೂರ್ವನಿಪಾತ ಹೇಳಿದ್ದರಿಂದ ಆಹಿತಶಬ್ದವು ಮೊದಲು ಬಂದು ಆಹಿತಾಗ್ನಿಃ ಎಂದೇ ಆಗಬೇಕು.) ಆದರೆ

**''ವಾऽಹಿತಾಗ್ನ್ಯಾದಿಷು ''**

ಎಂಬ ಸೂತ್ರದಲ್ಲಿ ಆಹಿತಾದಿಶಬ್ದಗಳಿಗೆ ಅಗ್ನ್ಯಾದಿ(ಶಬ್ದ)ಸಂಬಂಧವಾದಾಗ ಪರನಿಪಾತವನ್ನೂ ಹೇಳಿದ್ದಾರೆ. ಇದು ಆಕೃತಿಗಣವಾಗಿದೆ. ಹೀಗಾಗಿ ಅಸಿದ್ಧಶಬ್ದಕ್ಕೆ ಪರನಿಪಾತವು ಈ ಸೂತ್ರದಲ್ಲಿ ವಿಹಿತವಾಗಿದೆ.

ಆದ್ದರಿಂದ 'ಆಹಿತಃ ಅಗ್ನಿಃ ಯೇನ ಸಃ' ಎನ್ನುವಲ್ಲಿ ಆಹಿತಶಬ್ದಕ್ಕೆ ಪರನಿಪಾತವಾಗಿ 'ಅಗ್ನ್ಯಾಹಿತಃ' ಎಂದು ಆಗುವಂತೆ, 'ಅಸಿದ್ಧಃ ಆಶ್ರಯಃ ಯಸ್ಯ ಸಃ' ಎನ್ನುವಲ್ಲಿಯೂ ಅಸಿದ್ಧಶಬ್ದಕ್ಕೆ ಪರನಿಪಾತವಾಗಿ 'ಆಶ್ರಯಾಸಿದ್ಧಃ' ಎಂದು ರೂಪವಾಗುವುದು ಯುಕ್ತವೇ ಆಗಿದೆ. ಆದ್ದರಿಂದ ಆಚಾರ್ಯರ ಪ್ರಯೋಗ ಅನುಪಪನ್ನ ಅಲ್ಲ ಎಂದು ಅಭಿಪ್ರಾಯ.




**ಪಕ್ಷಕ್ಕೆ ಆಶ್ರಯವಾದ್ದದ್ದರ ಅಸಿದ್ಧಿ ದೋಷವೇ ?**

'ಆಶ್ರಯಾಸಿದ್ಧಃ ಪಕ್ಷಃ' ಎಂಬುದಾಗಿ ಆಚಾರ್ಯರು ಪಕ್ಷಕ್ಕೆ ಆಶ್ರಯವಾದದ್ದು ಅಸಿದ್ಧ ಎಂದು ಹೇಳುತ್ತಿದ್ದಾರೆ. ಆದರೆ ಇದು ಸರಿಯಲ್ಲ. ಏಕೆಂದರೆ -

**'ಸಾಧ್ಯಧರ್ಮವಿಶಿಷ್ಟಃ ಧರ್ಮೀ ಪಕ್ಷಃ'**

ಎಂದು ಹೇಳಿದಂತೆ, ವಿಶೇಷಣವಾದ ಸಾಧ್ಯಧರ್ಮಕ್ಕೆ ಯಾವ ಧರ್ಮಿಯು ಆಶ್ರಯವಾಗಿದೆಯೋ ಅದರ ಅಸಿದ್ಧಿಯು ದೋಷವಾಗುತ್ತದೆ. ಹೊರತು ಸಾಧ್ಯಧರ್ಮವಿಶಿಷ್ಟಧರ್ಮಿರೂಪವಾದ ಪಕ್ಷಕ್ಕೆ ಯಾವುದು ಆಶ್ರಯವೋ ಅದರ ಅಸಿದ್ಧಿ ದೋಷವಲ್ಲ. ಅಂದಮೇಲೆ ''ಆಶ್ರಯಾಸಿದ್ಧಃ ಪಕ್ಷಃ'' ಎಂಬುದಾಗಿ (ಪಕ್ಷಕ್ಕೆ ಆಶ್ರಯವಾದದ್ದು ಅಸಿದ್ಧ ಎಂಬುದಾಗಿ) ಆಚಾರ್ಯರು ಹೇಗೆ ಹೇಳಿದರು ?

ಈ ಪ್ರಶ್ನೆಗೆ ಟೀಕಾಕೃತ್ಪಾದರು ಎರಡು ರೀತಿಯಲ್ಲಿ ಸಮಾಧಾನ ಹೇಳುತ್ತಾರೆ.

**ರೀತಿ 1) ಪಕ್ಷ ಎಂದರೆ ಸಾಧ್ಯಧರ್ಮ ಎಂದು ಲಕ್ಷಣಯಾ ಅರ್ಥ**

ಸಾಧ್ಯಧರ್ಮವಿಶಿಷ್ಟವಾದ ಧರ್ಮೀ ಎನ್ನುವುದು ಪಕ್ಷಶಬ್ದದ ಮುಖ್ಯಾರ್ಥವಾಗಿದೆ. ಅದರಲ್ಲಿ ಸಾಧ್ಯಧರ್ಮ ಎಂಬ ಏಕದೇಶವನ್ನು ಮಾತ್ರ ಲಕ್ಷಣಾವೃತ್ತಿಯಿಂದ ಪಕ್ಷಶಬ್ದದ ಅರ್ಥವನ್ನಾಗಿ ವಿವಕ್ಷಿಸುತ್ತೇವೆ. (ಪಕ್ಷಶಬ್ದಕ್ಕೆ ಲಕ್ಷಣಯಾ ಸಾಧ್ಯಧರ್ಮ ಎಂದಷ್ಟೇ ಅರ್ಥ.) ಹಾಗಾದರೆ -

''ಪಕ್ಷಃ = ಸಾಧ್ಯಧರ್ಮವು ಆಶ್ರಯಾಸಿದ್ಧಃ = ಅಸಿದ್ಧವಾದ ಆಶ್ರಯ ಉಳ್ಳದ್ದಾಗಿದೆ. (ಸಾಧ್ಯಧರ್ಮಕ್ಕೆ ಯಾವುದು ಆಶ್ರಯವೋ ಅದು ಅಸಿದ್ಧವಾಗಿದೆ)'' ಎಂಬುದಾಗಿ ಮೂಲಾರ್ಥವಾಗುತ್ತದೆ. ಹೀಗಾಗಿ ಯಾವ ಅನುಪಪತ್ತಿಯೂ ಇಲ್ಲ.

**ರೀತಿ 2) ಸಪ್ತಮ್ಯರ್ಥದಲ್ಲಿ ಬಹುವ್ರೀಹಿ**

ಆಶ್ರಯಾಸಿದ್ಧಃ ಎನ್ನುವಲ್ಲಿ ''ಅಸಿದ್ಧಃ ಆಶ್ರಯಃ ಯಸ್ಯ ಸಃ'' ಎಂದು ವಿಗ್ರಹ ವಿವಕ್ಷಿತವಲ್ಲ. ಕಿಂತು ''ಅಸಿದ್ಧಃ ಆಶ್ರಯಃ ಯಸ್ಮಿನ್ ಸಃ'' ಎಂಬುದಾಗಿ ಸಪ್ತಮ್ಯರ್ಥದಲ್ಲಿ ಬಹುವ್ರೀಹಿಯು ವಿವಕ್ಷಿತವಾಗಿದೆ.

ಹಾಗಾದರೆ - ಪಕ್ಷ ಎಂದರೆ ಸಾಧ್ಯಧರ್ಮವಿಶಿಷ್ಟವಾದ ಧರ್ಮಿ ಎಂಬ ಮುಖ್ಯಾರ್ಥವೇ ವಿವಕ್ಷಿತ. ಇಂತಹ ಪಕ್ಷವು ಆಶ್ರಯಾಸಿದ್ಧವಾಗಿದೆ ಎಂದರೆ ಪಕ್ಷಶಬ್ದಾರ್ಥದಲ್ಲಿ ಯಾವ ಆಶ್ರಯಭಾಗವಿದೆಯೋ ಅದು ಅಸಿದ್ಧವಾಗಿದೆ

(ಪಕ್ಷಶಬ್ದಾರ್ಥದಲ್ಲಿ ಸಾಧ್ಯಧರ್ಮವು ವಿಶೇಷಣವಾಗಿದೆ, ಧರ್ಮಿಯು ಆಶ್ರಯಭಾಗವಾಗಿದೆ. ಅಂತಹ ಆಶ್ರಯಭಾಗವಾದ ಧರ್ಮಿಯು ಅಸಿದ್ಧವಾಗಿದೆ) ಎಂಬುದಾಗಿ ಮೂಲಾರ್ಥ ವಿವಕ್ಷಿತ. ಆದ್ದರಿಂದ ಈ ಪಕ್ಷದಲ್ಲಿ ಧರ್ಮಿಯ ಅಸಿದ್ಧಿಯನ್ನೇ ಹೇಳಿದಂತಾಗುವುದರಿಂದ ಯಾವ ಅನುಪಪತ್ತಿಯೂ ಇಲ್ಲ ಎಂದು ಅಭಿಪ್ರಾಯ.

**ಟೀಕಾ :- 'ಉಕ್ತೇ' ಇತ್ಯನೇನೋಕ್ತಿನಿಮಿತ್ತಮಿದಂ ದೂಷಣಮಿತಿ ಸೂಚಯತಾ 'ಅನುಕ್ತೋಪಾಲಂಭೋಽಯಂ ಪರೇಣ ಪ್ರಪಂಚಾಸತ್ವಸ್ಯಾಸಾಧನಾತ್' ಇತಿ ನಿರಸ್ತಂ ಭವತಿ ।**

**ಅನುವಾದ :-** 'ಆಶ್ರಯಾಸಿದ್ಧಃ ಪಕ್ಷಃ' ಎಂಬುದಾಗಿ ಮಾಯಾವಾದಿಗಳಿಗೆ ಆಶ್ರಯಾಸಿದ್ಧಿ ದೋಷವನ್ನು ಹೇಳುವುದು ಸರಿಯಾಗುವುದಿಲ್ಲ. ಏಕೆಂದರೆ - ಹೀಗೆ ನೀವು ಹೇಳುವುದು ಅನುಕ್ತೋಪಾಲಂಭ ಆಗುತ್ತದೆ. ಅಂದರೆ, ಮಾಯಾವಾದಿಗಳು ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳುತ್ತಾರೆ. ಪ್ರಪಂಚಕ್ಕೆ ಅವರು ಹೇಳುವ ಮಿಥ್ಯಾತ್ವ ಎಂದರೆ ಅಸತ್ವ ಎಂದು ಅರ್ಥವಲ್ಲ. (ಅಸತ್ವ ಎಂದು ಅರ್ಥ ಹೇಳಿದ್ದರೆ, ಜಗತ್ತೇ ಇಲ್ಲ ಎಂದು ಹೇಳಿದಂತಾಗಿ ಆಶ್ರಯಾಸಿದ್ಧಿ ಹೇಳುವುದು ಸರಿಯಾಗುತ್ತಿತ್ತು.) ಕಿಂತು ಅವರು ಹೇಳುವ ಮಿಥ್ಯಾತ್ವ ಎಂದರೆ ಅನಿರ್ವಚನೀಯತ್ವ (ವ್ಯಾವಹಾರಿಕಸತ್ವ) ಎಂದು ಅರ್ಥ. ಅಂದಮೇಲೆ ಜಗತ್ತನ್ನು ಅವರು ಮಿಥ್ಯಾ = ಅನಿರ್ವಚನೀಯ (ವ್ಯಾವಹಾರಿಕಸತ್) ಎಂದು ಹೇಳುವಾಗ, ''ಜಗತ್ತೇ ಇಲ್ಲ ಎಂದು ಹೇಳುತ್ತೀರಿ. ನಿಮ್ಮ ಅನುಮಾನಕ್ಕೆ ಆಶ್ರಯಾಸಿದ್ಧಿ ಬರುತ್ತದೆ'' ಎಂದು ಹೇಳಿದರೆ ಅದು ಅನುಕ್ತೋಪಾಲಂಭ ಆಗುವುದಲ್ಲವೇ?

ಈ ವಿಧವಾದ ಶಂಕೆಯನ್ನು ಪರಿಹರಿಸುವುದಕ್ಕಾಗಿಯೇ ಆಚಾರ್ಯರು 'ಆಶ್ರಯಾಸಿದ್ಧಃ ಪಕ್ಷಃ' ಎಂದಷ್ಟೇ ಹೇಳಬೇಕಿದ್ದಾಗ 'ಇತ್ಯುಕ್ತೇ' ಎಂಬುದಾಗಿ ಹೇಳಿದರು.

ಅದರ ಅಭಿಪ್ರಾಯ :- ಜಗತ್ತು ಮಿಥ್ಯೆಯಾಗಿದೆ ಎನ್ನುವಲ್ಲಿ ಮಿಥ್ಯಾ ಎನ್ನುವುದಕ್ಕೆ ಅಸತ್ ಎಂಬ ಅರ್ಥವನ್ನು ಪರರು ಹೇಳುವುದಾದರೆ ಆಗ ''ಆಶ್ರಯಾಸಿದ್ಧಃ ಪಕ್ಷಃ'' ಎಂಬುದಾಗಿ ಆಶ್ರಯಾಸಿದ್ಧಿ ದೋಷವನ್ನು ಹೇಳುತ್ತೇವೆ. ಇನ್ನು ಮಿಥ್ಯಾ ಎನ್ನುವುದಕ್ಕೆ ಅನಿರ್ವಚನೀಯ ಎಂದು ಅರ್ಥ ಹೇಳುವುದಾದರೆ ಆಗ ಬೇರೆ ದೋಷವನ್ನು




ಹೇಳುತ್ತೇವೆ. ಈ ರೀತಿಯಾಗಿ 'ಇತ್ಯುಕ್ತೇ' ಎನ್ನುವುದರಿಂದ ಉಕ್ತಿನಿಮಿತ್ತಕವಾಗಿದೆ ದೋಷ ಎಂಬುದನ್ನು ಸೂಚಿಸುತ್ತಾ ಅನುಕ್ತೋಪಾಲಂಭದೋಷವನ್ನು ನಿರಾಕರಿಸುತ್ತಿದ್ದಾರೆ ಆಚಾರ್ಯರು.

**ಅವತಾರಿಕೆ:-** ''ಇತ್ಯುಕ್ತೇ ಜಗತೋಽಭಾವಾತ್ ಆಶ್ರಯಾಸಿದ್ಧಃ ಪಕ್ಷಃ'' ಎಂಬ ವಾಕ್ಯದಿಂದ ''ಪಕ್ಷಃ ಆಶ್ರಯಸಿದ್ಧೋ ಭವಿತುಮರ್ಹತಿ ಜಗತೋಽಭಾವಾತ್'' ಎಂಬುದಾಗಿ ಆಚಾರ್ಯರು ಸಾಧನಾನುಮಾನವನ್ನು ಹೇಳುತ್ತಿದ್ದಾರೆ ಎಂದು (ಭ್ರಾಂತರಾಗಿ) ತಪ್ಪು ತಿಳಿದು ಶಂಕಿಸುತ್ತಾರೆ :-

**ಟೀಕಾ :- ನನು 'ಜಗತೋಽಭಾವಾತ್ ಇತಿ ಹೇತುಃ ಸಿದ್ಧಶ್ಚೇತ್ ಸಿದ್ಧಂ ಪರಸ್ಯಾಭಿಮತಮ್ । ಕಿಮಪ್ರಸಿದ್ಧವಿಶೇಷ್ಯತಾ ಕರಿಷ್ಯತಿ ? ಅಸಿದ್ಧಶ್ಚೇತ್ತಥಾಽಪಿ । ಅಸಿದ್ಧಾಶ್ರಯತ್ವಸಾಧಕಾಭಾವಾತ್ । ಮೈವಮ್ । ಯದಿ ಜಗದಭಾವೋಽತ್ರ ಸಾಧ್ಯತೇ ತದಾ ಜಗತೋಽಭಾವಾತ್ ಸಾಧ್ಯಧರ್ಮಸ್ಯ ಆಶ್ರಯಾಸಿದ್ಧಿಃ ಸ್ಯಾತ್ । ತತಶ್ಚ ವಿಶೇಷ್ಯಾಭಾವಾದ್ವಿಶಿಷ್ಟಾಭಾವಃ ಇತಿ ಪ್ರತಿಜ್ಞಾರ್ಥೋ ಬಾಧಿತಃ ಸ್ಯಾತ್ ಇತ್ಯೇವಂ ಪರಾಂಗೀಕೃತೇನ ಪರಸ್ಯ ದೋಷೋದ್ಭಾವನಾತ್ ।**

**ಅನುವಾದ:-** 'ಪಕ್ಷಃ ಆಶ್ರಯಾಸಿದ್ಧೋ ಭವಿತುಮರ್ಹತಿ ಜಗತೋಽಭಾವಾತ್' ಎಂಬುದಾಗಿ ಅನುಮಾನ ಮಾಡುವುದು ಸರಿಯಲ್ಲ. ಏಕೆಂದರೆ, ಈ ಅನುಮಾನದಲ್ಲಿ ಹೇಳಲ್ಪಟ್ಟ 'ಜಗತೋಽಭಾವಾತ್' ಎಂಬ ಹೇತುವು ಸಿದ್ಧವಾಗಿದೆಯೋ ? ಸಿದ್ಧವಾಗಿಲ್ಲವೋ ?

ಜಗತೋಽಭಾವಾತ್ ಎಂಬ ಹೇತು ಸಿದ್ಧವಾಗಿದೆ ಎನ್ನುವುದಾದರೆ 'ಜಗತ್ತು ಇಲ್ಲ' ಎನ್ನುವುದನ್ನು ನೀವೇ ಅಂಗೀಕರಿಸಿದಂತಾಗುವುದರಿಂದ ಪರರಿಗೆ (ಮಾಯಾವಾದಿಗಳಿಗೆ) ಅಭಿಪ್ರೇತವಾದ ಜಗನ್ಮಿಥ್ಯಾತ್ವವು ಸಿದ್ಧವಾದಂತೆ ಆಯಿತು.

ಇನ್ನು ಜಗತೋಽಭಾವಾತ್ ಎಂಬ ಹೇತು ಸಿದ್ಧವಾಗಿಲ್ಲ ಎನ್ನುವುದಾದರೆ, ಹೇತುವೇ ಸಿದ್ಧವಾಗಿಲ್ಲವಾದರೆ ನಿಮ್ಮ ಅನುಮಾನವೇ ದುಷ್ಟವಾದಂತಾಯಿತು. ನೀವು ಮಾಡಿದ ಅನುಮಾನ ದುಷ್ಟವಾದರೆ, ನಮ್ಮ ಅನುಮಾನಕ್ಕೆ ಆಶ್ರಯಾಸಿದ್ಧಿಯನ್ನು ಸಾಧಿಸುವ ಪ್ರಮಾಣ ಯಾವುದೂ ಇಲ್ಲದಂತಾಗಿ, ನಮ್ಮ ದೃಶ್ಯತ್ವಾನುಮಾನವು ಸದನುಮಾನವಾಯಿತು. ಅಂತಹ ದೃಶ್ಯತ್ವಾನುಮಾನದಿಂದ ಜಗನ್ಮಿಥ್ಯಾತ್ವವು ಸಿದ್ಧವಾಗುತ್ತದೆ.

ಹೀಗೆ ಸಿದ್ಧವಾಗಿದೆ ಸಿದ್ಧವಾಗಿಲ್ಲ ಎಂಬ ಎರಡು ಪಕ್ಷಗಳಲ್ಲಿಯೂ ಜಗನ್ಮಿಥ್ಯಾತ್ವವೇ ನಿಶ್ಚಿತವಾಗುತ್ತದೆ. 'ಉಭಯತಃ ಪಾಶಾ ರಜ್ಜುಃ' ಎಂಬ ಸ್ಥಿತಿ ನಮಗೆ ಬರುತ್ತದೆಯಲ್ಲವೇ ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ, ನಮ್ಮ ಅಭಿಪ್ರಾಯ ನಿಮಗೆ ಸರಿಯಾಗಿ ತಿಳಿದಿಲ್ಲ.

**'ಪಕ್ಷಃ ಆಶ್ರಿಯಾಸಿದ್ಧೋ ಭವಿತುಮರ್ಹತಿ ಜಗತೋಽಭಾವಾತ್'**

ಎಂಬುದಾಗಿ ಸಾಧನಾನುಮಾನ ಮಾಡುತ್ತಿಲ್ಲ ಆಚಾರ್ಯರು. ಕಿಂತು ದೂಷಣಾನುಮಾನ ಮಾಡುತ್ತಿದ್ದಾರೆ. ತರ್ಕರೂಪದಲ್ಲಿ ಬಾಧಕ ಹೇಳುತ್ತಿದ್ದಾರೆ.

ಹೇಗೆಂದರೆ - ಒಂದುವೇಳೆ 'ವಿಮತಂ ಮಿಥ್ಯಾ' ಎಂಬುದಾಗಿ ಜಗತ್ತಿನ ಅಭಾವವನ್ನು ನೀವು ಸಾಧಿಸುವುದಾದರೆ, ಆಗ ಧರ್ಮಿಯಾದ ಜಗತ್ತೇ ಇಲ್ಲವಾದ್ದರಿಂದ ಮಿಥ್ಯಾತ್ವರೂಪ ಸಾಧ್ಯಧರ್ಮಕ್ಕೆ ಆಶ್ರಯವೇ ಅಸಿದ್ಧವಾಗುತ್ತದೆ ಅರ್ಥಾತ್ ಆಶ್ರಯಾಸಿದ್ಧಿ ಬರುತ್ತದೆ.

ಯಾವಾಗ ವಿಶೇಷ್ಯವಾದ (ಧರ್ಮಿಯಾದ) ಜಗತ್ತು ಇಲ್ಲ ಎಂದಾಗುವುದೋ ಆಗ 'ವಿಶೇಷ್ಯಾಭಾವಾತ್ ವಿಶಿಷ್ಟಾಭಾವಃ' ಎಂಬ ನ್ಯಾಯದಿಂದ ಸಾಧ್ಯಧರ್ಮ-ವಿಶಿಷ್ಟಧರ್ಮಿ ಇಲ್ಲವೆಂದಾಗಿ ಪ್ರತಿಜ್ಞಾರ್ಥವು ಬಾಧಿತವಾಗುತ್ತದೆ.

ಸಾಧ್ಯಧರ್ಮವಿಶಿಷ್ಟಧರ್ಮಿವಚನವು ಪ್ರತಿಜ್ಞೆ ಎನಿಸುತ್ತದೆ. ವಿಶೇಷ್ಯವಾದ ಧರ್ಮಿಯಲ್ಲಿ ಸಾಧ್ಯಧರ್ಮವು ಇರಬೇಕು. ಆದರೆ ಪ್ರಕೃತದಲ್ಲಿ ವಿಶೇಷ್ಯವಾದ ಧರ್ಮಿ ಜಗತ್ತೇ ಇಲ್ಲ ಎಂದು ನೀವೇ ಅಂಗೀಕರಿಸಿದ್ದರಿಂದ, ವಿಶೇಷ್ಯದಲ್ಲಿ ಸಾಧ್ಯಧರ್ಮ ಬಾರದ ಕಾರಣ ಪ್ರತಿಜ್ಞಾರ್ಥವು ಬಾಧಿತವಾಗುತ್ತದೆ ಎಂದು ತರ್ಕದ ಅಭಿಪ್ರಾಯ.

ಈ ರೀತಿಯಾಗಿ ಪರರು ಅಂಗೀಕರಿಸಿದ ಜಗದಭಾವವನ್ನು ಇಟ್ಟುಕೊಂಡೇ ಪರರಿಗೆ ದೋಷ ಹೇಳುತ್ತಿರುವುದರಿಂದ, ''ಹೇತು ಸಿದ್ಧವಾಗಿದೆ ಸಿದ್ಧವಾಗಿಲ್ಲ ಎಂಬ ಎರಡೂ ಪಕ್ಷಗಳಲ್ಲಿಯೂ ಪರಾಭಿಮತಸಿದ್ಧಿ (ಉಭಯತಃ ಪಾಶಾ ರಜ್ಜುಃ ಎನ್ನುವ ಸ್ಥಿತಿ) ಎಂಬ ಶಂಕೆ ಸರಿಯಲ್ಲ ಎಂದು ಭಾವ.

**ಟೀಕಾ :- ಮಿಥ್ಯಾಶಬ್ದೇನ ಕಿಮಸದುಚ್ಯತೇ ? ಉತಾನ್ಯತ್ ಕಿಮಪಿ ? ಇತಿ ವಿಕಲ್ಪೇನೋಪಕ್ರಮಾನ್ನ ಛಲಪ್ರಸಂಗಃ । ಶಿಷ್ಯಾಣಾಂ ಕಥಾಕ್ರಮಶಿಕ್ಷಣಾರ್ಥಂ ವಿಕಲ್ಪಃ ।**

**ಅನುವಾದ :-** ಪರರು ಮಿಥ್ಯಾಶಬ್ದಕ್ಕೆ ಅನಿರ್ವಚನೀಯ ಎಂಬ ಅರ್ಥವನ್ನು ವಿವಕ್ಷಿಸಿದ್ದಾರೆ. ಅಸತ್ ಎಂಬ ಅರ್ಥವನ್ನು ವಿವಕ್ಷಿಸಿಲ್ಲ. ಅಂದಮೇಲೆ ಅನಿರ್ವಚನೀಯ ಎಂಬ ಯಾವ ಅರ್ಥ ವಿವಕ್ಷಿತವಾಗಿದೆ ಅಂತಹ ವಿವಕ್ಷಿತಪಕ್ಷಕ್ಕೆ ನೀವು ದೋಷ ಹೇಳಬೇಕು. ಆದರೆ ಅಸತ್ ಎಂಬ ವಿವಕ್ಷಿತವಲ್ಲದ ಅರ್ಥಪಕ್ಷದಲ್ಲಿ ಆಶ್ರಯಾಸಿದ್ಧಿ ಎಂಬ ದೋಷ ಹೇಳುತ್ತಿದ್ದೀರಿ. ಹೀಗೆ ವಿವಕ್ಷಿತಪಕ್ಷವನ್ನು ಬಿಟ್ಟು ಅವಿವಕ್ಷಿತ ಪಕ್ಷಕ್ಕೆ ಆಶ್ರಯಾಸಿದ್ಧಿ ದೋಷ ಹೇಳಿದರೆ ಛಲಪ್ರಸಂಗ ಬರುತ್ತದೆ ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಟೀಕಾಕೃತ್ಪಾದರು ಸಮಾಧಾನ ಹೇಳುತ್ತಾರೆ :-

ಮಿಥ್ಯಾಶಬ್ದಕ್ಕೆ ಅಸತ್ ಎಂದು ಅರ್ಥ ಹೇಳುತ್ತೀರೋ ? ಅಥವಾ ಅನಿರ್ವಚನೀಯ ಮೊದಲಾಗಿ ಬೇರೆ ಅರ್ಥ ಹೇಳುತ್ತೀರೋ ? ಎಂಬುದಾಗಿ ವಿಕಲ್ಪ ಮಾಡಿ, ಅಸತ್ ಎಂಬ ಅರ್ಥ ಹೇಳುವ ಪಕ್ಷದಲ್ಲಿ ಆಶ್ರಯಾಸಿದ್ಧಿದೋಷ ಹೇಳಿದ್ದರಿಂದ ಛಲಪ್ರಸಂಗ ಬರುವುದಿಲ್ಲ ಎಂದು ಭಾವ.

ಹೌದು, ಪರರಿಗೆ ಯಾವ ಪಕ್ಷವು ಅಭಿಪ್ರೇತವಾಗಿದೆ ಆ ಪಕ್ಷವನ್ನೇ ನೇರವಾಗಿ ದೋಷ ಹೇಳಿ ನಿರಾಕರಣೆ ಮಾಡಬೇಕು. ಹಾಗೆ ಮಾಡದೇ, ವಿಕಲ್ಪ ಮಾಡಿ, ಅನಭಿಪ್ರೇತವಾದ ಪಕ್ಷವನ್ನು ಏಕೆ ನಿರಾಕರಣೆ ಮಾಡುತ್ತೀರಿ ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ, ಶಿಷ್ಯರಿಗೆ ಕಥಾಕ್ರಮದ ಶಿಕ್ಷಣ ನೀಡುವುದಕ್ಕಾಗಿ ವಿಕಲ್ಪ ಮಾಡಿಕೊಂಡು ನಿರಾಕರಣೆ ಮಾಡುವುದು ಅತ್ಯಂತ ಸೂಕ್ತ.

ಅದರ ಅಭಿಪ್ರಾಯ :- ಶುಕ್ತಿರಜತಾದಿಗಳಿಗೆ ಮಿಥ್ಯಾತ್ವವು ಉಭಯವಾದಿಗಳಿಂದಲೂ ಅಂಗೀಕೃತವಾಗಿದೆ. ಶುಕ್ತಿರಜತಾದಿಗಳಿಗೆ ನಮ್ಮ ಪ್ರಕಾರ ಮಿಥ್ಯಾತ್ವ ಎಂದರೆ = ಅಸತ್ವ. ಪರವಾದಿಗಳ ಪ್ರಕಾರ ಮಿಥ್ಯಾತ್ವ ಎಂದರೆ = ಅನಿರ್ವಚನೀಯತ್ವ. ಹೀಗೆ ಎರಡು ರೀತಿಗಳಿರುವುದರಿಂದ, 'ವಿಮತಂ ಮಿಥ್ಯಾ' ಎಂಬುದಾಗಿ ಜಗತ್ತಿಗೆ ಮಿಥ್ಯಾತ್ವ ಹೇಳಿದಾಗ, ಅಲ್ಲಿ ಮಿಥ್ಯಾತ್ವ ಎಂದರೆ ಅಸತ್ವ ಎಂದು ಅರ್ಥವೋ ? ಅನಿರ್ವಚನೀಯತ್ವ ಎಂದು ಅರ್ಥವೋ ? ಎಂದು ವಿಕಲ್ಪ ಮಾಡುತ್ತಿರುವ (ವಿಕಲ್ಪ ಮಾಡಿಕೊಂಡು ದೋಷ ಹೇಳುತ್ತಿರುವ) ಆಚಾರ್ಯರು ಈ ಮೂಲಕ ನಮಗೆಲ್ಲ (ಶಿಷ್ಯರಿಗೆಲ್ಲ) ಒಂದು ವಿಷಯವನ್ನು ಸೂಚಿಸುತ್ತಿದ್ದಾರೆ.

ಅದೇನೆಂದರೆ :- ಚರ್ಚೆ-ವಾಕ್ಯಾರ್ಥ ಹೀಗೆ ಬೇರೆ ಬೇರೆ ಪ್ರಸಂಗಗಳಲ್ಲಿ ಕೆಲವರು ಸಾಮಾನ್ಯಶಬ್ದವನ್ನು ಪ್ರಯೋಗಿಸಿದಾಗ ಅಲ್ಲಿ ಎರಡು (ಅರ್ಥಗಳು)

ರೀತಿಗಳು ಸಂಭವಿಸುವಾಗ ಆಗ ವಿಕಲ್ಪಪೂರ್ವಕವಾಗಿಯೇ ದೋಷವನ್ನು ಹೇಳಬೇಕು. ಹಾಗೆ ಒಂದುವೇಳೆ ವಿಕಲ್ಪ ಮಾಡಿಕೊಳ್ಳದೇ ಪರರಿಗೆ ಅಭಿಪ್ರೇತವಾದ ಪಕ್ಷವನ್ನೇ ನೇರವಾಗಿ ದೋಷ ಹೇಳಿ ನಿರಾಕರಣೆ ಮಾಡಿದರೆ,

''ನಿಮ್ಮ ಪ್ರಕಾರ ನಾನು ಈ ಅರ್ಥವನ್ನು ಹೇಳಿದ್ದು, ಹೊರತು ಈ ಅರ್ಥ ನನಗೆ ಅಭಿಪ್ರೇತವಲ್ಲ. ಆದ್ದರಿಂದ ಅನುಕ್ತೋಪಾಲಂಭ ಬರುತ್ತದೆ''

ಎಂಬುದಾಗಿ ಪರರು ನಮ್ಮನ್ನು ಮೋಸ ಮಾಡಿಯಾರು ! ಅದೇ ವಿಕಲ್ಪ ಮಾಡಿಕೊಂಡು ಆ ಆ ಪಕ್ಷಕ್ಕೆ ಆ ಆ ದೋಷ ಹೇಳಿದರೆ ಈ ವಿಧವಾದ ಮೋಸಕ್ಕಾಗಲೀ, ಅನುಕ್ತೋಪಾಲಂಭಕ್ಕಾಗಲೀ ಅವಕಾಶವಿರುವುದಿಲ್ಲ.

ಆದ್ದರಿಂದ ಬೇರೆ ಸಂದರ್ಭಗಳಲ್ಲಿ ಪರರು ಸಾಮಾನ್ಯಶಬ್ದಗಳನ್ನು ಬಳಸಿದಾಗ, ಅನೇಕ (ಅರ್ಥಗಳು) ರೀತಿಗಳು ಅಲ್ಲಿ ಸಂಭವಿಸುವಾಗ, ವಿಕಲ್ಪ ಮಾಡಿಕೊಂಡೇ ಪರನಿರಾಕರಣೆ ಮಾಡಬೇಕು ಎಂಬುದಾಗಿ ಶಿಷ್ಯರಿಗೆ ವಾದಕಥಾಕ್ರಮದ ಶಿಕ್ಷಣ ನೀಡುತ್ತಿದ್ದಾರೆ ಈ ಮೂಲಕ ಆಚಾರ್ಯರು.

**ಅವತಾರಿಕೆ :-** ಈ ರೀತಿಯಾಗಿ 'ಜಗತೋಽಭಾವಾತ್' ಎನ್ನುವಲ್ಲಿ ಜಗತಃ ವಿಶ್ವಸ್ಯ ಅಭಾವಾತ್ ಎಂಬುದಾಗಿ ಪದವಿಭಾಗ ಮಾಡಿಕೊಂಡು (ಧರ್ಮಿಯಾದ ಜಗತ್ತೇ ಇಲ್ಲವಾದ್ದರಿಂದ ಆಶ್ರಯಾಸಿದ್ಧಿ ಬರುತ್ತದೆ ಎಂಬುದಾಗಿ ದೋಷ ಹೇಳಿದರು.) ಆಚಾರ್ಯರ ವಾಕ್ಯಕ್ಕೆ ವ್ಯಾಖ್ಯಾನ ಮಾಡಿದರು. ಈಗ ಜಗತಃ ಭಾವಾತ್ ಎಂಬುದಾಗಿ ಪದವಿಭಾಗ ಮಾಡಿಕೊಂಡು ಟೀಕಾಕೃತ್ಪಾದರು ವ್ಯಾಖ್ಯಾನ ಮಾಡುತ್ತಾರೆ -

**ಟೀಕಾ :- ಅಥವಾ ಜಗತೋಽಸತ್ವೇ ಪ್ರತಿಜ್ಞಾತೇ ಅಪಸಿದ್ಧಾಂತಮನೇನಾಚಷ್ಟೇ । ತಥಾ ಹಿ, ಪಕ್ಷಃ ಪ್ರತಿಜ್ಞಾರ್ಥಃ ಪ್ರಪಂಚಸ್ಯಾಸತ್ವಲಕ್ಷಣಃ । ಸ 'ಆಶ್ರಯಾಸಿದ್ಧಃ' ಆಶ್ರಯಃ ಸಿದ್ಧಾಂತಃ ತದಾಶ್ರಯೇಣ ಕಥಾಪ್ರವೃತ್ತೇಃ । ತಸ್ಮಿನ್ ಅಸಿದ್ಧಃ ತದ್ವಿರುದ್ಧ ಇತಿ ಯಾವತ್ । ಕುತಃ ? ಜಗತೋ ಭಾವಾತ್ ಭಾವತ್ವೇನ ಅಸದ್ವಿಲಕ್ಷಣತ್ವೇನ ಪರೇಣಾಂಗೀಕೃತತ್ವಾದಿತಿ ।**

**ಅನುವಾದ :-** ಅಥವಾ 'ವಿಮತಂ ಮಿಥ್ಯಾ' ಎಂಬುದಾಗಿ ಜಗತ್ತಿಗೆ ಮಿಥ್ಯಾತ್ವವನ್ನು = ಅಸತ್ವವನ್ನು ಪ್ರತಿಜ್ಞೆಗೈಯುವುದಾದರೆ ''ಜಗತೋ ಭಾವಾತ್ ಆಶ್ರಯಾಸಿದ್ಧಃ ಪಕ್ಷಃ''ಎಂಬ ವಾಕ್ಯದಿಂದ ಆಚಾರ್ಯರು ಅಪಸಿದ್ಧಾಂತ ದೋಷವನ್ನು ಹೇಳುತ್ತಿದ್ದಾರೆ.

ಅದು ಹೇಗೆಂದರೆ :- ಪಕ್ಷಃ ಎಂದರೆ ಪ್ರತಿಜ್ಞೆಯ ಅರ್ಥವು, ಪ್ರಪಂಚಕ್ಕೆ ಅಸತ್ವರೂಪವಾದ ಪ್ರತಿಜ್ಞಾರ್ಥವು ಅದು ಆಶ್ರಯಾಸಿದ್ಧಃ = ಆಶ್ರಯಾಸಿದ್ಧವಾಗಿದೆ. ಅಂದರೆ ಸಿದ್ಧಾಂತವನ್ನು ಆಶ್ರಿಯಿಸಿಕೊಂಡೇ ವಾದಕಥಾ ಎನ್ನುವುದು ಪ್ರವೃತ್ತವಾಗುವುದರಿಂದ ಆಶ್ರಯ ಎಂದರೆ ಸಿದ್ಧಾಂತ ಎಂದರ್ಥ. ಅಂತಹ ಆಶ್ರಯದಲ್ಲಿ = ಸಿದ್ಧಾಂತದಲ್ಲಿ (ನಿಮ್ಮ ಅದ್ವೈತಸಿದ್ಧಾಂತದಲ್ಲಿ) ಅದು (ಪ್ರಪಂಚದ ಅಸತ್ವವು) ಅಸಿದ್ಧವಾಗಿದೆ ಅರ್ಥಾತ್ ಸಿದ್ಧಾಂತಕ್ಕೆ ವಿರುದ್ಧವಾಗಿದೆ. ಯಾಕೆ ? ಅದಕ್ಕೆ ಕಾರಣ -

**'ಜಗತಃ ಭಾವಾತ್'**

ಪ್ರಪಂಚವು ಭಾವವಾಗಿ ಅಸದ್ವಿಲಕ್ಷಣವಾಗಿ ಪರರಿಂದ ಅಂಗೀಕೃತವಾದ್ದರಿಂದ.

ನಿಮ್ಮ ಅದ್ವೈತಸಿದ್ಧಾಂತದಲ್ಲಿ ಜಗತ್ತನ್ನು ಸದಸದ್ವಿಲಕ್ಷಣ ಎಂದು ಅಂಗೀಕರಿಸುವುದರಿಂದ ಜಗತ್ತು ಅಸದ್ವಿಲಕ್ಷಣವಾಗಿದೆ. ಈಗ 'ವಿಮತಂ ಮಿಥ್ಯಾ' ಎಂಬುದಾಗಿ ಅಂತಹ ಜಗತ್ತಿಗೆ ಮಿಥ್ಯಾತ್ವವನ್ನು = ಅಸತ್ವವನ್ನು ಹೇಳಿದರೆ ಅದು ಸಿದ್ಧಾಂತಕ್ಕೆ ವಿರುದ್ಧವಾಗುವುದರಿಂದ ಅಪಸಿದ್ಧಾಂತ ಬರುತ್ತದೆ ಎಂದು ಅಭಿಪ್ರಾಯ.

**ಟೀಕಾ :- ಸ್ಯಾದೇತತ್, ನ ವಯಂ ಮಿಥ್ಯೇತ್ಯತ್ಯಂತಾಸಂತಂ ಗಗನ-ಕುಸುಮಸಮಂ ಪ್ರಪಂಚಮಾಚಕ್ಷ್ಮಹೇ । ಯೇನ ಸಾಧ್ಯಧರ್ಮಸ್ಯಾಶ್ರಯಾ-ಸಿದ್ಧಿರಪಸಿದ್ಧಾಂತೋ ವಾ ಸ್ಯಾತ್ । ಕಿಂತು ? ಅನಿರ್ವಚನೀಯಮೇವೇತಿ । ಅತ ಆಹ -**

**ಮೂಲ :- ಅನಿರ್ವಚನೀಯಾಸಿದ್ಧೇರಪ್ರಸಿದ್ಧವಿಶೇಷಣಃ ।**

**ಪಕ್ಷ ಇತ್ಯನುವರ್ತತೇ । ಅತ್ರ ಪಕ್ಷ ಇತಿ ತದೇಕದೇಶೋ ಧರ್ಮೀ ಪ್ರಪಂಚೋ ಲಕ್ಷ್ಯತೇ । ಅಪ್ರಸಿದ್ಧಂ ವಿಶೇಷಣಂ ಯಸ್ಮಿನ್ನಿತಿ ಮುಖ್ಯಾರ್ಥೋ ವಾ ।**

**ಅನಿರ್ವಚನೀಯಂ ಖಲು ನಿರ್ವಚನಾನರ್ಹಮುಚ್ಯತೇ । ನ ಚ ತತ್ ಪ್ರಾಗೇತದನುಮಾನಾತ್ ಸಿದ್ಧಮ್ । ಸರ್ವಸ್ಯಾಪಿ ನಿರ್ವಚನಾರ್ಹತ್ವಾತ್ । ಅನ್ಯಥಾ ಸ್ವವ್ಯಾಘಾತೋ ಮೂಕತಾ ವಾ ಸ್ಯಾತ್ । ಅತೋ ಮಿಥ್ಯಾಪದೇನ ವಿಮತಸ್ಯಾನಿರ್ವಚನೀಯತಾಭಿಧಾನೇ ಪಕ್ಷೋಽಪ್ರಸಿದ್ಧವಿಶೇಷಣೋ ಭವತಿ । ಅಯಮಪಿ ವಚನನಿಮಿತ್ತೋ ದೋಷ ಇತಿ ಜ್ಞಾತವ್ಯಮ್ ।**

**ಅನುವಾದ :-** ನೀವು ಹೇಳುವ ದೋಷ ನಮಗೆ ಬರುತ್ತಿತ್ತು . ನಾವು 'ವಿಮತಂ ಮಿಥ್ಯಾ' ಎಂಬುದಾಗಿ ಮಿಥ್ಯಾಶಬ್ದದಿಂದ ಜಗತ್ತು ಗಗನಕುಸುಮಕ್ಕೆ ಸಮಾನವಾಗಿ ಅತ್ಯಂತ ಅಸತ್ ಆಗಿದೆ ಎಂದು ಹೇಳುವುದಿಲ್ಲ. ಒಂದುವೇಳೆ ಹಾಗೆ ಜಗತ್ತು ಅತ್ಯಂತ ಅಸತ್ ಆಗಿದೆ ಎಂದು ಹೇಳುತ್ತಿದ್ದರೆ ಆಗ ನೀವು ಹೇಳುವಂತೆ ಆಶ್ರಯಾಸಿದ್ಧಿಯಾಗಲೀ ಅಪಸಿದ್ಧಾಂತವಾಗಲೀ ದೋಷ ಬರುತ್ತಿತ್ತು . ಕಿಂತು ಮಿಥ್ಯಾಶಬ್ದದಿಂದ ಏನು ಹೇಳುತ್ತೇವೆ ? ಜಗತ್ತು ಮಿಥ್ಯೆಯಾಗಿದೆ ಎಂದರೆ ಅನಿರ್ವಚನೀಯವಾಗಿದೆ ಎಂದು ಹೇಳುತ್ತೇವೆ. ಆದ್ದರಿಂದ ಆಶ್ರಯಾಸಿದ್ಧಿಗಾಗಲೀ ಅಪಸಿದ್ಧಾಂತಕ್ಕಾಗಲೀ ಅವಕಾಶವಿಲ್ಲ ಎಂಬುದಾಗಿ ಪರವಾದಿಗಳು ಆಶಂಕೆ ಮಾಡಿದರೆ, ಅದಕ್ಕೆ ಆಚಾರ್ಯರು ಹೇಳಿದರುಃ-

**ಮೂಲ :- ಅನಿರ್ವಚನೀಯಾಸಿದ್ಧೇರಪ್ರಸಿದ್ಧವಿಶೇಷಣಃ ।**

**ಮೂಲಾರ್ಥ :-** ಮಿಥ್ಯಾ ಎಂದರೆ ಅನಿರ್ವಚನೀಯ ಎಂದು ಅರ್ಥ ಹೇಳುವುದು ಸರಿಯಲ್ಲ. ಏಕೆಂದರೆ, 'ವಿಮತಂ ಮಿಥ್ಯಾ' ಎಂಬುದಾಗಿ ಅನುಮಾನ ಮಾಡುವುದಕ್ಕಿಂತಲೂ ಮುಂಚೆ ಅನಿರ್ವಚನೀಯವಾದ (ನಿರ್ವಚನಾನರ್ಹವಾದ) ವಸ್ತು ಸಿದ್ಧವಾಗಿಲ್ಲವಾದ್ದರಿಂದ, ಪಕ್ಷವು ಅಪ್ರಸಿದ್ಧವಿಶೇಷಣವಾಗುತ್ತದೆ. (ಧರ್ಮಿಯು ಅಪ್ರಸಿದ್ಧವಾದ ಸಾಧ್ಯಧರ್ಮರೂಪ ವಿಶೇಷಣ ಉಳ್ಳದ್ದಾಗುತ್ತದೆ.) ಅಂದರೆ ನಿಮ್ಮ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ ದೋಷ ಬರುತ್ತದೆ.

ಮೂಲದಲ್ಲಿ 'ಅಪ್ರಸಿದ್ಧವಿಶೇಣಃ' ಎನ್ನುವುದು ವಿಶೇಷಣವಾಗಿದ್ದು, ವಿಶೇಷ್ಯವಾಚಕಪದ ಯಾವುದೂ ಇಲ್ಲವಾದ್ದರಿಂದ ಅನನ್ವಿತವಾಗುತ್ತದೆ. ಅದಕ್ಕೆ 'ಪಕ್ಷಃ' ಎಂಬ ಪದವನ್ನು ಹಿಂದಿನ ವಾಕ್ಯದಿಂದ ಅನುವರ್ತನೆ ಮಾಡಿಕೊಳ್ಳಬೇಕು. ಹಾಗಾದರೆ ''ಅಪ್ರಸಿದ್ಧವಿಶೇಷಣಃ ಪಕ್ಷಃ'' ಎಂದು ಅನ್ವಯ ಮಾಡಿಕೊಳ್ಳಬೇಕು.

ಇಲ್ಲಿ ಪಕ್ಷ ಎಂದರೆ ಸಾಧ್ಯಧರ್ಮವಿಶಿಷ್ಟವಾದ ಧರ್ಮೀ ಎಂದು ಮುಖ್ಯವಾದ ಅರ್ಥವಲ್ಲ. ಕಿಂತು ಪಕ್ಷಶಬ್ದಮುಖ್ಯಾರ್ಥದಲ್ಲಿ ಏಕದೇಶವಾದ, ಪ್ರಪಂಚರೂಪವಾದ ಧರ್ಮೀ ಎಂದು ಲಕ್ಷಣಾವೃತ್ತಿಯಿಂದ ಅರ್ಥ ಸ್ವೀಕರಿಸಬೇಕು. ಹಾಗಾದರೆ -

''ಪಕ್ಷಃ= ಪ್ರಪಂಚರೂಪವಾದ ಧರ್ಮಿಯು ಅಪ್ರಸಿದ್ಧವಿಶೇಷಣಃ= ಅಪ್ರಸಿದ್ಧವಾದ ಸಾಧ್ಯಧರ್ಮರೂಪ ವಿಶೇಷಣ ಉಳ್ಳದ್ದಾಗಿದೆ '' ಎಂಬುದಾಗಿ ಮೂಲದ ಅರ್ಥ ತಿಳಿಯಬೇಕು.

ಅಥವಾ, ಪಕ್ಷ ಎಂದರೆ ಸಾಧ್ಯಧರ್ಮವಿಶಿಷ್ಟವಾದ ಧರ್ಮೀ ಎಂಬ ಮುಖ್ಯಾರ್ಥವನ್ನೇ ತೆಗೆದುಕೊಳ್ಳುವುದು. ಆದರೆ - 'ಅಪ್ರಸಿದ್ಧಂ ವಿಶೇಷಣಂ ಯಸ್ಯ' ಎಂಬುದಾಗಿ ಷಷ್ಠೀಬಹುವ್ರೀಹಿ ಮಾಡುವುದಿಲ್ಲ. ಕಿಂತು - 'ಅಪ್ರಸಿದ್ಧಂ ವಿಶೇಷಣಂ ಯಸ್ಮಿನ್' ಎಂಬುದಾಗಿ ಸಪ್ತಮೀಬಹುವ್ರೀಹಿ ಮಾಡಿಕೊಳ್ಳಬೇಕು. ಹಾಗಾದರೆ ''ಯಸ್ಮಿನ್=ಯಾವ ಸಾಧ್ಯಧರ್ಮವಿಶಿಷ್ಟಧರ್ಮಿಯಲ್ಲಿ ವಿಶೇಷಣಂ = ಸಾಧ್ಯಧರ್ಮ ಎಂಬ ವಿಶೇಷಣಭಾಗವು ಅಪ್ರಸಿದ್ಧಂ = ಅಪ್ರಸಿದ್ಧವಾಗಿದೆಯೋ ಸಃ ಪಕ್ಷಃ ಅಪ್ರಸಿದ್ಧವಿಶೇಷಣಃ'' ಎಂಬುದಾಗಿ ಮೂಲದ ಅರ್ಥ ತಿಳಿಯಬೇಕು.

ಮಿಥ್ಯಾ ಎಂದರೆ ಅನಿರ್ವಚನೀಯ ಎಂದು ಅರ್ಥ ಹೇಳಿದರೆ ಅಪ್ರಸಿದ್ಧವಿಶೇಷಣತಾ ಏಕೆ ಬರುತ್ತದೆ ? ಎಂದು ಕೇಳಿದರೆ, ಅದನ್ನು ತೋರಿಸುತ್ತಾರೆ-

ಯಾವುದು ನಿರ್ವಚನಾನರ್ಹವಾಗಿದೆ (ಯಾವ ಶಬ್ದದಿಂದಲೂ ನಿರ್ವಚನ ಮಾಡಲು ಯೋಗ್ಯವಾಗಿಲ್ಲ) ಅದನ್ನು ಅನಿರ್ವಚನೀಯ ಎಂದು ಕರೆಯಬೇಕು. ಆದರೆ, ಎಲ್ಲ ವಸ್ತುಗಳೂ ನಿರ್ವಚನಾರ್ಹವೇ (ಯಾವುದಾದರೂ ಒಂದು ಶಬ್ದದಿಂದ ನಿರ್ವಚನ ಮಾಡಲು ಯೋಗ್ಯವೇ) ಆಗಿರುವುದರಿಂದ, 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬುದಾಗಿ ನೀವು ಅನುಮಾನ ಮಾಡುವುದಕ್ಕಿಂತಲೂ ಮುಂಚೆ ಅಂತಹ ನಿರ್ವಚನಾನರ್ಹವಾದ ವಸ್ತುವೇ ಸಿದ್ಧವಾಗಿಲ್ಲವಾದ್ದರಿಂದ ನಿಮ್ಮ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ (ಸಾಧ್ಯಾಪ್ರಸಿದ್ಧಿ) ಎಂಬ ದೋಷ ಬರುತ್ತದೆ.

ಹಾಗೆ ಒಂದುವೇಳೆ 'ಎಲ್ಲವೂ ನಿರ್ವಚನಾರ್ಹವೇ ಆಗಿವೆ' ಎಂದು ಒಪ್ಪದೇ ನಿರ್ವಚನಾನರ್ಹತ್ವರೂಪ ಅನಿರ್ವಚನೀಯತ್ವವನ್ನು ಅಂಗೀಕರಿಸುವುದಾದರೆ, ''ಅನಿರ್ವಚನೀಯತ್ವಂ ನಾಮ ಕಿಮ್ ? = ಅನಿರ್ವಚನೀಯತ್ವ ಎಂದರೆ ಏನು ?'' ಎಂಬುದಾಗಿ ಪ್ರಶ್ನೆ ಕೇಳಿದರೆ ಅದಕ್ಕೆ ಉತ್ತರ ಹೇಳುತ್ತೀರೋ ? ಇಲ್ಲವೋ ?

ಉತ್ತರ ಹೇಳುವುದಾದರೆ, ನಿರ್ವಚನಾನರ್ಹ ಎಂಬ ಪದದಿಂದಲೇ ಅದಕ್ಕೆ ನಿರ್ವಚನೀಯತ್ವವು ಬರುವುದರಿಂದ ಪುನಃ ಅದನ್ನು ಅನಿರ್ವಚನೀಯ ಎಂದು ಹೇಳಿದರೆ ಸ್ವವ್ಯಾಘಾತ ಬರುತ್ತದೆ.

ಇನ್ನು ಅನಿರ್ವಚನೀಯತ್ವ ಎಂದರೆ ಏನು ? ಎಂದು ಪ್ರಶ್ನೆ ಕೇಳಿದಾಗ, ಯಾವ ನಿರ್ವಚನ ಮಾಡದೇ ಒಂದುವೇಳೆ ಸುಮ್ಮನಿರುವುದಾದರೆ ಆಗ ಮೂಕತ್ವ ಬರಬೇಕಾಗುತ್ತದೆ. ಹಾಗಾದರೆ ಅನನುಭಾಷಣ ಎಂಬ ನಿಗ್ರಹಸ್ಥಾನ ಬರುತ್ತದೆ ಎಂದು ಭಾವ.

ಆದ್ದರಿಂದ ಮಿಥ್ಯಾಪದದಿಂದ ಪ್ರಪಂಚಕ್ಕೆ ಅನಿರ್ವಚನೀಯತ್ವವನ್ನು ಹೇಳುವುದಾದರೆ ಪಕ್ಷವು ಅಪ್ರಸಿದ್ಧವಿಶೇಷಣವಾಗುತ್ತದೆ (ನಿಮ್ಮ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾದೋಷ ಬರುತ್ತದೆ) ಎಂದು ಅಭಿಪ್ರಾಯ.

ಆಶ್ರಯಾಸಿದ್ಧಿ ದೋಷದಂತೆ ಈ ಅಪ್ರಸಿದ್ಧವಿಶೇಷಣತಾ ಎಂಬ ದೋಷವೂ ಸಹ ವಚನ(ಉಕ್ತಿ)ನಿಮಿತ್ತವಾದ ದೋಷವಾಗಿದೆ ಎಂದು ತಿಳಿಯಬೇಕು. ಅಂದರೆ :- ಒಂದುವೇಳೆ ಮಿಥ್ಯಾತ್ವ ಎಂದರೆ ಅಸತ್ವ ಎಂಬುದಾಗಿ ಪರರು ಹೇಳಿದರೆ ಆಶ್ರಯಾಸಿದ್ಧಿದೋಷವು ಹೇಗೆ ಬರುವುದೋ ಹಾಗೆ ಮಿಥ್ಯಾತ್ವ ಎಂದರೆ ಅನಿರ್ಚಚನೀಯತ್ವ ಎಂಬುದಾಗಿ ಪರರು ಹೇಳಿದರೆ (ಅನಿರ್ವಚನೀಯತ್ವ ಎಂದರೆ ನಿರ್ವಚನಾನರ್ಹತ್ವ ಎಂದು ಹೇಳುವುದಾದರೆ) ಆಗ ಅಪ್ರಸಿದ್ಧವಿಶೇಷಣತಾದೋಷ ಬರುತ್ತದೆ ಎಂದು ನಾವು ಹೇಳುತ್ತಿದ್ದೇವೆ. ಒಂದುವೇಳೆ ಮಿಥ್ಯಾ ಎಂದರೆ ಸದಸದ್ವಿಲಕ್ಷಣತ್ವ ಎಂಬುದಾಗಿ ಬೇರೆ ಅರ್ಥ ಹೇಳುವುದಾದರೆ ಆ ಪಕ್ಷಕ್ಕೆ ಸಿದ್ಧಸಾಧನತಾ ಮೊದಲಾದ ಬೇರೆ ದೋಷಗಳನ್ನು ಮುಂದೆ ಹೇಳುವವರಿದ್ದೇವೆ ಎಂದು ಅಭಿಪ್ರಾಯ.

**ಟೀಕಾ :- ನನು ಸದಸದ್ವೈಲಕ್ಷಣ್ಯಮೇವ ಮಿಥ್ಯಾತ್ವಂ ಬ್ರೂಮಃ ನಾಸತ್ವಮ್ । ಏತದೇವಾನಿರ್ವಚನೀಯತ್ವಂ ನಾಮ । ನ ತು ಸರ್ವಥಾ ನಿರ್ವಚನಾನರ್ಹತ್ವಮೇವ । ಅತೋ ನೋಕ್ತದೋಷ ಇತಿ । ತತ್ರಾಹ -**

**ಮೂಲ :-ಸದಸದ್ವೈಲಕ್ಷಣ್ಯೇ ಮಿಥ್ಯಾತ್ವೇ ಸಿದ್ಧಸಾಧನತಾ ।**

**ಪ್ರತಿಜ್ಞಾದೂಷಣಪ್ರಸ್ತಾವಾತ್ ಸಾಧನಶಬ್ದೋಽತ್ರ ಭಾವಸಾಧನಃ । ಕರಣಸಾಧನತ್ವೇ ಹಿ ಹೇತುದೂಷಣಂ ಸ್ಯಾತ್ । ಸದಸದ್ವೈಲಕ್ಷಣ್ಯೇ ಮಿಥ್ಯಾತ್ವೇಽಂಗೀಕ್ರಿಯಮಾಣೇ ಹಿ ವಿಮತಂ ಸದ್ವಿಲಕ್ಷಣಮಸದ್ವಿಲಕ್ಷಣಂ ಚೇತಿ ಪ್ರತಿಜ್ಞಾರ್ಥಃ ಸ್ಯಾತ್ । ತತ್ರ ಅಸದ್ವಿಲಕ್ಷಣತ್ವಂ ಪ್ರಪಂಚಸ್ಯಾಸ್ಮಾಭಿರಂಗೀಕೃತಮೇವೇತಿ ಸಿದ್ಧಸಾಧನತಾ ಭವಿಷ್ಯತಿ ॥**

**ಅನುವಾದ :-** 'ವಿಮತಂ ಮಿಥ್ಯಾ' ಎಂಬುದಾಗಿ ಜಗತ್ತಿಗೆ ಮಿಥ್ಯಾತ್ವವನ್ನು ಹೇಳಿದಾಗ ಅಲ್ಲಿ ಮಿಥ್ಯಾತ್ವ ಎಂದರೆ ಸದಸದ್ವೈಲಕ್ಷಣ್ಯ ಎಂದೇ ಅರ್ಥ ಹೇಳುತ್ತೇವೆ. ಹೊರತು ಅಸತ್ವ ಎಂದು ಅರ್ಥ ಹೇಳುವುದಿಲ್ಲ. ಅನಿರ್ವಚನೀಯತ್ವ ಎಂದರೆ ಇದೇನೇ (ಸದಸದ್ವೈಲಕ್ಷಣ್ಯವೇ) ಆಗಿದೆ. ಹೊರತು ಸರ್ವಥಾ ನಿರ್ವಚನಾನರ್ಹತ್ವ ಎಂದಲ್ಲ. ಆದ್ದರಿಂದ (ಅನಿರ್ವಚನೀಯತ್ವ ಎಂದರೆ ಸದಸದ್ವೈಲಕ್ಷಣ್ಯ ಎಂದು ವಿವಕ್ಷಿಸಿದ್ದರಿಂದ)

''ನಿರ್ವಚನಾನರ್ಹವಾದ ವಸ್ತುವೇ ಅಪ್ರಸಿದ್ಧವಾದ್ದರಿಂದ ನಿಮ್ಮ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ ದೋಷ ಬರುತ್ತದೆ'' ಎಂಬುದಾಗಿ ಹಿಂದೆ ಶಂಕಿಸಿದ ಅಪ್ರಸಿದ್ಧವಿಶೇಷಣತಾದೋಷ ಈಗ ನಮಗೆ ಬರುವುದಿಲ್ಲ.

ಈ ರೀತಿಯಾಗಿ ಪರವಾದಿಗಳು ಆಶಂಕಿಸಿದರೆ, ಅದಕ್ಕೆ ಆಚಾರ್ಯರು ಹೇಳುತ್ತಾರೆ:-

**ಮೂಲ :- ಸದಸದ್ವೈಲಕ್ಷಣ್ಯೇ ಮಿಥ್ಯಾತ್ವೇ ಸಿದ್ಧಸಾಧನತಾ ।**

**ಮೂಲಾರ್ಥ :-** ಮಿಥ್ಯಾತ್ವ ಎಂದರೆ ಸದಸದ್ವೈಲಕ್ಷಣ್ಯ ಎಂದು ಅರ್ಥ ಹೇಳುವುದಾದರೆ, ನಿಮ್ಮ ಪ್ರತಿಜ್ಞೆಗೆ ಸಿದ್ಧಸಾಧನತಾ ದೋಷ ಬರುತ್ತದೆ. (ಅಸದ್ವೈಲಕ್ಷಣ್ಯ ಎಂಬ ಅಂಶವು ಮೊದಲೇ ನಮಗೆ ಸಿದ್ಧವಾಗಿದ್ದರಿಂದ, ಸಿದ್ಧವಾದದ್ದನ್ನೇ ಪುನಃ ತಿಳಿಸಿದಂತಾಗುತ್ತದೆ.)

ಪ್ರತಿಜ್ಞೆಗೆ ಸಂಬಂಧಿಸಿದ ದೋಷಗಳನ್ನು ಹೇಳುತ್ತಿರುವುದರಿಂದ (ಪ್ರತಿಜ್ಞಾದೋಷಗಳು ಪ್ರಸ್ತುತವಾದ್ದರಿಂದ) 'ಸಿದ್ಧಸಾಧನತಾ' ಎಂಬ ಮೂಲದಲ್ಲಿರುವ ಸಾಧನಶಬ್ದವು ಭಾವಸಾಧನವಾಗಿದೆ.

ಭಾವ ಎಂದರೆ ಧಾತ್ವರ್ಥ. ''ಭಾವಂ ಧಾತ್ವರ್ಥಂ ಸಾಧಯತಿ ಪ್ರತಿಪಾದಯತಿ ಇತಿ ಭಾವಸಾಧನಃ'' ಎಂದು ವಿಗ್ರಹ ಮಾಡಿಕೊಂಡಾಗ,

''**ಸಿದ್ಧಸ್ಯ = ಜ್ಞಾತಸ್ಯೈವ ಸಾಧನತಾ = ಅನುಮಿತಿರೂಪಸಿದ್ಧಿಜ್ಞಾನವಿಷಯತಾ ಪ್ರಾಪ್ತಾ**''

ಸಿದ್ಧವಾದ = ಮೊದಲೇ ಜ್ಞಾತವಾದ ವಸ್ತುವಿಗೇ ಸಾಧನತಾ = ಅನುಮಿತಿ ರೂಪಜ್ಞಾನವಿಷಯತ್ವವು ಪ್ರಾಪ್ತವಾಯಿತು (ಮೊದಲೇ ಜ್ಞಾತವಾಗಿದ್ದ ವಸ್ತುವನ್ನೇ ಅನುಮಾನದಿಂದ ತಿಳಿಸಿದಂತಾಯಿತು) ಎಂಬ ಅರ್ಥ ಸ್ಫುಟವಾಗುತ್ತದೆ.

ಸಾಧನಶಬ್ದವು ಕರಣಸಾಧನವಾಗಿದೆ ಎಂದು ಏಕೆ ಹೇಳಬಾರದು ? ಎಂದರೆ, ಹಾಗೆ ಸಾಧನಶಬ್ದವು ಕರಣಸಾಧನ ಎಂದು ವಿವಕ್ಷಿಸಿದರೆ,

''**ಸಿದ್ಧಂ ಸಾಧ್ಯತೇ ಅನೇನ ಇತಿ ಸಿದ್ಧಸಾಧನಃ**''

ಎಂದು ವಿಗ್ರಹ ಮಾಡಿದಂತಾಗಿ, ಸಿದ್ಧಸಾಧನತಾ = ಸಿದ್ಧಸಾಧಕತ್ವ (ಮೊದಲೇ ಸಿದ್ಧವಾದದ್ದನ್ನು ಪುನಃ ಸಾಧಿಸುವುದು) ಎಂಬ ಅರ್ಥ ಬರುತ್ತದೆ. ಈ ಸಿದ್ಧಸಾಧಕತ್ವ ಎನ್ನುವುದು ಹೇತುವಿನ ದೋಷವಾಗುತ್ತದೆಯೇ ಹೊರತು ಪ್ರತಿಜ್ಞೆಗೆ ಸಂಬಂಧಿಸಿದ ದೋಷವಾಗುವುದಿಲ್ಲ. ಪ್ರತಿಜ್ಞೆಗೆ ಸಂಬಂಧಿಸಿದ ದೋಷಗಳನ್ನು ಹೇಳುವ ಸಂದರ್ಭದಲ್ಲಿ ಹೇತುದೋಷವನ್ನು ಹೇಳುವುದು ಅಸಮಂಜಸವಾಗುತ್ತದೆ. ಆದ್ದರಿಂದ ಸಾಧನಶಬ್ದವು ಕರಣಸಾಧನ ಎಂದು ಹೇಳಬಾರದು. ಕಿಂತು ಭಾವಸಾಧನ ಎಂದೇ ಹೇಳಬೇಕು ಎಂದು ಅಭಿಪ್ರಾಯ.

ವಿಮತಂ ಮಿಥ್ಯಾ ಎಂಬುದಾಗಿ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳಿದಾಗ, ಅಲ್ಲಿ ಮಿಥ್ಯಾತ್ವ ಎಂದರೆ ಸದಸದ್ವೈಲಕ್ಷಣ್ಯ ಎಂದು ಅರ್ಥ ಹೇಳುವುದಾದರೆ ಆಗ ''ಪ್ರಪಂಚವು ಸದ್ವಿಲಕ್ಷಣವೂ ಆಗಿದೆ. ಅಸದ್ವಿಲಕ್ಷಣವೂ ಆಗಿದೆ'' ಎಂಬುದಾಗಿ ಪ್ರತಿಜ್ಞೆಯ ಅರ್ಥವಾಗುತ್ತದೆ. ಆದರಲ್ಲಿ ಪ್ರಪಂಚಕ್ಕೆ ಅಸದ್ವಿಲಕ್ಷಣತ್ವ ಎಂಬ ಅಂಶವನ್ನು ನಾವು ಅಂಗೀಕರಿಸಿದ್ದೇವೆಯಾದ್ದರಿಂದ ಸಿದ್ಧಸಾಧನತಾ ಬರುತ್ತದೆ (ಮೊದಲೇ ಸಿದ್ಧವಾಗಿದ್ದ ಅಸದ್ವಿಲಕ್ಷಣತ್ವವನ್ನು ಪುನಃ ತಿಳಿಸಿದಂತಾಗುತ್ತದೆ) ಎಂದು ಭಾವ.

**ಅವತಾರಿಕೆ :-** ಸದಸದ್ವಿಲಕ್ಷಣತ್ವಂ ಮಿಥ್ಯಾತ್ವಂ ಎನ್ನುವಲ್ಲಿ ಅಸದ್ವಿಲಕ್ಷಣತ್ವ ಎಂಬ ಅಂಶವು ಪ್ರಪಂಚದಲ್ಲಿ ನಮಗೆ ಸಿದ್ಧವೇ ಆಗಿದ್ದರಿಂದ ಸಿದ್ಧಸಾಧನತಾ ಬರುತ್ತದೆ ಎಂಬುದಾಗಿ ನಾವು ಹೇಳಿದ ದೋಷದ ಮೇಲೆ ಆಶಂಕಿಸುತ್ತಾರೆ :-

**ಟೀಕಾ :- ನನು ಸದ್ವೈಲಕ್ಷಣ್ಯೇನ ಸಹಾಸದ್ವೈಲಕ್ಷಣ್ಯಮತ್ರ ಸಾಧ್ಯತೇ । ತತ್ಕಥಮೇಷ ದೋಷಃ ? ಇತಿ । ಮೈವಮ್, ನ ಹಿ ಸಿದ್ಧಮಸಿದ್ಧೇನ ಸಹೋಚ್ಯಮಾನಮಸಿದ್ಧಂ ಭವತಿ । ಸದ್ವೈಲಕ್ಷಣ್ಯವಿಶಿಷ್ಟಾಸದ್ವೈಲಕ್ಷಣ್ಯ-ಸಾಧನಾದದೋಷ ಇತಿ ಚೇತ್, ತಥಾಪಿ ಸಿದ್ಧಸಾಧನತೈವ । ಸತೋಽಪಿ ಸದಂತರವೈಲಕ್ಷಣ್ಯಾಂಗೀಕಾರಾತ್ ।**

**ಸದಸದ್ವೈಲಕ್ಷಣ್ಯಂ ನಾಮ ಸದಸತ್ತ್ವಾನಾಶ್ರಯತ್ವಮಿತಿ ಚೇತ್ ತಥಾಪಿ ನ ಸಿದ್ಧಸಾಧನತಾನಿಸ್ತಾರಃ । ಸತ್ವೈಕಸ್ವಭಾವಸ್ಯ ಪ್ರಪಂಚಸ್ಯ ಸದಸತ್ತ್ವಾನಂಗೀಕಾರಾತ್ । ಪ್ರತ್ಯೇಕಮುಭಯಾನಾಶ್ರಯತ್ವಮಿತಿ ಚೇತ್, ತಥಾಪ್ಯಸತ್ತ್ವಾನಾಶ್ರಯತ್ವೇನ ಸಿದ್ಧಸಾಧನತಾತಾದವಸ್ಥ್ಯಮ್ ।**

**ವಿಶಿಷ್ಟಸಾಧನಾದದೋಷ ಇತಿ ಚೇತ್ ತಥಾಪಿ ದೇಶಕಾಲಪರಿಚ್ಛಿನ್ನೇಷು ಘಟಾದಿಷು ವ್ಯವಸ್ಥಾಶ್ರಯಣೇನ ಸಿದ್ಧಸಾಧನತ್ವೈವೇತಿ ।**

**ಅನುವಾದ :-** ನಾವು ಸದ್ವಿಲಕ್ಷಣತ್ವದಿಂದ ಸಹಿತವಾದ ಅಸದ್ವಿಲಕ್ಷಣತ್ವವನ್ನು ಸಾಧ್ಯವನ್ನಾಗಿ ಮಾಡುತ್ತೇವೆ. ಪ್ರಕೃತ ಪ್ರಪಂಚದಲ್ಲಿ ಕೇವಲ ಅಸದ್ವಿಲಕ್ಷಣತ್ವ ಎಂಬ ಅಂಶವು ನಿಮಗೆ ಸಿದ್ಧವಾಗಿದ್ದರೂ ಸಹ ಸದ್ವಿಲಕ್ಷಣತ್ವ ಎಂಬ ಅಂಶವು ಸಿದ್ಧವಾಗಿಲ್ಲವಾದ್ದರಿಂದ, (ಸದ್ವಿಲಕ್ಷಣತ್ವಸಹಿತಅಸದ್ವಿಲಕ್ಷಣತ್ವ ಸಿದ್ಧವಾಗಿಲ್ಲ-ವಾದ್ದರಿಂದ) ಸಿದ್ಧಸಾಧನತಾದೋಷ ಹೇಳಲು ಬರುವುದಲ್ಲ ಎಂಬುದಾಗಿ ಶಂಕಿಸಿದರೆ, ಅದು ಸರಿಯಲ್ಲ.

ಸಿದ್ಧವಾದದ್ದು ಅಸಿದ್ಧವಾದದ್ದರ ಜೊತೆ ಉಚ್ಚರಿತವಾದ ಮಾತ್ರಕ್ಕೆ ಅದೂ ಅಸಿದ್ಧವಾಗುವುದಿಲ್ಲ. ಹಾಗಾಗಿ ಸಿದ್ಧವಾಗಿರುವ ಅಸದ್ವಿಲಕ್ಷಣತ್ವದ ಜೊತೆಗೆ ಅಸಿದ್ಧವಾದ ಸದ್ವಿಲಕ್ಷಣತ್ವವನ್ನು ಸೇರಿಸಿದ ಮಾತ್ರಕ್ಕೆ ಅಸದ್ವಿಲಕ್ಷಣತ್ವವು ಅಸಿದ್ಧವೇನೂ ಆಗುವುದಿಲ್ಲ. ಅದು ಸಿದ್ಧವೇ ಇರುತ್ತದೆ. ಅಸದ್ವಿಲಕ್ಷಣತ್ವ ಸಿದ್ಧವಾದ ಕಾರಣ ಬಂದ ಸಿದ್ಧಸಾಧನತಾದೋಷ ಬಂದೇ ಬರುತ್ತದೆ.

ನಾವು ಸದ್ವೈಲಕ್ಷಣ್ಯವಿಶಿಷ್ಟಾಸದ್ವೈಲಕ್ಷಣ್ಯವನ್ನು ಸಾಧ್ಯವನ್ನಾಗಿ ಮಾಡುತ್ತೇವೆ. ವಿಶಿಷ್ಟವಾದದ್ದು, ಅಖಂಡವಾದ ಮತ್ತೊಂದು ಪದಾರ್ಥವೇ ಆಗುವುದರಿಂದ ಅಲ್ಲಿ ಅಂಶಗಳು ಇರುವುದಿಲ್ಲ. ಆದ್ದರಿಂದ ಹಿಂದಿನ ಪಕ್ಷದಲ್ಲಿ ಹೇಳಿದಂತೆ ಅಂಶೇ ಸಿದ್ಧಸಾಧನತಾ ದೋಷ ಈ ಪಕ್ಷದಲ್ಲಿ ಬರುವುದಿಲ್ಲ ಎಂಬುದಾಗಿ ಶಂಕಿಸಿದರೆ, ಅದು ಸರಿಯಲ್ಲ. ಕಾರಣ ಈ ರೀತಿ ಹೇಳಿದಾಗಲೂ ಸಹ ಸಿದ್ಧಸಾಧನತಾದೋಷ ಬಂದೇ ಬರುತ್ತದೆ.

ಏಕೆಂದರೆ - ಪ್ರಪಂಚದಲ್ಲಿ ಅಸದ್ವಿಲಕ್ಷಣತ್ವವಂತೂ ಸಿದ್ಧವೇ ಇದೆ. ಇನ್ನು ಸದ್ವಿಲಕ್ಷಣತ್ವ ಬರಬೇಕು. ಅದೂ ಬರುತ್ತದೆ. ಸತ್ ಆದ ಪ್ರಪಂಚದಲ್ಲಿ ಸದ್ವಿಲಕ್ಷಣತ್ವ ಹೇಗೆ ಬರುತ್ತದೆ ? ಎಂದರೆ, ಒಂದು ಸತ್ ಪದಾರ್ಥವು ಮತ್ತೊಂದು ಸತ್ ಪದಾರ್ಥದಿಂದ ಭಿನ್ನವಾಗಿರುವುದರಿಂದ ಸದ್ವಿಲಕ್ಷಣತ್ವವೂ ಬರುತ್ತದೆ. ಹೀಗೆ (ಸದ್ವಿಲಕ್ಷಣತ್ವ - ಅಸದ್ವಿಲಕ್ಷಣತ್ವ ಎರಡೂ ಬರುವುದರಿಂದ) ಸದ್ವೈಲಕ್ಷಣ್ಯವಿಶಿಷ್ಟ ಅಸದ್ವೈಲಕ್ಷಣ್ಯ ಎನ್ನುವುದು ಪ್ರಪಂಚದಲ್ಲಿ ಸಿದ್ಧವೇ ಆಗಿದ್ದರಿಂದ ಸಿದ್ಧಸಾಧನತಾದೋಷವು ಬಂದೇ ಬರುತ್ತದೆ.

ನಾವು ಸದಸದ್ವೈಲಕ್ಷಣ್ಯ ಎಂದರೆ ಸದಸತ್ವಾನಾಶ್ರಯತ್ವ ಎಂದು ಅರ್ಥ ಹೇಳುತ್ತೇವೆ. ಒಂದು ಸತ್‌ಪದಾರ್ಥ ಮತ್ತೊಂದು ಸತ್‌ಪದಾರ್ಥದಿಂದ ಭಿನ್ನವಾಗಿದ್ದರಿಂದ ಅದರಲ್ಲಿ ಸದ್ವೈಲಕ್ಷಣ್ಯ ಬರಬಹುದು. ಆದರೆ ಅದೂ ಒಂದು ಸತ್‌ಪದಾರ್ಥವೇ ಆಗಿದ್ದರಿಂದ (ಸತ್ವಕ್ಕೆ ಆಶ್ರಯವೇ ಆಗಿರುವುದರಿಂದ) ಸತ್ವಕ್ಕೆ ಅನಾಶ್ರಯವಾಗಲು ಸಾಧ್ಯವಿಲ್ಲ. ಆದ್ದರಿಂದ ಪ್ರಪಂಚದಲ್ಲಿ ಸದಸತ್ವಾನಾಶ್ರಯತ್ವ ಬಾರದ ಕಾರಣ ಸಿದ್ಧಸಾಧನತಾ ಬರುವುದಿಲ್ಲ ಎಂಬುದಾಗಿ ಶಂಕಿಸಿದರೆ, ಅದು ಸರಿಯಲ್ಲ.

ಏಕೆಂದರೆ, ಸದಸತ್ವಾನಾಶ್ರಯತ್ವ ಎನ್ನುವಲ್ಲಿ

1) ಸಚ್ಚ ತತ್ ಅಸಚ್ಚ ಸದಸತ್, ಸದಸತಃ ಭಾವಃ ಸದಸತ್ವಂ, ತಸ್ಯ ಅನಾಶ್ರಯತ್ವಂ। ಸದಸತ್ ಆದ (ಸತ್ ಆದ ಅಸತ್ತೂ ಆದ) ವಸ್ತುವಿನಲ್ಲಿ ಇರುವ ಸದಸತ್ವ ಎಂಬ ಧರ್ಮಕ್ಕೆ ಆಶ್ರಯವಲ್ಲ ಎಂದು ಅರ್ಥ ಹೇಳುತ್ತೀರೋ ?

2) ಸಚ್ಚ ಅಸಚ್ಚ ಸದಸತೀ, ತಯೋಃ ಭಾವಃ ಸದಸತ್ವಂ, ತಸ್ಯ ಅನಾಶ್ರಯತ್ವಂ । (ಸತ್ವ ಹಾಗೂ ಅಸತ್ವ ಎರಡಕ್ಕೂ ಆಶ್ರಯವಲ್ಲ) ಎಂದು ಅರ್ಥ ಹೇಳುತ್ತೀರೋ ?

3) ಸತ್ವಾನಾಶ್ರಯತ್ವೇ ಸತಿ ಅಸತ್ವಾನಾಶ್ರಯತ್ವಂ । ಸತ್ವಾನಾಶ್ರಯತ್ವದಿಂದ ಸಹಿತವಾದ ಅಸತ್ವಾನಾಶ್ರಯತ್ವ) ಎಂಬ ವಿಶಿಷ್ಟವಾದದ್ದು ಎಂದು ಅರ್ಥ ಹೇಳುತ್ತೀರೋ?

ಸದಸತ್ವಾನಾಶ್ರಯತ್ವ ಎಂದರೆ, ಸದಸತ್ ಆದ ವಸ್ತುವಿನಲ್ಲಿ ಇರುವ ಸದಸತ್ವ ಎಂಬ ಧರ್ಮಕ್ಕೆ ಆಶ್ರಯವಲ್ಲ ಎಂದು ಹೇಳುವುದು ಸರಿಯಲ್ಲ. ಏಕೆಂದರೆ - ಪ್ರಪಂಚವು ನಮ್ಮ ಪ್ರಕಾರ ಸತ್ವೈಕಸ್ವಭಾವವಾಗಿದೆ. (ಅಂದರೆ ಕೇವಲ ಸತ್ ಆಗಿದೆ. ಅದರಲ್ಲಿ ಸತ್ವವು ಮಾತ್ರ ಇದೆ.) ಹೀಗಾಗಿ ಪ್ರಪಂಚದಲ್ಲಿ ಸತ್ವ ಮಾತ್ರ ಇದೆಯೇ ಹೊರತು ಸದಸತ್ವ ಇಲ್ಲ. ಪ್ರಪಂಚವು ಸದಸತ್ವಕ್ಕೆ ಆಶ್ರಯವಾಗಿಲ್ಲ. ಸದಸತ್ವಾನಾಶ್ರಯತ್ವವು ಪ್ರಪಂಚದಲ್ಲಿ ಬರುವುದರಿಂದ (ಸಿದ್ಧವಾದ ಸದಸತ್ವಾನಾಶ್ರಯತ್ವವನ್ನೇ ಸಾಧಿಸಿದಂತಾಗುವುದರಿಂದ) ಸಿದ್ಧಸಾಧನತಾದೋಷವು ಪುನಃ ಬಂದೇ ಬರುತ್ತದೆ.




ನಾವು ಸದಸತ್ವಾನಾಶ್ರಯತ್ವ ಎಂದರೆ ಸದಸತ್ವ ಎಂಬ ಧರ್ಮಕ್ಕೆ ಆಶ್ರಯ ಅಲ್ಲ ಎಂದು ಅರ್ಥ ಹೇಳುವುದಿಲ್ಲ. ಹಾಗೆ ಹೇಳುತ್ತಿದ್ದರೆ ನೀವು ಶಂಕಿಸಿದಂತೆ ಸಿದ್ಧಸಾಧನತಾ ಬರುತ್ತಿತ್ತು . ಕಿಂತು -

ಸಚ್ಚ ಅಸಚ್ಚ ಸದಸತೀ, ತಯೋರ್ಭಾವಃ ಸದಸತ್ವಂ, ತಸ್ಯ ಅನಾಶ್ರಯತ್ವಂ ಎಂಬುದಾಗಿ ವಿಗ್ರಹ ಮಾಡಿಕೊಂಡು ಸತ್ವಾನಾಶ್ರಯತ್ವ - ಅಸತ್ವಾನಾಶ್ರಯತ್ವ ಎಂಬುದಾಗಿ ಪ್ರತ್ಯೇಕವಾಗಿ ಉಭಯಾನಾಶ್ರಯತ್ವವನ್ನೂ ಹೇಳುತ್ತೇವೆ. ಪ್ರಪಂಚದಲ್ಲಿ ಅಸತ್ವಾನಾಶ್ರಯತ್ವ ಬಂದರೂ ಸತ್ವಾನಾಶ್ರಯತ್ವ ಬರುವುದಿಲ್ಲವಾದ್ದರಿಂದ ಸಿದ್ಧಸಾಧನತಾ ಬರುವುದಿಲ್ಲ ಎಂಬುದಾಗಿ ಶಂಕಿಸಿದರೆ, ಅದೂ ಸರಿಯಲ್ಲ.

ಏಕೆಂದರೆ ಹೀಗೆ ಹೇಳಿದರೂ ಅಸತ್ವಾನಾಶ್ರಯತ್ವ ಎಂಬ ಅಂಶ ಸಿದ್ಧವಾಗಿರುವ ಕಾರಣ ಅಂಶೇ ಸಿದ್ಧಸಾಧನತಾದೋಷ (ಪರಿಹಾರವಾಗುವುದಿಲ್ಲ) ಬಂದೇ ಬರುತ್ತದೆ.

ನಾವು ಸದಸತ್ವಾನಾಶ್ರಯತ್ವ ಎಂದರೆ ಸತ್ವಾನಾಶ್ರಯತ್ವೇ ಸತಿ ಅಸತ್ವಾನಾಶ್ರಯತ್ವಂ ಎಂಬುದಾಗಿ ವಿಶಿಷ್ಟಪಕ್ಷವನ್ನು ಅಂಗೀಕರಿಸುತ್ತೇವೆ ಎಂದರೆ, ಈ ಪಕ್ಷದಲ್ಲಿಯೂ ಸಿದ್ಧಸಾಧನತಾ ಬರುವುದರಿಂದ ಈ ಪಕ್ಷವೂ ಸರಿಯಲ್ಲ.

ಹೇಗೆಂದರೆ - ಘಟಾದಿಗಳಲ್ಲಿ ಒಂದು ವ್ಯವಸ್ಥೆ ಇದೆ. ಈ ದೇಶದಲ್ಲಿ ಘಟವು ಸತ್ ಆಗಿದ್ದರೆ ದೇಶಾಂತರದಲ್ಲಿ ಅದೇ ಘಟ ಅಸತ್ ಆಗಿರುತ್ತದೆ. ಹೀಗೆ ಘಟಾದಿಗಳಿಗೆ ದೇಶ - ಕಾಲ ವ್ಯವಸ್ಥೆಯಿಂದ ಸತ್ವ-ಅಸತ್ವ ಎರಡನ್ನೂ ಹೇಳಬಹುದಾಗಿದೆ. ಹಾಗಾದರೆ ಈ ದೇಶ-ಕಾಲಗಳಲ್ಲಿ ಸತ್ ಆಗಿರುವ ಘಟದಲ್ಲಿ ದೇಶಾಂತರೀಯ ಕಾಲಾಂತರೀಯ ಸತ್ವ ಇಲ್ಲವಾದ್ದರಿಂದ ಸತ್ವಾನಾಶ್ರಯತ್ವ ಘಟದಲ್ಲಿ ಬಂತು. ಅದರಂತೆ ಈ ದೇಶ-ಕಾಲಗಳಲ್ಲಿ ಸತ್ ಆಗಿರುವ ಘಟದಲ್ಲಿ ಏತದ್ದೇಶೀಯ - ಏತತ್ಕಾಲೀನ ಅಸತ್ವ ಇಲ್ಲವಾದ್ದರಿಂದ ಅಸತ್ವಾನಾಶ್ರಯತ್ವವೂ ಘಟದಲ್ಲಿ ಬಂತು. ಈ ರೀತಿಯಾಗಿ ದೇಶ-ಕಾಲ ವ್ಯವಸ್ಥೆಯನ್ನಾಧರಿಸಿ ಪ್ರಪಂಚದಲ್ಲಿ ಸತ್ವಾನಾಶ್ರಯತ್ವ-ಅಸತ್ವಾನಾಶ್ರಯತ್ವ-ಗಳನ್ನು ಹೇಳಬಹುದಾದ್ದರಿಂದ (ಈ ವಿವಕ್ಷೆಯಿಂದ ಸತ್ವಾನಾಶ್ರಯತ್ವ-ಅಸತ್ವಾನಾಶ್ರಯತ್ವಗಳು ಪ್ರಪಂಚದಲ್ಲಿ ಸಿದ್ಧವಾದ್ದರಿಂದ) ಪುನಃ ಸಿದ್ಧಸಾಧನತಾ ದೋಷವೇ ಬರುತ್ತದೆ.

ಆದ್ದರಿಂದ ಮಿಥ್ಯಾತ್ವ ಎಂದರೆ ಸದಸದ್ವೈಲಕ್ಷಣ್ಯ ಎಂಬುದಾಗಿ ಅರ್ಥ ಹೇಳುವುದು ಸಮಂಜಸವಲ್ಲ ಎಂದು ಸಿದ್ಧವಾಗುತ್ತದೆ.

ನಾವು ಸದಸದ್ವೈಲಕ್ಷಣ್ಯ ಎಂದರೆ ಸದಸತ್ವಾನಾಶ್ರಯತ್ವ ಎಂದು ಅರ್ಥ ಹೇಳುತ್ತೇವೆ. ಒಂದು ಸತ್‌ಪದಾರ್ಥ ಮತ್ತೊಂದು ಸತ್‌ಪದಾರ್ಥದಿಂದ ಭಿನ್ನವಾಗಿದ್ದರಿಂದ ಅದರಲ್ಲಿ ಸದ್ವೈಲಕ್ಷಣ್ಯ ಬರಬಹುದು. ಆದರೆ ಅದೂ ಒಂದು ಸತ್‌ಪದಾರ್ಥವೇ ಆಗಿದ್ದರಿಂದ (ಸತ್ವಕ್ಕೆ ಆಶ್ರಯವೇ ಆಗಿರುವುದರಿಂದ) ಸತ್ವಕ್ಕೆ ಅನಾಶ್ರಯವಾಗಲು ಸಾಧ್ಯವಿಲ್ಲ. ಆದ್ದರಿಂದ ಪ್ರಪಂಚದಲ್ಲಿ ಸದಸತ್ವಾನಾಶ್ರಯತ್ವ ಬಾರದ ಕಾರಣ ಸಿದ್ಧಸಾಧನತಾ ಬರುವುದಿಲ್ಲ ಎಂಬುದಾಗಿ ಶಂಕಿಸಿದರೆ, ಅದು ಸರಿಯಲ್ಲ.

ಏಕೆಂದರೆ, ಸದಸತ್ವಾನಾಶ್ರಯತ್ವ ಎನ್ನುವಲ್ಲಿ

1) ಸಚ್ಚ ತತ್ ಅಸಚ್ಚ ಸದಸತ್, ಸದಸತಃ ಭಾವಃ ಸದಸತ್ವಂ, ತಸ್ಯ ಅನಾಶ್ರಯತ್ವಂ। ಸದಸತ್ ಆದ (ಸತ್ ಆದ ಅಸತ್ತೂ ಆದ) ವಸ್ತುವಿನಲ್ಲಿ ಇರುವ ಸದಸತ್ವ ಎಂಬ ಧರ್ಮಕ್ಕೆ ಆಶ್ರಯವಲ್ಲ ಎಂದು ಅರ್ಥ ಹೇಳುತ್ತೀರೋ ?

2) ಸಚ್ಚ ಅಸಚ್ಚ ಸದಸತೀ, ತಯೋಃ ಭಾವಃ ಸದಸತ್ವಂ, ತಸ್ಯ ಅನಾಶ್ರಯತ್ವಂ। (ಸತ್ವ ಹಾಗೂ ಅಸತ್ವ ಎರಡಕ್ಕೂ ಆಶ್ರಯವಲ್ಲ) ಎಂದು ಅರ್ಥ ಹೇಳುತ್ತೀರೋ ?

3) ಸತ್ವಾನಾಶ್ರಯತ್ವೇ ಸತಿ ಅಸತ್ವಾನಾಶ್ರಯತ್ವಂ । ಸತ್ವಾನಾಶ್ರಯತ್ವದಿಂದ ಸಹಿತವಾದ ಅಸತ್ವಾನಾಶ್ರಯತ್ವ) ಎಂಬ ವಿಶಿಷ್ಟವಾದದ್ದು ಎಂದು ಅರ್ಥ ಹೇಳುತ್ತೀರೋ?

ಸದಸತ್ವಾನಾಶ್ರಯತ್ವ ಎಂದರೆ, ಸದಸತ್ ಆದ ವಸ್ತುವಿನಲ್ಲಿ ಇರುವ ಸದಸತ್ವ ಎಂಬ ಧರ್ಮಕ್ಕೆ ಆಶ್ರಯವಲ್ಲ ಎಂದು ಹೇಳುವುದು ಸರಿಯಲ್ಲ. ಏಕೆಂದರೆ - ಪ್ರಪಂಚವು ನಮ್ಮ ಪ್ರಕಾರ ಸತ್ವೈಕಸ್ವಭಾವವಾಗಿದೆ. (ಅಂದರೆ ಕೇವಲ ಸತ್ ಆಗಿದೆ. ಅದರಲ್ಲಿ ಸತ್ವವು ಮಾತ್ರ ಇದೆ.) ಹೀಗಾಗಿ ಪ್ರಪಂಚದಲ್ಲಿ ಸತ್ವ ಮಾತ್ರ ಇದೆಯೇ ಹೊರತು ಸದಸತ್ವ ಇಲ್ಲ. ಪ್ರಪಂಚವು ಸದಸತ್ವಕ್ಕೆ ಆಶ್ರಯವಾಗಿಲ್ಲ. ಸದಸತ್ವಾನಾಶ್ರಯತ್ವವು ಪ್ರಪಂಚದಲ್ಲಿ ಬರುವುದರಿಂದ (ಸಿದ್ಧವಾದ ಸದಸತ್ವಾನಾಶ್ರಯತ್ವವನ್ನೇ ಸಾಧಿಸಿದಂತಾಗುವುದರಿಂದ) ಸಿದ್ಧಸಾಧನತಾದೋಷವು ಪುನಃ ಬಂದೇ ಬರುತ್ತದೆ.

ನಾವು ಸದಸತ್ತ್ವಾನಾಶ್ರಯತ್ವ ಎಂದರೆ ಸದಸತ್ತ್ವ ಎಂಬ ಧರ್ಮಕ್ಕೆ ಆಶ್ರಯ ಅಲ್ಲ ಎಂದು ಅರ್ಥ ಹೇಳುವುದಿಲ್ಲ. ಹಾಗೆ ಹೇಳುತ್ತಿದ್ದರೆ ನೀವು ಶಂಕಿಸಿದಂತೆ ಸಿದ್ಧಸಾಧನತಾ ಬರುತ್ತಿತ್ತು . ಕಿಂತು -

ಸಚ್ಚ ಅಸಚ್ಚ ಸದಸತೀ, ತಯೋರ್ಭಾವಃ ಸದಸತ್ತ್ವಂ, ತಸ್ಯ ಅನಾಶ್ರಯತ್ವಂ ಎಂಬುದಾಗಿ ವಿಗ್ರಹ ಮಾಡಿಕೊಂಡು ಸತ್ತ್ವಾನಾಶ್ರಯತ್ವ - ಅಸತ್ತ್ವಾನಾಶ್ರಯತ್ವ ಎಂಬುದಾಗಿ ಪ್ರತ್ಯೇಕವಾಗಿ ಉಭಯಾನಾಶ್ರಯತ್ವವನ್ನೂ ಹೇಳುತ್ತೇವೆ. ಪ್ರಪಂಚದಲ್ಲಿ ಅಸತ್ತ್ವಾನಾಶ್ರಯತ್ವ ಬಂದರೂ ಸತ್ತ್ವಾನಾಶ್ರಯತ್ವ ಬರುವುದಿಲ್ಲವಾದ್ದರಿಂದ ಸಿದ್ಧಸಾಧನತಾ ಬರುವುದಿಲ್ಲ ಎಂಬುದಾಗಿ ಶಂಕಿಸಿದರೆ, ಅದೂ ಸರಿಯಲ್ಲ.

ಏಕೆಂದರೆ ಹೀಗೆ ಹೇಳಿದರೂ ಅಸತ್ತ್ವಾನಾಶ್ರಯತ್ವ ಎಂಬ ಅಂಶ ಸಿದ್ಧವಾಗಿರುವ ಕಾರಣ ಅಂಶೇ ಸಿದ್ಧಸಾಧನತಾದೋಷ (ಪರಿಹಾರವಾಗುವುದಿಲ್ಲ) ಬಂದೇ ಬರುತ್ತದೆ.

ನಾವು ಸದಸತ್ತ್ವಾನಾಶ್ರಯತ್ವ ಎಂದರೆ ಸತ್ತ್ವಾನಾಶ್ರಯತ್ವೇ ಸತಿ ಅಸತ್ತ್ವಾನಾಶ್ರಯತ್ವಂ ಎಂಬುದಾಗಿ ವಿಶಿಷ್ಟಪಕ್ಷವನ್ನು ಅಂಗೀಕರಿಸುತ್ತೇವೆ ಎಂದರೆ, ಈ ಪಕ್ಷದಲ್ಲಿಯೂ ಸಿದ್ಧಸಾಧನತಾ ಬರುವುದರಿಂದ ಈ ಪಕ್ಷವೂ ಸರಿಯಲ್ಲ.

ಹೇಗೆಂದರೆ - ಘಟಾದಿಗಳಲ್ಲಿ ಒಂದು ವ್ಯವಸ್ಥೆ ಇದೆ. ಈ ದೇಶದಲ್ಲಿ ಘಟವು ಸತ್ ಆಗಿದ್ದರೆ ದೇಶಾಂತರದಲ್ಲಿ ಅದೇ ಘಟ ಅಸತ್ ಆಗಿರುತ್ತದೆ. ಹೀಗೆ ಘಟಾದಿಗಳಿಗೆ ದೇಶ - ಕಾಲ ವ್ಯವಸ್ಥೆಯಿಂದ ಸತ್ತ್ವ-ಅಸತ್ತ್ವ ಎರಡನ್ನೂ ಹೇಳಬಹುದಾಗಿದೆ. ಹಾಗಾದರೆ ಈ ದೇಶ-ಕಾಲಗಳಲ್ಲಿ ಸತ್ ಆಗಿರುವ ಘಟದಲ್ಲಿ ದೇಶಾಂತರೀಯ ಕಾಲಾಂತರೀಯ ಸತ್ತ್ವ ಇಲ್ಲವಾದ್ದರಿಂದ ಸತ್ತ್ವಾನಾಶ್ರಯತ್ವ ಘಟದಲ್ಲಿ ಬಂತು. ಅದರಂತೆ ಈ ದೇಶ-ಕಾಲಗಳಲ್ಲಿ ಸತ್ ಆಗಿರುವ ಘಟದಲ್ಲಿ ಏತದ್ದೇಶೀಯ - ಏತತ್ಕಾಲೀನ ಅಸತ್ತ್ವ ಇಲ್ಲವಾದ್ದರಿಂದ ಅಸತ್ತ್ವಾನಾಶ್ರಯತ್ವವೂ ಘಟದಲ್ಲಿ ಬಂತು. ಈ ರೀತಿಯಾಗಿ ದೇಶ-ಕಾಲ ವ್ಯವಸ್ಥೆಯನ್ನಾಧರಿಸಿ ಪ್ರಪಂಚದಲ್ಲಿ ಸತ್ತ್ವಾನಾಶ್ರಯತ್ವ-ಅಸತ್ತ್ವಾನಾಶ್ರಯತ್ವ-ಗಳನ್ನು ಹೇಳಬಹುದಾದ್ದರಿಂದ (ಈ ವಿವಕ್ಷೆಯಿಂದ ಸತ್ತ್ವಾನಾಶ್ರಯತ್ವ-ಅಸತ್ತ್ವಾನಾಶ್ರಯತ್ವಗಳು ಪ್ರಪಂಚದಲ್ಲಿ ಸಿದ್ಧವಾದ್ದರಿಂದ) ಪುನಃ ಸಿದ್ಧಸಾಧನತಾ ದೋಷವೇ ಬರುತ್ತದೆ.

ಆದ್ದರಿಂದ ಮಿಥ್ಯಾತ್ವ ಎಂದರೆ ಸದಸದ್ವೈಲಕ್ಷಣ್ಯ ಎಂಬುದಾಗಿ ಅರ್ಥ ಹೇಳುವುದು ಸಮಂಜಸವಲ್ಲ ಎಂದು ಸಿದ್ಧವಾಗುತ್ತದೆ.

**ಟೀಕಾ :- ಅಥೈವಂ ಬ್ರೂಯಾತ್ ಯಾದೃಶಂ ಸದಸದ್ವೈಲಕ್ಷಣ್ಯಂ ಸದ್ವಾದಿನಾಮನಿಷ್ಟಂ ತನ್ಮಿಥ್ಯಾತ್ವಮಿತಿ । ತತ್ರಾಪ್ಯೇತದೇವೋತ್ತರಮ್ । ತಥಾ ಹಿ, ಸದಸದ್ವೈಲಕ್ಷಣ್ಯೇ ಮಿಥ್ಯಾತ್ವೇಽಂಗೀಕ್ರಿಯಮಾಣೇ ಸತಿ ಅಸಿದ್ಧಸಾಧನತಾ ಅಪ್ರಸಿದ್ಧವಿಶೇಷಣತಾ ಭವತೀತಿ । ಏತಚ್ಚ ದೃಷ್ಟಾಂತವ್ಯುದಾಸಪ್ರಸ್ತಾವೇ ವಕ್ಷ್ಯಾಮಃ । ಸರ್ವತ್ರ ಅಸದ್ವೈಲಕ್ಷಣ್ಯಸಾಧನವೈಯರ್ಥ್ಯಂ ಚ ।**

**ಅನುವಾದ :-** ಮಾಯಾವಾದಿಗಳು ಶಂಕಿಸುತ್ತಾರೆ. - ಯಾವ ವಿಧವಾದ ಸದಸದ್ವೈಲಕ್ಷಣ್ಯವು ಸದ್ವಾದಿಗಳಾದ ನಿಮಗೆ ಅನಿಷ್ಟವಾಗಿದೆಯೋ ಅದನ್ನೇ ಮಿಥ್ಯಾತ್ವ ಎಂಬುದಾಗಿ ಅಂಗೀಕರಿಸುತ್ತೇವೆ. ಅಂದರೆ - ಘಟಪಟಾದಿ ವಿಶ್ವಕ್ಕೆ ದೇಶಾಂತರ - ಕಾಲಾಂತರಗಳಲ್ಲಿ ಅಸತ್ವವು ಸದ್ವಾದಿ-ಅಸದ್ವಾದಿಗಳಾದ ಇಬ್ಬರಿಗೂ ಸಮ್ಮತವಾಗಿದೆ. ಸ್ವದೇಶ-ಕಾಲಗಳಲ್ಲಿ ಸತ್ವವು ಸದ್ವಾದಿಗಳಾದ (ಜಗತ್ತು ಸತ್ ಎಂದು ಹೇಳುವ) ನಿಮಗೆ ಇಷ್ಟವೇ ಆಗಿದೆ. ಪ್ರಕೃತ ಅದೂ ಇಲ್ಲ. (ಘಟಪಟಾದಿ ಪ್ರಪಂಚಕ್ಕೆ ಸ್ವದೇಶಕಾಲ-ಗಳಲ್ಲಿಯೂ ಸತ್ವ ಇಲ್ಲ) ಎಂಬುದಾಗಿ ಹೇಳುತ್ತೇವೆ. ಹಾಗಾದರೆ ಸರ್ವಥಾ ಸತ್ವಾನಧಿಕರಣತ್ವೇ ಸತಿ ಅಸತ್ವಾನಧಿಕರಣತ್ವಂ ಸದಸತ್ವಾನಧಿಕರಣತ್ವಂ ಎಂದು ಹೇಳಿದಂತಾಗುತ್ತದೆ. ಇಂತಹ ಸದಸದ್ವೈಲಕ್ಷಣ್ಯವು ಸದ್ವಾದಿಗಳಾದ ನಿಮಗೆ ಅನಿಷ್ಟವಾಗಿದೆಯಾದ್ದರಿಂದ ಅದನ್ನೇ ನಾವು ಸಾಧ್ಯವನ್ನಾಗಿ ವಿವಕ್ಷಿಸುತ್ತೇವೆ. ಹಾಗಾಗಿ ಸಿದ್ಧಸಾಧನತಾದೋಷ ಬರುವುದಿಲ್ಲ.

ಈರೀತಿಯಾಗಿ ಮಾಯಾವಾದಿಗಳು ಆಶಂಕಿಸಿದರೆ, ಅದಕ್ಕೂ -

''**ಸದಸದ್ವೈಲಕ್ಷಣ್ಯೇ ಮಿಥ್ಯಾತ್ವೇ ಸಿದ್ಧಸಾಧನತಾ**''

ಎಂಬ ಮೂಲವೇ ಉತ್ತರ. ಅದು ಹೇಗೆಂದರೆ :- ಈ ಪಕ್ಷದಲ್ಲಿ 'ಮಿಥ್ಯಾತ್ವೇ ಅಸಿದ್ಧಸಾಧನತಾ' ಎಂಬುದಾಗಿ ಪದಚ್ಛೇದ ಮಾಡಿಕೊಳ್ಳಬೇಕು. ಹಾಗಾದರೆ, ಸದಸದ್ವೈಲಕ್ಷಣ್ಯೇ ಮಿಥ್ಯಾತ್ವೇಽಂಗೀಕ್ರಿಯಮಾಣೇ ಸತಿ = ಸರ್ವಥಾ ಸತ್ವಾನಧಿಕರಣತ್ವೇ ಸತಿ ಅಸತ್ವಾನಧಿಕರಣತ್ವರೂಪವಾದ ಸದಸದ್ವೈಲಕ್ಷಣ್ಯವನ್ನು (ಮಿಥ್ಯಾತ್ವವನ್ನು) ಅಂಗೀಕರಿಸುವುದಾದರೆ ಅಸಿದ್ಧಸಾಧನತಾ = ಅಪ್ರಸಿದ್ಧವಿಶೇಷಣತಾ ದೋಷ ಬರುತ್ತದೆ ಎಂಬುದಾಗಿ ಮೂಲದ ಅಭಿಪ್ರಾಯ ತಿಳಿಯುವುದು.

ಸರ್ವಥಾ ಸತ್ವಾನಧಿಕರಣತ್ವೇ ಸತಿ ಅಸತ್ವಾನಧಿಕರಣತ್ವ ರೂಪವಾದ ಸದಸದ್ವೈಲಕ್ಷಣ್ಯವನ್ನು (ಮಿಥ್ಯಾತ್ವವನ್ನು) ಅಂಗೀಕರಿಸಿದರೆ, ಅಪ್ರಸಿದ್ಧವಿಶೇಷಣತಾ

ದೋಷ ಹೇಗೆ ಬರುತ್ತದೆ ? ಎಂದರೆ ಅದನ್ನು ''ಶುಕ್ತಿರಜತಸ್ಯಾಪ್ಯನಿರ್ವಚನೀಯತ್ವಾ-ಭಾವಾತ್ ಸಾಧ್ಯವಿಕಲೋ ದೃಷ್ಟಾಂತಃ'' ಎನ್ನುವ (ವಾಕ್ಯವನ್ನು ವ್ಯಾಖ್ಯಾನ ಮಾಡುವ ಪ್ರಸಂಗದಲ್ಲಿ) ದೃಷ್ಟಾಂತ ನಿರಾಕರಣೆ ಮಾಡುವ ಸಂದರ್ಭದಲ್ಲಿ ನಿರೂಪಣೆ ಮಾಡುವವರಿದ್ದೇವೆ.

ಮತ್ತು ಸದ್ವೈಲಕ್ಷಣ್ಯ-ಅಸದ್ವೈಲಕ್ಷಣ್ಯರೂಪ ಉಭಯವೈಲಕ್ಷಣ್ಯಸಾಧನ-ಪಕ್ಷದಲ್ಲಿ ಹಾಗೂ ಸತ್ವಾನಾಶ್ರಯತ್ವ-ಅಸತ್ವಾನಾಶ್ರಯತ್ವ ರೂಪ ಉಭಯಾನಾಶ್ರಯತ್ವ-ಸಾಧನಪಕ್ಷದಲ್ಲಿ ಮತ್ತು ಸತ್ವಾನಾಶ್ರಯತ್ವೇ ಸತಿ ಅಸತ್ವಾನಾಶ್ರಯತ್ವ ರೂಪ ವಿಶಿಷ್ಟಸಾಧನಪಕ್ಷದಲ್ಲಿ ಈ ಮೂರೂ ಪಕ್ಷಗಳಲ್ಲಿಯೂ ಸಹ 'ಅಸದ್ವೈಲಕ್ಷಣ್ಯಸಾಧನ ಮಾಡುವುದಾದರೆ ಸಿದ್ಧಸಾಧನತಾದೋಷ ಬರುತ್ತದೆ' ಎಂಬುದಾಗಿ ಒಂದು ದೋಷವನ್ನು ಹೇಳಿ ಪ್ರಕೃತ ವ್ಯರ್ಥವಿಶೇಷ್ಯತಾರೂಪ ಮತ್ತೊಂದು ದೋಷವನ್ನೂ ಹೇಳುತ್ತಾರೆ -

**''ಸರ್ವತ್ರ ಅಸದ್ವೈಲಕ್ಷಣ್ಯಸಾಧನವೈಯರ್ಥ್ಯಂ ಚ ''**

ಎಂಬುದಾಗಿ. ನಮಗೆ ಅಸದ್ವೈಲಕ್ಷಣ್ಯವು ಪ್ರಪಂಚದಲ್ಲಿ ಸಿದ್ಧವೇ ಆಗಿರುವುದರಿಂದ, ಈ ಮೂರೂ ಪಕ್ಷಗಳಲ್ಲಿಯೂ ಸಹ ಅಸದ್ವೈಲಕ್ಷಣ್ಯ ಎಂಬ ವಿಶೇಷಭಾಗವನ್ನು ಸಾಧಿಸುವುದು ವ್ಯರ್ಥವೇ ಆಗುತ್ತದೆ ಎಂದು ಅಭಿಪ್ರಾಯ.

**ಟೀಕಾ :- ಸತ್ಯವಿವೇಕಸ್ಯ ಮಿಥ್ಯಾಭಾವಸ್ಯ ಸಾಧ್ಯತ್ವಾನ್ನೋಕ್ತದೋಷ ಇತಿ ಚೇತ್, ನ । ಸತ್ಯಾಂತರವಿವೇಕಾಂಗೀಕಾರೇಣ ಸಿದ್ಧಸಾಧನತ್ವಾತ್ ।**

**ಸತ್ಯತಾನಾಶ್ರಯತ್ವಂ ಸತ್ಯವಿವೇಕ ಇತಿ ಚೇತ್, ಕೇಯಂ ಸತ್ಯತಾ ? ಅರ್ಥಕ್ರಿಯಾಸಾಮರ್ಥ್ಯಾದಿಲಕ್ಷಣಾ ಚೇತ್ ತದನಾಶ್ರಯತ್ವಸಾಧನೇ ಪರಸ್ಯಾಪಸಿದ್ಧಾಂತಪ್ರಸಕ್ತಿಃ । ತದನ್ಯಾ ಚೇತ್ ಸಿದ್ಧಸಾಧನತೈವ ।**

**ಅನುವಾದ :-** ಸಾಧ್ಯವಾದ ಮಿಥ್ಯಾತ್ವ ಎಂದರೆ ಸದಸದ್ವೈಲಕ್ಷಣ್ಯ ಎಂದು ಹೇಳುವುದಿಲ್ಲ. ಕಿಂತು ಸತ್ಯವಿವೇಕಃ ಮಿಥ್ಯಾತ್ವಂ ಎಂದು ಹೇಳುತ್ತೇವೆ. ಜಗತ್ತನ್ನು ನೀವು ಸತ್ಯ ಎಂದೇ ಅಂಗೀಕರಿಸಿದ್ದರಿಂದ ಅಲ್ಲಿ ಸತ್ಯವಿವೇಕ ರೂಪವಾದ ಮಿಥ್ಯಾತ್ವ ಇಲ್ಲ (ಸಿದ್ಧವಾಗಿಲ್ಲ)ವಾದ್ದರಿಂದ ಹಿಂದೆ ಹೇಳಿದ ಸಿದ್ಧಸಾಧನತಾದೋಷ ಬರುವುದಿಲ್ಲ ಎಂಬುದಾಗಿ ಶಂಕೆ ಮಾಡಿದರೆ, ಅದು ಸರಿಯಲ್ಲ.

ಜಗತ್ತು ಸತ್ಯವಾದರೂ ಸಹ ಒಂದು ಸತ್ಯಪದಾರ್ಥ ಮತ್ತೊಂದು ಸತ್ಯಪದಾರ್ಥದಿಂದ ಭಿನ್ನವಾಗಿದೆಯಾದ್ದರಿಂದ (ಸತ್ಯಾಂತರವಿವೇಕವನ್ನು ಅಂಗೀಕರಿಸಿದ್ದರಿಂದ) ಪ್ರಪಂಚದಲ್ಲಿ ಸತ್ಯವಿವೇಕರೂಪವಾದ ಮಿಥ್ಯಾತ್ವವು ಸಿದ್ಧವಾಗಿದೆಯಾದ ಕಾರಣ ಸಿದ್ಧಸಾಧನತಾದೋಷ ಬಂದೇ ಬರುತ್ತದೆ.

ಸತ್ಯವಿವೇಕ ಎಂದರೆ ಸತ್ಯತಾನಾಶ್ರಯತ್ವಂ ಎಂದು ಹೇಳುತ್ತೇವೆ. ಒಂದು ಸತ್‌ಪದಾರ್ಥ ಮತ್ತೊಂದು ಸತ್‌ಪದಾರ್ಥದಿಂದ ಭಿನ್ನವಾಗಿದ್ದರೂ ಸಹ (ಸತ್ಯವಿವೇಕ ಬಂದರೂ ಸಹ) ಅದು ಸತ್ಯತ್ವಕ್ಕೆ ಅನಾಶ್ರಯ (ಅದರಲ್ಲಿ ಸತ್ಯತ್ವ ಇಲ್ಲ) ಎಂದು ಹೇಳಲು ಬರುವುದಿಲ್ಲ. ಆದ್ದರಿಂದ ಸಿದ್ಧಸಾಧನತಾ ಬರುವುದಿಲ್ಲ ಎಂಬುದಾಗಿ ಶಂಕಿಸಿದರೆ,

ಸತ್ಯತಾಅನಾಶ್ರಯತ್ವಂ ಎಂದು ಹೇಳುವುದಾದರೆ, ಅದರಲ್ಲಿ ಅಂತರ್ಗತವಾದ ಸತ್ಯತಾ ಎಂದರೆ ಏನು ? ಎಂದು ಮೊದಲು ತಿಳಿಸಬೇಕು. ಸತ್ಯತಾ ಎಂದರೆ ಏನು ? ಅರ್ಥಕ್ರಿಯಾ(ಕಾರಿತ್ವ)ಸಾಮರ್ಥ್ಯ - ವ್ಯವಹಾರವಿಷಯತ್ವಗಳೇ ಸತ್ಯತಾ ಎಂದು ಹೇಳುತ್ತೀರೋ ? ಅಥವಾ ಸತ್ತಾಜಾತ್ಯಧಿಕರಣತ್ವವು ಸತ್ಯತಾ ಎಂದು ಹೇಳುತ್ತೀರೋ?

ಸತ್ಯತಾ ಎಂದರೆ ಅರ್ಥಕ್ರಿಯಾಕಾರಿತ್ವ ಅಥವಾ ವ್ಯವಹಾರವಿಷಯತ್ವ ಎಂದು ಹೇಳಿದರೆ, ಪ್ರಪಂಚದಲ್ಲಿ ಇಂತಹ ಸತ್ಯತಾನಾಶ್ರಯತ್ವವನ್ನು ಸಾಧಿಸಿದರೆ ಅರ್ಥಕ್ರಿಯಾಕಾರಿತ್ವಾಭಾವವನ್ನು ಹಾಗೂ ವ್ಯವಹಾರವಿಷಯತ್ವಾಭಾವವನ್ನು ಸಾಧಿಸಿ-ದಂತಾಗುತ್ತದೆ. ಪ್ರಕೃತ ಮಾಯಾವಾದಸಿದ್ಧಾಂತದಲ್ಲಿ ಪ್ರಪಂಚಕ್ಕೆ ಅರ್ಥಕ್ರಿಯಾಕಾರಿತ್ವವನ್ನೇ ಅಂಗೀಕರಿಸಿರುವುದರಿಂದ, ವ್ಯವಹಾರವಿಷಯತ್ವವನ್ನೇ ಅಂಗೀಕರಿಸಿರುವುದರಿಂದ ಅದಕ್ಕೆ ವಿರುದ್ಧವಾಗಿ ಈಗ ಪ್ರಪಂಚಕ್ಕೆ ಅರ್ಥಕ್ರಿಯಾಕಾರಿತ್ವಾಭಾವವನ್ನು ಸಾಧಿಸಿದರೆ, ವ್ಯವಹಾರವಿಷಯತ್ವಾಭಾವವನ್ನು ಸಾಧಿಸಿದರೆ ಅಪಸಿದ್ಧಾಂತದೋಷ ಬರುತ್ತದೆ. ಆದ್ದರಿಂದ ಸತ್ಯತಾ ಎಂದರೆ ಅರ್ಥಕ್ರಿಯಾಕಾರಿತ್ವ, ವ್ಯವಹಾರವಿಷಯತ್ವ ಎಂಬ ಪಕ್ಷ ಸರಿಯಲ್ಲ.

ಸತ್ಯತಾ ಎಂದರೆ ಸತ್ತಾಜಾತ್ಯಧಿಕರಣತ್ವ ಎಂದು ಹೇಳುತ್ತೇವೆ ಎಂದರೆ, ಈ ಎರಡನೇ ಪಕ್ಷವೂ ಸರಿಯಲ್ಲ. ಏಕೆಂದರೆ, ಅನುಗತವಾದ ಜಾತಿಯನ್ನು ನಾವು ಅಂಗೀಕರಿಸಿಲ್ಲವಾದ್ದರಿಂದ (ಸತ್ತಾಜಾತಿಯನ್ನು ಒಪ್ಪಿಲ್ಲವಾದ್ದರಿಂದ) ಸತ್ತಾಜಾತ್ಯನಧಿಕರಣತ್ವವು ಪ್ರಪಂಚದಲ್ಲಿ ನಮಗೆ ಸಿದ್ಧವೇ ಆಗಿದೆ. ಸಿದ್ಧವಾದದ್ದನ್ನೇ ಸಾಧಿಸಿದರೆ ಪುನಃ ಸಿದ್ಧಸಾಧನತಾ ದೋಷವೇ ಬರುತ್ತದೆ.




**ಟೀಕಾ :- ಸತ್ಯಮಬಾಧ್ಯಂ ಬಾಧ್ಯಂ ಮಿಥ್ಯೇತಿ ತದ್ವಿವೇಕ ಇತಿ ಚೇತ್ । ತರ್ಹಿ ಬಾಧೋ ವಕ್ತವ್ಯಃ । ಅನ್ಯಥಾವಿಜ್ಞಾತಸ್ಯ ಸಮ್ಯಗ್‌ವಿಜ್ಞಾನಂ ಚೇತ್ ಸಿದ್ಧಸಾಧನತೈವ । ಕ್ಷಣಕತ್ವಾದಿನಾ ವಿಜ್ಞಾತಸ್ಯ ಪ್ರಪಂಚಸ್ಯ ಅಕ್ಷಣಿಕತ್ವಾದಿಬಾಧಕ-ಜ್ಞಾನವಿಷಯತ್ವಸ್ಯಾಸ್ಮಾಭಿಃ ಅಂಗೀಕೃತತ್ವಾತ್ ।**

**ಪ್ರತಿಪನ್ನೋಪಾಧೌ ತ್ರೈಕಾಲಿಕಸತ್ಯತಾನಿಷೇಧ ಇತಿ ಚೇತ್ । ನ । ಸತ್ಯತಾಯಾ ಏವಾದ್ಯಾಪ್ಯನಿರೂಪಣಾತ್ ॥**

**ಅನುವಾದ :-** ಸತ್ಯ ಎಂದರೆ ಅಬಾಧ್ಯ ಎಂದರ್ಥ. ಮಿಥ್ಯಾ ಎಂದರೆ ಬಾಧ್ಯ ಎಂದರ್ಥ. (ಶುಕ್ತಿರೂಪ್ಯಾದಿಗಳು ಮಿಥ್ಯಾ ಆಗಿವೆ ಎಂದರೆ ಬಾಧ್ಯವಾಗಿವೆ ಎಂದರ್ಥ.) ಹಾಗಾಗಿ 'ಸತ್ಯವಿವೇಕಃ ಮಿಥ್ಯಾತ್ವಂ' ಎಂದು ಹೇಳಿದಾಗ, ಸತ್ಯವಿವೇಕ ಎಂದರೇನು ? ಎಂಬ ಪ್ರಶ್ನೆಗೆ ''ಬಾಧ್ಯತ್ವಂ ಸತ್ಯವಿವೇಕಃ'' ಎಂಬುದಾಗಿ ಉತ್ತರ ಹೇಳಿದಂತಾಗುತ್ತದೆ. ಆದ್ದರಿಂದ ಮಿಥ್ಯಾತ್ವ ಎಂದರೆ ಬಾಧ್ಯತ್ವ ಎಂದು ಹೇಳುತ್ತೇವೆ ಎಂಬುದಾಗಿ ಶಂಕೆ ಮಾಡಿದರೆ, ಹಾಗಾದರೆ (ಬಾಧ್ಯತ್ವಂ ಮಿಥ್ಯಾತ್ವಂ ಎಂದು ಹೇಳುವುದಾದರೆ) ಬಾಧ ಎಂದರೆ ಏನು ? ಎಂಬುದಾಗಿ ಮೊದಲು ಹೇಳಬೇಕು. ಆದ್ದರಿಂದ ಬಾಧ ಎಂದರೇನು ತಿಳಿಸಿರಿ.

**ಬಾಧನಿರ್ವಚನ 1.**

ಬಾಧ ಎಂದರೆ -

**''ಅನ್ಯಥಾವಿಜ್ಞಾತಸ್ಯ ಸಮ್ಯಗ್‌ವಿಜ್ಞಾನಂ ಬಾಧಃ''**

ತಪ್ಪಾಗಿ ತಿಳಿದುಕೊಂಡದ್ದನ್ನು ಆಮೇಲೆ ಸರಿಯಾಗಿ ತಿಳಿದುಕೊಳ್ಳುವುದು ಬಾಧ. ಉದಾಹರಣೆಗೆ - ಶುಕ್ತಿಯನ್ನು ನೋಡಿ ಇದು ರಜತ ಎಂಬುದಾಗಿ ತಪ್ಪಾಗಿ ತಿಳಿಯುತ್ತೇವೆ. ಆನಂತರ ಹತ್ತಿರ ಹೋಗಿ ನೋಡಿದಾಗ ''ಇದು ರಜತ ಅಲ್ಲ, ಇದು ಶುಕ್ತಿ'' ಎಂಬುದಾಗಿ ಸರಿಯಾಗಿ ತಿಳಿದುಕೊಳ್ಳುತ್ತೇವೆ. ಇದೇ ಬಾಧ ಎಂಬುದಾಗಿ ಬಾಧನಿರ್ವಚನ ಮಾಡುತ್ತೇವೆ ಎಂಬುದಾಗಿ ಶಂಕಿಸಿದರೆ, ಅದು ಸರಿಯಲ್ಲ.

ಏಕೆಂದರೆ - ಈ ರೀತಿಯಾಗಿ ಬಾಧನಿರ್ವಚನ ಮಾಡುವುದಾದರೆ, ಪುನಃ ಸಿದ್ಧಸಾಧನತಾದೋಷವೇ ಬರುತ್ತದೆ. ಹೇಗೆಂದರೆ - ಶುಕ್ತಿಯನ್ನು ಮೊದಲು ತಪ್ಪಾಗಿ ತಿಳಿದು ಆನಂತರ ಅದನ್ನು ಸರಿಯಾಗಿ ತಿಳಿಯುವಂತೆ, ಜಗತ್ತನ್ನು ಮೊದಲು ಕ್ಷಣಿಕ

ಎಂದು ತಪ್ಪಾಗಿ ತಿಳಿದು ಅನಂತರ ಜಗತ್ತನ್ನು ಅಕ್ಷಣಿಕ (ಕ್ಷಣಿಕವಲ್ಲ - ಪಾರಮಾರ್ಥಿಕ ಸತ್ಯ) ಎಂಬುದಾಗಿ ಸರಿಯಾಗಿ ತಿಳಿಯುತ್ತೇವೆ. ಹೀಗಾಗಿ

**''ಅನ್ಯಥಾವಿಜ್ಞಾತಸ್ಯ ಸಮ್ಯಗ್‌ವಿಜ್ಞಾನಂ ಬಾಧಃ, ತದ್ವಿಷಯತ್ವಂ ಬಾಧ್ಯತ್ವಂ''**

ಎಂಬುದಾಗಿ ಬಾಧ್ಯತ್ವವನ್ನು ನಿರೂಪಿಸುವುದಾದರೆ ಇಂತಹ ಬಾಧ್ಯತ್ವವನ್ನು (ಈಗ ಹೇಳಿದ ಪ್ರಕಾರ) ಜಗತ್ತಿನಲ್ಲಿ ನಾವೂ ಅಂಗೀಕರಿಸಿದ್ದರಿಂದ 'ವಿಮತಂ ಮಿಥ್ಯಾ (ಬಾಧ್ಯಂ) ದೃಶ್ಯತ್ವಾತ್' ಎಂಬ ನಿಮ್ಮ ಅನುಮಾನಕ್ಕೆ ಸಿದ್ಧಸಾಧನತಾ ದೋಷವೇ ಬರುತ್ತದೆ. ಆದ್ದರಿಂದ 'ಅನ್ಯಥಾವಿಜ್ಞಾತಸ್ಯ ಸಮ್ಯಗ್‌ವಿಜ್ಞಾನಂ ಬಾಧಃ' ಎಂಬುದಾಗಿ ಬಾಧದ ನಿರ್ವಚನ ಮಾಡುವುದು ಸರಿಯಲ್ಲ.

**ಬಾಧನಿರ್ವಚನ 2.**

ಬಾಧ ಎಂದರೆ -

**'ಪ್ರತಿಪನ್ನೋಪಾಧೌ ತ್ರೈಕಾಲಿಕಸತ್ಯತಾನಿಷೇಧಃ'**

ಎಂದು ನಿರ್ವಚನ ಮಾಡುತ್ತೇವೆ. ಅಂದರೆ - ಸಂಯೋಗಸಂಬಂಧದಿಂದ ಅಥವಾ ಸಮವಾಯಸಂಬಂಧದಿಂದ ಪ್ರತಿಯೋಗಿಗೆ ಆಶ್ರಯವಾಗಿದೆ ಎಂದು ಪ್ರತಿಪನ್ನ(ಜ್ಞಾತ)ವಾದ ಉಪಾಧಿಯಲ್ಲಿ (ಧರ್ಮಿಯಲ್ಲಿ - ವಸ್ತುವಿನಲ್ಲಿ) ಹಿಂದೆ ಇಲ್ಲ ಈಗ ಇಲ್ಲ ಮುಂದೆಯೂ ಇಲ್ಲ ಎಂಬುದಾಗಿ ತ್ರೈಕಾಲಿಕಸತ್ಯತಾನಿಷೇಧ ಮಾಡುವುದೇ ಬಾಧ.

ಉದಾಹರಣೆಗೆ :- ಶುಕ್ತಿಯನ್ನು ನೋಡಿ ಇದು ರಜತ ಎಂದು ತಿಳಿಯುತ್ತೇವೆ. ಅಂದರೆ ಸಮವಾಯಸಂಬಂಧದಿಂದ ರಜತತ್ವಕ್ಕೆ ಆಶ್ರಯವಾಗಿದೆ ಪುರೋವೃತ್ತಿಪದಾರ್ಥ ಎಂದು ತಿಳಿಯುತ್ತೇವೆ. ಅಂತಹ ಪ್ರತಿಯೋಗಿಯಾದ ರಜತತ್ವಕ್ಕೆ ಆಶ್ರಯವಾಗಿ ಪ್ರತಿಪನ್ನವಾದ ಶುಕ್ತಿರೂಪ ಉಪಾಧಿಯಲ್ಲಿ (ನೇದಂ ರಜತಂ) ರಜತತ್ವಂ ನಾಸೀತ್ ನಾಸ್ತಿ ನ ಭವಿಷ್ಯತಿ ಎಂಬುದಾಗಿ ರಜತತ್ವಕ್ಕೆ ತ್ರೈಕಾಲಿಕಸತ್ಯತಾವನ್ನು ನಿಷೇಧಿಸುವುದರಿಂದ ರಜತವು ಬಾಧ್ಯವಾಗಿದೆ. ಹೀಗೆ ಬಾಧದ ನಿರ್ವಚನ ಮಾಡುತ್ತೇವೆ ಎಂದು ಶಂಕಿಸಿದರೆ, ಅದೂ ಸರಿಯಲ್ಲ.

ಏಕೆಂದರೆ - ಹೀಗೆ ಹೇಳಿದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಸತ್ಯತಾನಿರ್ವಚನ ಮಾಡಿದರೆ ಬಾಧನಿರ್ವಚನ ಕೂಡುತ್ತದೆ. (ಬಾಧಲಕ್ಷಣದಲ್ಲಿ ತ್ರೈಕಾಲಿಕ**ಸತ್ಯತಾ**ಪ್ರತಿಷೇಧಃ ಎಂಬುದಾಗಿ ಸತ್ಯತಾವು ಅಂತರ್ಗತವಾದ್ದರಿಂದ.)

ಬಾಧನಿರ್ವಚನ ಮಾಡಿದರೆ ಅಬಾಧ್ಯತ್ವರೂಪ ಸತ್ಯತಾದ ನಿರ್ವಚನ ಕೂಡುತ್ತದೆ. (ಅಭಾವನಿರೂಪಣೆಯು ಪ್ರತಿಯೋಗಿನಿರೂಪಣಾಧೀನವಾದ್ದರಿಂದ, ಬಾಧಾಭಾವ(ಅಬಾಧ್ಯತ್ವ)ರೂಪಸತ್ಯತಾನಿರೂಪಣೆ ಮಾಡಬೇಕಾದರೆ ಪ್ರತಿಯೋಗಿಯಾದ ಬಾಧದ ನಿರೂಪಣೆ ಮಾಡಬೇಕಾದ್ದರಿಂದ.)

ಹೀಗೆ ಅನ್ಯೋನ್ಯಸಾಪೇಕ್ಷವಾದ್ದರಿಂದ ಅನ್ಯೋನ್ಯಾಶ್ರಯದೋಷ ಬರುತ್ತದೆ.

ಬಾಧದ ಲಕ್ಷಣ ಹೇಳುತ್ತಿದ್ದೀರಿ. ಈ ಬಾಧಲಕ್ಷಣದಲ್ಲಿ ಸತ್ಯತಾ ಸೇರಿದ್ದರಿಂದ, ಬಾಧಜ್ಞಾನ ಆಗಬೇಕಾದರೆ ಸತ್ಯತಾಜ್ಞಾನ ಆಗಬೇಕು. ಆ ಸತ್ಯತಾಜ್ಞಾನ ಆಗಬೇಕಾದರೆ ಬಾಧಜ್ಞಾನ ಆಗಬೇಕು. (ಸತ್ಯತ್ವ ಎಂದರೆ ಅಬಾಧ್ಯತ್ವ. ಅಬಾಧ್ಯತ್ವ (ಬಾಧಾಭಾವ) ಜ್ಞಾನವಾಗಬೇಕಾದರೆ ಪ್ರತಿಯೋಗಿಯಾದ ಬಾಧದ ಜ್ಞಾನ ಆಗಬೇಕು.) ಈ ರೀತಿಯಾಗಿ ಎರಡುಜ್ಞಾನಗಳು ಪರಸ್ಪರ ಸಾಪೇಕ್ಷವಾಗಿದ್ದರಿಂದ ಜ್ಞಪ್ತೌ ಆತ್ಮಾಶ್ರಯದೋಷ ಬರುತ್ತದೆ ಎಂದು ಅಭಿಪ್ರಾಯ.

ಹೀಗೆ ಅನ್ಯೋನ್ಯಾಶ್ರಯ ದೋಷ ಬರುವುದರಿಂದ ''ಪ್ರತಿಪನ್ನೋಪಾಧೌ ತ್ರೈಕಾಲಿಕಸತ್ಯತಾನಿಷೇಧಃ ಬಾಧಃ'' ಎಂಬುದಾಗಿಯೂ ಬಾಧನಿರ್ವಚನ ಮಾಡಲು ಬರುವುದಿಲ್ಲ ಎಂದು ಸಿದ್ಧವಾಗುತ್ತದೆ.

**ವಿಶೇಷ ವಿಚಾರ : ಬಾಧಲಕ್ಷಣದಲ್ಲಿ ಪದಗಳ ಕೃತ್ಯ**

ಶ್ರೀಶ್ರೀನಿವಾಸತೀರ್ಥರು ತಮ್ಮ ವ್ಯಾಖ್ಯಾನದಲ್ಲಿ

**ಪ್ರತಿಪನ್ನೋಪಾಧೌ ತ್ರೈಕಾಲಿಕಸತ್ಯತಾನಿಷೇಧಃ ಬಾಧಃ**

ಎಂಬ ಬಾಧ ಲಕ್ಷಣದಲ್ಲಿ ಪ್ರತಿಯೊಂದು ಪದಕ್ಕೂ ಕೃತ್ಯವನ್ನು ತೋರಿಸುತ್ತಾರೆ. ಅಂತಹ ಪದಕೃತ್ಯದ ಒಂದು ನೋಟ ಇಂತಿದೆ :-

**ಕೃತ್ಯ -1**

ಇಲ್ಲಿ 'ತ್ರೈಕಾಲಿಕಪ್ರತಿಷೇಧೋ ಬಾಧಃ' ಎಂದು ಹೇಳಿದರೆ ಅಸಂಭವ ಬರುತ್ತದೆ. ಏಕೆಂದರೆ - ಮಾಯಾಕಲ್ಪಿತವಾದ (ವ್ಯಾವಹಾರಿಕವಾದ) ವಿಯದಾದಿಗಳಿಗೆ ಮತ್ತು ಅವಿದ್ಯಾಕಲ್ಪಿತವಾದ (ಪ್ರಾತಿಭಾಸಿಕವಾದ) ಶುಕ್ತಿರಜತಾದಿಗಳಿಗೆ ಪ್ರತೀತಿಕಾಲದಲ್ಲಿ ಅಸದ್ವಿಲಕ್ಷಣಸ್ವರೂಪವನ್ನು ಅಂಗೀಕರಿಸಿದ್ದರಿಂದ ವಿಯದಾದಿ-ಶುಕ್ತಿರಜತಾದಿ ಸ್ವರೂಪಕ್ಕೆ ತ್ರೈಕಾಲಿಕನಿಷೇಧ ಇಲ್ಲವಾದ್ದರಿಂದ (ತ್ರೈಕಾಲಿಕನಿಷೇಧಪ್ರತಿಯೋಗಿತ್ವ

ಎಂಬ ಲಕ್ಷಣವು ಲಕ್ಷ್ಯವಾದ ವಿಯದಾದಿ-ಶುಕ್ತಿರಜತಾದಿಗಳಲ್ಲಿ ಬಾರದ ಕಾರಣ) ಅಸಂಭವ ಬರುತ್ತದೆ.

ಅದಕ್ಕಾಗಿ (ಅಸಂಭವಪರಿಹಾರಕ್ಕಾಗಿ) ಸತ್ಯತಾಪ್ರತಿಷೇಧಃ ಎಂದು ಹೇಳಬೇಕು. ವಿಯದಾದಿಗಳಿಗೆ ಶುಕ್ತಿರಜತಾದಿಗಳಿಗೆ ಪ್ರತೀತಿಕಾಲದಲ್ಲಿ ಅಸದ್ವಿಲಕ್ಷಣಸ್ವರೂಪವನ್ನು ಅಂಗೀಕರಿಸಿದರೂ ಸತ್ಯತ್ವವನ್ನು ಒಪ್ಪಿಲ್ಲವಾದ್ದರಿಂದ (ತ್ರೈಕಾಲಿಕಸತ್ಯತಾನಿಷೇಧ-ಪ್ರತಿಯೋಗಿತ್ವಲಕ್ಷಣವು ಬರುವುದರಿಂದ) ಅಸಂಭವ ಬರುವುದಿಲ್ಲ.

**ಕೃತ್ಯ -2**

ಇನ್ನು ಕೇವಲ ಸತ್ವಪ್ರತಿಷೇಧಃ ಬಾಧಃ ಎಂದು ಹೇಳಿದರೆ ಸಿದ್ಧಸಾಧನತಾ ಬರುತ್ತದೆ. ಘಟವು ಇಲ್ಲಿ ಸತ್ ಆದರೂ ಕಾಶಿಯಲ್ಲಿ ಸತ್ ಆಗಿಲ್ಲವಾದ್ದರಿಂದ ಘಟದಲ್ಲಿ ಕಾಶೀಸ್ಥಸತ್ವಪ್ರತಿಷೇಧ ಮಾಡಬಹುದಾದ್ದರಿಂದ ಸಿದ್ಧಸಾಧನತಾ ಬರುತ್ತದೆ. ಅದಕ್ಕಾಗಿ ಕಾಲಿಕ ಎಂದು ಹೇಳಬೇಕು. ಘಟವು ಈ ದೇಶದಲ್ಲಿ ಸತ್ ಆಗಿ ದೇಶಾಂತರದಲ್ಲಿ ಸತ್ ಆಗದಿದ್ದರೂ ತಾನಿರುವ ಕಾಲದಲ್ಲಿ ಸತ್ ಆಗಿದ್ದರಿಂದ ಕಾಲಿಕಸತ್ಯತಾಪ್ರತಿಷೇಧ ಮಾಡಲು ಬರದಿರುವುದರಿಂದ ಸಿದ್ಧಸಾಧನತಾ ಬರುವುದಿಲ್ಲ.

**ಕೃತ್ಯ -3**

ಆದರೂ ಸಹ ಘಟವು ತಾನಿರುವ ಕಾಲದಲ್ಲಿ ಸತ್ ಆಗಿದ್ದರೂ ಕಾಲಾಂತರದಲ್ಲಿ ಸತ್ ಆಗಿಲ್ಲವಾದ್ದರಿಂದ ಕಾಲಾಂತರೀಯಸತ್ಯತಾಪ್ರತಿಷೇಧ ಮಾಡಲು ಬರುವುದರಿಂದ ಪುನಃ ಸಿದ್ಧಸಾಧನತಾ ಬರುತ್ತದೆ. ಆದ್ದರಿಂದ ತ್ರೈಕಾಲಿಕ ಎಂದು ಹೇಳಬೇಕು. ಘಟವು ವರ್ತಮಾನಕಾಲದಲ್ಲಿ ಸತ್ ಆಗಿದ್ದರಿಂದ ತ್ರೈಕಾಲಿಕಸತ್ಯತಾನಿಷೇಧ ಮಾಡಲು ಬರದಿರುವುದರಿಂದ ಸಿದ್ಧಸಾಧನತಾ ಬರುವುದಿಲ್ಲ.

**ಕೃತ್ಯ -4**

ಇನ್ನು ತ್ರೈಕಾಲಿಕಸತ್ವಪ್ರತಿಷೇಧಃ ಬಾಧಃ ಎಂದು ಹೇಳಿದರೆ, ಅತ್ಯಂತಾಸತ್ ಆದ ಶಶವಿಷಾಣಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಶಶವಿಷಾಣಾದಿಗಳು ಅತ್ಯಂತ ಅಸತ್ ಆಗಿದ್ದರಿಂದ (ಯಾವ ಕಾಲದಲ್ಲಿಯೂ ಸತ್ ಆಗಿಲ್ಲವಾದ್ದರಿಂದ) ತ್ರೈಕಾಲಿಕಸತ್ಯತಾ-ನಿಷೇಧ ಮಾಡಲು ಬರುವುದರಿಂದ (ಅಲಕ್ಷ್ಯವಾದ ಶಶವಿಷಾಣಾದಿಗಳಲ್ಲಿ ತ್ರೈಕಾಲಿಕಸತ್ಯತಾನಿಷೇಧಪ್ರತಿಯೋಗಿತ್ವ ಲಕ್ಷಣವು ಬರುವುದರಿಂದ) ಅತಿವ್ಯಾಪ್ತಿ ಬರುತ್ತದೆ.

ಆದಕ್ಕಾಗಿ (ಅತಿವ್ಯಾಪ್ತಿಪರಿಹಾರಕ್ಕಾಗಿ) ಪ್ರತಿಪನ್ನೋಪಾಧೌ ಎಂದು ಹೇಳಬೇಕು. ಸಂಯೋಗಸಂಬಂಧದಿಂದ ಅಥವಾ ಸಮವಾಯಸಂಬಂಧದಿಂದ ಪ್ರತಿಯೋಗಿಯಾದ ಶಶವಿಷಾಣಾದಿಗಳಿಗೆ ಆಶ್ರಯವಾದ (ಆಶ್ರಯವಾಗಿ ಪ್ರತಿಪನ್ನವಾದ) ವಸ್ತುವೇ (ಉಪಾಧಿಯೇ) ಯಾವುದೂ ಇಲ್ಲವಾದ್ದರಿಂದ (ಪ್ರತಿಪನ್ನೋಪಾಧಿಯಲ್ಲಿ ಶಶವಿಷಾಣಾದಿಗಳ ತ್ರೈಕಾಲಿಕಸತ್ವಪ್ರತಿಷೇಧ ಮಾಡಲು ಬರುವುದಿಲ್ಲವಾದ್ದರಿಂದ) ಅತಿವ್ಯಾಪ್ತಿ ಬರುವುದಿಲ್ಲ.

ಈ ರೀತಿಯಾಗಿ ಪ್ರತಿಯೊಂದು ಪದಕ್ಕೂ ಕೃತ್ಯವನ್ನು ತಿಳಿಯಬೇಕು.

**ಟೀಕಾ :- ಕಿಂ ಚೈವಂ ಸತಿ ಅತ್ಯಂತಾಸತ್ವಮೇವ ಪ್ರಾಪ್ತಮಿತಿ ಆಶ್ರಯಾಸಿದ್ಧ್ಯಾದಿಪ್ರತ್ಯಾವೃತ್ತಿಃ । ಸತ್ವನಿಷೇಧ ಏವ ಕ್ರಿಯತೇ ನ ತ್ವಸತ್ವವಿಧಿರಿತಿ ಚೇನ್ನ । ಸತ್ವನಿಷೇಧಾತಿರಿಕ್ತಸ್ಯಾಸತ್ವಸ್ಯಾಭಾವಾತ್ । ಭಾವೇಽಪಿ ಸತ್ವನಿಷೇಧೇನೈವಾಶ್ರಯಾಸಿದ್ಧಿಃ ಸ್ಯಾತ್ । ಅಸತ್ವಮನಾಶ್ರಯತ್ವೇ ಪ್ರಯೋಜಕಂ ನ ಸತ್ವಾಭಾವ ಇತಿ ಚೇನ್ನ । ನಿಯಾಮಕಾಭಾವಾತ್ । ಸಮಂ ಪ್ರತಿವಾದಿನೋಽಪೀತಿ ಚೇತ್, ಅಸ್ತು ತಾವತ್, ಆಶ್ರಯಾಸಿದ್ಧಿಸಂದೇಹೇಽ-ಪ್ಯನುಮಾನಮಸಾಧಕಮ್ ।**

**ಅನುವಾದ :-** ''ಪ್ರತಿಪನ್ನೋಪಾಧೌ ತ್ರೈಕಾಲಿಕಸತ್ಯತಾನಿಷೇಧಃ ಬಾಧಃ''

ಎಂದು ಹೇಳಿದರೆ ಈ ಹಿಂದೆ ಹೇಳಿದಂತೆ ಅನ್ಯೋನ್ಯಾಶ್ರಯದೋಷ ಬರುವುದಲ್ಲದೇ, ಶಶವಿಷಾಣಾದಿಗಳಲ್ಲಿ ತ್ರೈಕಾಲಿಕಸತ್ಯತಾಭಾವ ಇದ್ದದ್ದರಿಂದ ಅವು ಅತ್ಯಂತಾಸತ್ ಆಗಿರುವಂತೆ, ಜಗತ್ತಿಗೂ ತ್ರೈಕಾಲಿಕಸತ್ಯತಾವನ್ನು ನಿಷೇಧಿಸುವುದಾದರೆ ಜಗತ್ತೂ ಅತ್ಯಂತಾಸತ್ತೇ ಆಗುತ್ತದೆ. ಹೀಗೆ ಜಗತ್ತಿಗೆ ಅತ್ಯಂತಾಸತ್ವವೇ ಬಂದಂತಾಗಿ ''ವಿಮತಂ ಮಿಥ್ಯಾ ದೃಶ್ಯತ್ವಾತ್'' ಎಂಬ ನಿಮ್ಮ ಅನುಮಾನದಲ್ಲಿ ಪಕ್ಷವಾದ ಜಗತ್ತೇ (ಅಸತ್ ಆಗುವುದರಿಂದ) ಇಲ್ಲದಂತಾಗುವುದರಿಂದ ನಿಮ್ಮ ಅನುಮಾನಕ್ಕೆ ಪುನಃ ಆಶ್ರಯಾಸಿದ್ಧಿದೋಷ ಬರುತ್ತದೆ.

ಮತ್ತು ತ್ರೈಕಾಲಿಕಸತ್ಯತಾವನ್ನು ನಿಷೇಧಿಸುವ ಮೂಲಕ ಜಗತ್ತಿಗೆ ಅತ್ಯಂತಾಸತ್ವವನ್ನು ಹೇಳಿದರೆ ಅಪಸಿದ್ಧಾಂತವೂ ಬರುತ್ತದೆ. ನಿಮ್ಮ ಪೂರ್ವಾಚಾರ್ಯರು ಜಗತ್ತಿಗೆ ಅಸದ್ವಿಲಕ್ಷಣತ್ವವನ್ನು ಅಂಗೀಕರಿಸಿದ್ದಾರೆ. ಪ್ರಕೃತ ನೀವು ಅದಕ್ಕೆ ವಿರುದ್ಧವಾಗಿ ಅತ್ಯಂತಾಸತ್ವವನ್ನು ಹೇಳಿದರೆ ಅಪಸಿದ್ಧಾಂತದೋಷವೂ ಬರುತ್ತದೆ ಎಂದು ಭಾವ.

ಜಗತ್ತಿಗೆ ನಾವು ಸತ್ವವನ್ನು ನಿಷೇಧಿಸುತ್ತೇವೆ, ಹೊರತು ಅಸತ್ವವನ್ನು ವಿಧಾನ ಮಾಡುವುದಿಲ್ಲ. ನಮ್ಮ ಪೂರ್ವಾಚಾರ್ಯರು ಜಗತ್ತಿಗೆ ಸದ್ವೈಲಕ್ಷಣ್ಯವನ್ನೂ ಅಂಗೀಕರಿಸಿದ್ದರಿಂದ ಪ್ರಕೃತ ನಾವು ಸತ್ವನಿಷೇಧ ಮಾಡಿದರೆ ಅಪಸಿದ್ಧಾಂತ ಬರುವುದಿಲ್ಲ ಎಂದು ಶಂಕಿಸಿದರೆ, ಅದು ಸರಿಯಲ್ಲ. ಸತ್ವನಿಷೇಧದಿಂದ ಭಿನ್ನವಾದ ಅಸತ್ವ ಇಲ್ಲವಾದ್ದರಿಂದ ಜಗತ್ತಿಗೆ ಸತ್ವನಿಷೇಧ ಮಾಡಿದರೆ ಅಸತ್ವ ಹೇಳಿದಂತೆಯೇ. ಹಾಗಾಗಿ ಅಸತ್ವನಿಮಿತ್ತ ಅಪಸಿದ್ಧಾಂತ ಬಂದೇ ಬರುತ್ತದೆ.

ಅಥವಾ ಸತ್ವನಿಷೇಧದಿಂದ ಭಿನ್ನವಾದ ಅಸತ್ವ ಇದೆ ಎಂದು ಒಪ್ಪಿದರೂ ಸಹ (ಅಭ್ಯುಪಗಮವಾದದಲ್ಲಿಯೂ ಸಹ) ಜಗತ್ತಿಗೆ ಸತ್ವನಿಷೇಧ ಮಾಡುವುದರಿಂದಲೇನೇ ಆಶ್ರಯಾಸಿದ್ಧಿ ಬರುತ್ತದೆ. ಪಕ್ಷವಾದ ಜಗತ್ತಿಗೆ ಸತ್ವನಿಷೇಧ ಮಾಡುವುದಾದರೆ (ಜಗತ್ತು ಸತ್ ಅಲ್ಲ ಎಂದು ಹೇಳುವುದಾದರೆ) ಪಕ್ಷ ಇಲ್ಲ ಎಂದೇ ಆಗುವುದರಿಂದ ಆಶ್ರಯಾಸಿದ್ಧಿ ಬರುತ್ತದೆ ಎಂದು ಅಭಿಪ್ರಾಯ.

ಆಶ್ರಯಾಸಿದ್ಧಿಯನ್ನು ಕುರಿತು ಅಸತ್ವವು ಪ್ರಯೋಜಕ. ಹೊರತು ಸತ್ವಾಭಾವ ಪ್ರಯೋಜಕವಲ್ಲ. ಜಗತ್ತಿಗೆ ಸತ್ವನಿಷೇಧ ಮಾಡುತ್ತಿದ್ದರೂ ಅಸತ್ವವನ್ನು ಹೇಳುತ್ತಿಲ್ಲವಾದ್ದರಿಂದ ಆಶ್ರಯಾಸಿದ್ಧಿ ಬರುವುದಿಲ್ಲ ಎಂದು ಶಂಕಿಸುವುದು ಸರಿಯಲ್ಲ. ಕಾರಣ - ಆಶ್ರಯಾಸಿದ್ಧಿಯನ್ನು ಕುರಿತು ಸತ್ವಾಭಾವ ಪ್ರಯೋಜಕವಲ್ಲ, ಅಸತ್ವವೇ ಪ್ರಯೋಜಕ ಎಂದು ನಿರ್ಣಯಿಸಲು ಯಾವ ನಿಯಾಮಕವೂ ಇಲ್ಲ. (ಆಶ್ರಯಾಸಿದ್ಧಿಯನ್ನು ಕುರಿತು ಸತ್ವಾಭಾವವೇ ಪ್ರಯೋಜಕ, ಅಸತ್ವ ಪ್ರಯೋಜಕವಲ್ಲ ಎಂಬುದಾಗಿಯೂ ಹೇಳಲು ಬರುವುದರಿಂದ, ಪ್ರಕೃತ ಆಶ್ರಯಾಸಿದ್ಧಿಗೆ ಪ್ರಯೋಜಕವಾದ ಸತ್ವಾಭಾವ ಹೇಳುತ್ತಿರುವುದರಿಂದ ಆಶ್ರಯಾಸಿದ್ಧಿ ಬಂದೇ ಬರುತ್ತದೆ.)

ನಿಯಾಮಕವಿಲ್ಲ ಎಂದು ನಮಗೆ ದೋಷ ಹೇಳುವುದಾದರೆ, ಆಶ್ರಯಾಸಿದ್ಧಿಯನ್ನು ಕುರಿತು ಸತ್ವಾಭಾವವೇ ಪ್ರಯೋಜಕ, ಅಸತ್ವ ಪ್ರಯೋಜಕವಲ್ಲ ಎಂಬ ನಿಮ್ಮ ಪಕ್ಷದಲ್ಲಿಯೂ ಯಾವ ನಿಯಾಮಕವೂ ಇಲ್ಲ ಎನ್ನುವುದು (ನಿಯಾಮಕಾಭಾವ ಎಂಬ ದೋಷವು) ಇಬ್ಬರಿಗೂ ಸಮಾನವೇ ಆಗಿದೆಯಲ್ಲವೇ ? ಎಂದರೆ, ನಿಯಾಮಕವಿಲ್ಲ ಎನ್ನುವುದು ಇಬ್ಬರ ಪಕ್ಷದಲ್ಲಿಯೂ ಸಮ ಎಂದಾದರೂ ಸಹ ಆಶ್ರಯಾಸಿದ್ಧಿಸಂದೇಹವಂತೂ ಬಂದೇ ಬರುತ್ತದೆ.

ಒಂದುವೇಳೆ ''ಆಶ್ರಯಾಸಿದ್ಧಿಯನ್ನು ಕುರಿತು ಅಸತ್ವವೇ ಪ್ರಯೋಜಕ, ಸತ್ವಾಭಾವ ಪ್ರಯೋಜಕವಲ್ಲ'' ಎಂಬ ನಿಮ್ಮ ಪಕ್ಷದಲ್ಲಿ ನಿಯಾಮಕ ಇರುವುದಾದರೆ ಆಗ ಆಶ್ರಯಾಸಿದ್ಧಿ ಬರುವುದಿಲ್ಲ. ಒಂದುವೇಳೆ ''ಆಶ್ರಯಾಸಿದ್ಧಿಯನ್ನು ಕುರಿತು ಸತ್ವಾಭಾವವೇ ಪ್ರಯೋಜಕ, ಅಸತ್ವ ಪ್ರಯೋಜಕವಲ್ಲ'' ಎಂಬ ನಮ್ಮ ಪಕ್ಷದಲ್ಲಿ ನಿಯಾಮಕ ಇರುವುದಾದರೆ ಆಗ ಆಶ್ರಯಾಸಿದ್ಧಿ ಬರುತ್ತದೆ.

ಈ ರೀತಿಯಾಗಿ ಆಶ್ರಯಾಸಿದ್ಧಿ ಬರುವುದೋ ? ಇಲ್ಲವೋ ? ಎಂಬುದಾಗಿ ಆಶ್ರಯಾಸಿದ್ಧಿಸಂದೇಹ ಬಂದರೂ ಸಹ ಸಂದಿಗ್ಧಾಶ್ರಯಾಸಿದ್ಧಿಯಿಂದಲೇ ನಿಮ್ಮ ಅನುಮಾನವು ದುಷ್ಟವಾಗುತ್ತದೆ, ಅಸಾಧಕವಾಗುತ್ತದೆ ಎಂದು ಅಭಿಪ್ರಾಯ.

**ಟೀಕಾ :- ವ್ಯಾವಹಾರಿಕಸತ್ತಾಸ್ವೀಕಾರಾದಾಶ್ರಯತೋಪಪತ್ತಿರಿತಿ ಚೇತ್ ಕೇಯಂ ವ್ಯಾವಹಾರಿಕೀ ಸತ್ತಾ ? ಯದಾ ವ್ಯವಹಾರನಿರ್ವಾಹಹೇತುಸ್ತದಾ ಸಿದ್ಧಂ ನಃ ಸಮೀಹಿತಮ್ । ವ್ಯರ್ಥಂ ಚ ವ್ಯಾವಹಾರಿಕೀತಿ ವಿಶೇಷಣಮ್ । ಸತ್ತಾಮಂಗೀಕೃತ್ಯ ಪುನಸ್ತನ್ನಿಷೇಧೇ ಪರಸ್ಯಾಪಸಿದ್ಧಾಂತಶ್ಚ ।**

**ಪಾರಮಾರ್ಥಿಕತ್ವಮೇವ ನಿಷಿಧ್ಯತೇ ನ ತು ವ್ಯಾವಹಾರಿಕೀ ಸತ್ತಾ ಇತಿ ಚೇತ್ ಕಿಮಿದಂ ಪಾರಮಾರ್ಥಿಕತ್ವಂ ? ಅವ್ಯಾವಹಾರಿಕತ್ವಂ ಚೇತ್ ನಿಷಿಧ್ಯತಾಮ್ । ನ ನೋ ಹಾನಿಃ । ಅಬಾಧ್ಯತ್ವಮಿತಿ ಚೇತ್, ಅಬಾಧ್ಯತ್ವನಿಷೇಧೋ ಬಾಧ್ಯತ್ವಮೇವ । ತಚ್ಚ ಸತ್ತಾನಿಷೇಧ ಇತಿ ಕುತೋ ವ್ಯಾವಹಾರಿಕೀ ಸತ್ತಾಽಪಿ ? ಇತರೇತರಾಶ್ರಯದೋಷೋ ವಾ ಸ್ಯಾತ್ ।**

**ಭ್ರಾಂತಿಸಿದ್ಧಾ ಸತ್ತಾ ವ್ಯಾವಹಾರಿಕೀ ಸತ್ತೇತಿ ಚೇತ್, ತಥಾ ಸತಿ ನಾಸ್ತಿ ಸತ್ತೇತ್ಯನಾಶ್ರಯತೈವ ।**

**ಅನುವಾದ :-** ''ಜಗತ್ತಿಗೆ ಸತ್ಯತ್ವವನ್ನು ನಿಷೇಧಿಸುವುದಾದರೆ ಜಗತ್ತೇ ಇಲ್ಲವೆಂತಾಗಿ ಆಶ್ರಯಾಸಿದ್ಧಿ ಬರುತ್ತದೆ'' ಎಂಬುದಾಗಿ ನಮ್ಮ ಅನುಮಾನಕ್ಕೆ ಆಶ್ರಯಾಸಿದ್ಧಿ ದೋಷವನ್ನು ಹೇಳುವುದು ಸರಿಯಲ್ಲ. ಏಕೆಂದರೆ - ಜಗತ್ತಿಗೆ ನಾವು ವ್ಯಾವಹಾರಿಕಸತ್ಯತ್ವವನ್ನು ಅಂಗೀಕರಿಸಿದ್ದರಿಂದ ಜಗತ್ತೆಂಬ ಆಶ್ರಯ ಉಪಪನ್ನವಾಗುಬಹುದು (ಆಶ್ರಯಾಸಿದ್ಧಿ ಬರುವುದಿಲ್ಲ) ಎಂಬುದಾಗಿ ಪರರು ಶಂಕಿಸಿದರೆ,

ವ್ಯಾವಹಾರಿಕಸತ್ತಾ ಎಂದರೇನು ? ವ್ಯವಹಾರನಿರ್ವಾಹಹೇತುಭೂತವಾದ ಸತ್ತಾ ವ್ಯಾವಹಾರಿಕಸತ್ತಾ ಎಂದು ಹೇಳುತ್ತೀರೋ ? ಅಥವಾ ಭ್ರಾಂತಿಸಿದ್ಧವಾದ ಸತ್ತಾ ವ್ಯಾವಹಾರಿಕಸತ್ತಾ ಎಂದು ಹೇಳುತ್ತೀರೋ ?

'ಘಟೋऽಸ್ತಿ' 'ಪಟೋऽಸ್ತಿ' ಇತ್ಯಾದಿ ವ್ಯವಹಾರಗಳ ನಿರ್ವಾಹಕ್ಕೆ ಹೇತುಭೂತವಾದ ಸತ್ತಾ ವ್ಯಾವಹಾರಿಕಸತ್ತಾ ಎಂದು ಹೇಳುತ್ತೇವೆ ಎಂದರೆ, ಈ ಮೊದಲನೇ ಪಕ್ಷವು ಸರಿಯಲ್ಲ. ಏಕೆಂದರೆ - ವ್ಯವಹಾರಹೇತುವಾದ ಸತ್ಯತಾವನ್ನು ಜಗತ್ತಿನಲ್ಲಿ ಅಂಗೀಕರಿಸಿದ್ದರಿಂದ ಆಶ್ರಯಾಸಿದ್ಧಿದೋಷಪರಿಹಾರವಾದರೂ ಸಹ ಸತ್ತಾಪ್ರತಿಷೇಧರೂಪಮಿಥ್ಯಾತ್ವವನ್ನು ಸಾಧಿಸುವುದಾದರೆ (ಸತ್ತಾವನ್ನು ಅಂಗೀಕರಿಸಿ ಪುನಃ ಸತ್ತಾವನ್ನೇ ನಿಷೇಧಿಸುವುದಾದರೆ) ಬಾಧ ಬರುವುದರಿಂದ ನಿಮ್ಮ ಅನುಮಾನ ದುಷ್ಟವೇ ಆಗುತ್ತದೆ. ನಮಗೆ ಅಭೀಪ್ಸಿತವಾದ, ನಿಮ್ಮ ಅನುಮಾನದ ದುಷ್ಟತ್ವವು ಪುನಃ ಸಿದ್ಧವೇ ಆಗುತ್ತದೆ.

ಅಲ್ಲದೇ, ವ್ಯವಹಾರನಿರ್ವಾಹಹೇತುವಾದ ಸತ್ತಾ ಮತ್ತು ವ್ಯವಹಾರನಿರ್ವಾಹ-ಹೇತುವಾಗದ ಸತ್ತಾ ಎಂಬುದಾಗಿ ಎರಡುವಿಧವಾದ ಸತ್ತಾ ಇರುತ್ತಿದ್ದರೆ ಆಗ 'ವ್ಯಾವಹಾರಿಕೀ ಸತ್ತಾ' ಎಂಬುದಾಗಿ ಸತ್ವಕ್ಕೆ ವ್ಯಾವಹಾರಿಕತ್ವ ವಿಶೇಷಣ ಕೊಟ್ಟಿದ್ದು ಸಾರ್ಥಕವಾಗುತ್ತಿತ್ತು. ಆದರೆ ವ್ಯವಹಾರನಿರ್ವಾಹಹೇತುವಾಗದ ಸತ್ತಾ ಎನ್ನುವುದೇ ಇಲ್ಲವಾದ್ದರಿಂದ (ವ್ಯಾವರ್ತ್ಯವಾದದ್ದು ಯಾವುದೂ ಇಲ್ಲವಾದ್ದರಿಂದ) ವ್ಯಾವಹಾರಿಕತ್ವ ಎಂಬ ವಿಶೇಷಣವು ವ್ಯರ್ಥವೂ ಆಗಿದೆ.

ಜಗತ್ತಿನಲ್ಲಿ ಸತ್ಯತ್ವವನ್ನು ಅಂಗೀಕರಿಸಿ ಪುನಃ ಆ ಸತ್ಯತ್ವವನ್ನು ನಿಷೇಧಿಸುವುದಾದರೆ ಬಾಧ ಬರುತ್ತದೆ ಎಂದಷ್ಟೇ ಅಲ್ಲ. ಕಿಂತು ಪರರಿಗೆ ಅಪಸಿದ್ಧಾಂತದೋಷವೂ ಬರುತ್ತದೆ. (ಪೂರ್ವಾಚಾರ್ಯರು ಜಗತ್ತಿನಲ್ಲಿ ಸತ್ಯತ್ವವನ್ನು ಅಂಗೀಕರಿಸಿದ್ದರಿಂದ ಅಂಗೀಕೃತವಾದ ಸತ್ಯತ್ವವನ್ನು ನೀವು ನಿಷೇಧಿಸಿದರೆ ಅಪಸಿದ್ಧಾಂತ ಬರುತ್ತದೆ.)

ನಮಗೆ ಅಪಸಿದ್ಧಾಂತ ಬರುವುದಿಲ್ಲ. ಏಕೆಂದರೆ - ಪೂರ್ವಾಚಾರ್ಯರು ಅಂಗೀಕರಿಸಿರುವ ವ್ಯಾವಹಾರಿಕಸತ್ಯತ್ವವನ್ನೇ ನಾವು ನಿಷೇಧಿಸುತ್ತಿದ್ದರೆ ಆಗ ಅಪಸಿದ್ಧಾಂತ ಬರುತ್ತಿತ್ತು . ಆದರೆ ನಾವು ಜಗತ್ತಿನಲ್ಲಿ ವ್ಯಾವಹಾರಿಕಸತ್ಯತ್ವವನ್ನು ನಿಷೇಧಿಸುತ್ತಿಲ್ಲ. ಕಿಂತು ಪಾರಮಾರ್ಥಿಕಸತ್ಯತ್ವವನ್ನು ಮಾತ್ರ ನಿಷೇಧಿಸುತ್ತಿದ್ದೇವೆ. (ನಿಷೇಧಿಸಲ್ಪಡುತ್ತಿರುವ ಪಾರಮಾರ್ಥಿಕಸತ್ಯತ್ವವನ್ನು ಪೂರ್ವಾಚಾರ್ಯರು ಅಂಗೀಕರಿಸಿಲ್ಲ.) ಆದ್ದರಿಂದ ಅಪಸಿದ್ಧಾಂತ ಬರುವುದಿಲ್ಲ ಎಂದರೆ,

ಪಾರಮಾರ್ಥಿಕತ್ವ ಎಂದರೇನು ? ಪಾರ್ಮಾರ್ಥಿಕತ್ವ ಎಂದರೆ ಅವ್ಯಾವಹಾರಿಕತ್ವ ಎಂದು ಹೇಳಿದರೆ, ಅಂತಹ ಅವ್ಯಾವಹಾರಿಕತ್ವವನ್ನು ನಿಷೇಧಿಸಿದರೆ ಜಗತ್ತಿಗೆ ವ್ಯವಹಾರನಿರ್ವಾಹಹೇತುವಾದ ಸತ್ಯತ್ವವೇ ಸಿದ್ಧಿಸುವುದರಿಂದ (ವ್ಯವಹಾರಹೇತು-ಸತ್ಯತ್ವವು ನಮಗೂ ಸಮ್ಮತವೇ ಆಗಿದ್ದರಿಂದ) ನಮಗೆ ಯಾವುದೇ ಹಾನಿ ಇಲ್ಲ.

ಪಾರಮಾರ್ಥಿಕತ್ವ ಎಂದರೆ ಅಬಾಧ್ಯತ್ವ ಎಂದು ಹೇಳುವುದಾದರೆ, ಅಂತಹ ಅಬಾಧ್ಯತ್ವದ ನಿಷೇಧ ಎಂದರೆ ಬಾಧ್ಯತ್ವವನ್ನೇ ಹೇಳಿದಂತಾಗುತ್ತದೆ. ಅಲ್ಲಿ ಬಾಧ ಎಂದರೆ ಪ್ರತಿಪನ್ನೋಪಾಧೌ ಸತ್ಯತಾನಿಷೇಧಃ ಎಂದು ಹೇಳಬೇಕು. ಅಲ್ಲಿ ಕೇವಲ ಸತ್ಯತಾನಿಷೇಧವು ವಿವಕ್ಷಿತವಾಗಿದೆಯೋ ? ಅಥವಾ ಪಾರಮಾರ್ಥಿಕಸತ್ತಾ-ಪ್ರತಿಷೇಧವು ವಿವಕ್ಷಿತವಾಗಿದೆಯೋ ?

ಕೇವಲ ಸತ್ಯತಾನಿಷೇಧವನ್ನು ವಿವಕ್ಷಿಸುವುದಾದರೆ, ವ್ಯಾವಹಾರಿಕಸತ್ಯತಾವನ್ನೂ ನಿಷೇಧಿಸಿದಂತಾಗುವುದರಿಂದ ''ವ್ಯಾವಹಾರಿಕಸತ್ಯತ್ವವನ್ನು ನಾವು ನಿಷೇಧಿಸುವುದಿಲ್ಲ'' ಎಂಬುದಾಗಿ ಈ ಹಿಂದೆ ಹೇಳಿದ್ದು ಅಸಮಂಜಸವಾಗುತ್ತದೆ. ಪಾರಮಾರ್ಥಿಕಸತ್ತಾ-ಪ್ರತಿಷೇಧವನ್ನು ವಿವಕ್ಷಿಸುವುದಾದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ.

ಹೇಗೆಂದರೆ - ''ಪ್ರತಿಪನ್ನೋಪಾಧೌ ಪಾರಮಾರ್ಥಿಕಸತ್ತಾಪ್ರತಿಷೇಧಃ ಬಾಧಃ'' ಎಂಬ ಬಾಧಲಕ್ಷಣದಲ್ಲಿ ಪಾರಮಾರ್ಥಿಕಸತ್ವವು ಅಂತರ್ಭೂತವಾಗಿರುವುದರಿಂದ, ಪಾರಮಾರ್ಥಿಕತ್ವವನ್ನು ನಿರ್ವಚನ ಮಾಡಿದರೆ ಬಾಧ್ಯತ್ವವನ್ನು ನಿರ್ವಚನ ಮಾಡಿದಂತಾಗುತ್ತದೆ. ಬಾಧ್ಯತ್ವವನ್ನು ನಿರ್ವಚನ ಮಾಡಿದರೆ ಅಬಾಧ್ಯತ್ವರೂಪ-'ಪಾರಮಾರ್ಥಿಕತ್ವದ ನಿರ್ವಚನ ಮಾಡಿದಂತಾಗುತ್ತದೆ. (ಅಭಾವನಿರೂಪಣೆಯು ಪ್ರತಿಯೋಗಿನಿರೂಪಣಾಧೀನವಾದ್ದರಿಂದ.) ಆದ್ದರಿಂದ ಅನ್ಯೋನ್ಯಾಶ್ರಯ.

ವ್ಯಾವಹಾರಿಕಸತ್ತಾ ಎಂದರೇನು ? ಎಂಬ ಪ್ರಶ್ನೆಗೆ ವ್ಯವಹಾರನಿರ್ವಾಹಹೇತು-ಭೂತವಾದ ಸತ್ತಾ ವ್ಯಾವಹಾರಿಕಸತ್ತಾ ಎಂದು ಉತ್ತರ ಹೇಳುವುದಿಲ್ಲ. ಕಿಂತು ಭ್ರಾಂತಿಸಿದ್ಧವಾದ ಸತ್ತಾ ವ್ಯಾವಹಾರಿಕಸತ್ತಾ ಎಂದು ಹೇಳುತ್ತೇವೆ (ಎರಡನೇ ಪಕ್ಷವನ್ನು ಒಪ್ಪುತ್ತೇವೆ) ಎಂದರೆ, ಈ ಎರಡನೇ ಪಕ್ಷವೂ ಸರಿಯಲ್ಲ. ಏಕೆಂದರೆ - ಭ್ರಾಂತಿಸಿದ್ಧವಾದದ್ದು ಎಂದರೆ ಅದು ಇಲ್ಲ ಎಂದೇ ಅರ್ಥ. ಹಾಗಾಗಿ ಜಗತ್ತಿನಲ್ಲಿ ಭ್ರಾಂತಿಸಿದ್ಧವಾದ ಸತ್ತಾ ಇದೆ ಎಂದರೆ ಜಗತ್ತಿನಲ್ಲಿ ನಿಜವಾಗಿ ಸತ್ತಾ ಇಲ್ಲ ಎಂದೇ ಅರ್ಥವಾಗುವುದರಿಂದ ಪುನಃ ಆಶ್ರಯಾಸಿದ್ಧಿದೋಷವೇ ಬರುತ್ತದೆ.

ಆದ್ದರಿಂದ ವ್ಯಾವಹಾರಿಕಸತ್ತಾ ಎನ್ನುವುದನ್ನು ನಿರ್ವಚನ ಮಾಡಲು ಬಾರದ ಕಾರಣ (ಯಾವುದೇ ರೀತಿ ನಿರ್ವಚನ ಮಾಡಿದರೂ ದೋಷ ಬರುವುದರಿಂದ) ''ವ್ಯಾವಹಾರಿಕಸತ್ತಾ ಸ್ವೀಕಾರ ಮಾಡಿದ್ದರಿಂದ ಆಶ್ರಯ ಉಪಪನ್ನವಾಗುತ್ತದೆ'' ಎಂಬುದಾಗಿ ಆಶ್ರಯಾಸಿದ್ಧಿಯನ್ನು ಪರಿಹರಿಸಿಕೊಳ್ಳುವ ಪ್ರಯತ್ನ ಸೂಕ್ತವಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** ನಾವು ಕೊಟ್ಟ ಆಶ್ರಯಾಸಿದ್ಧಿದೋಷವನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ -

**ಟೀಕಾ :- ನನು ಪ್ರತೀತಿಗೋಚರತಾಮಾತ್ರೇಣ ಆಶ್ರಯತೋಪಪತ್ತೌ ಕಿಂ ಸತ್ತಯಾ ? ಸುರಭಿತಾಸಾಧನೇ ತು ಗಗನಾರವಿಂದಸ್ಯ ನಾಶ್ರಯತಾ ಸತ್ತಾವಿರಹಾತ್ । ಅಪಿ ತು ನಿರುಪಾಖ್ಯತ್ವಾದಿತಿ ಚೇನ್ನ । ತಥಾ ಸತಿ ಶಬ್ದಾತ್ ಗಗನಾರವಿಂದಾದಿಸತ್ತಾಪ್ರತೀತೌ ತತ್ರ ಸುರಭಿತಾಸಾಧನೇ ನಾಶ್ರಯಾಸಿದ್ಧಿ-ರುದ್ಭಾವ್ಯೇತ ।**

**ಅನುವಾದ :-** ಜಗತ್ತಿಗೆ ಸತ್ಯತ್ವವನ್ನು ನಿಷೇಧಿಸುವುದಾದರೆ ಅಥವಾ ಭ್ರಾಂತಿಸಿದ್ಧ-ವ್ಯಾವಹಾರಿಕಸತ್ತಾವನ್ನು ಹೇಳುವುದಾದರೆ ಮತ್ತೊಂದು ರೀತಿಯಲ್ಲಿ 'ಜಗತ್ತಿನಲ್ಲಿ ಸತ್ತಾ ಇಲ್ಲ' ಎಂದೇ ಹೇಳಿದಂತಾಗುತ್ತದೆ. ಹಾಗಾಗಿ ನಿಮ್ಮ ಅನುಮಾನಕ್ಕೆ ಆಶ್ರಯಾಸಿದ್ಧಿ ಬಂದೇ ಬರುತ್ತದೆ ಎಂಬುದಾಗಿ ನಾವು ಆಶ್ರಯಾಸಿದ್ಧಿದೋಷವನ್ನು ಹೇಳಿದಾಗ, ಇದರ ಮೇಲೆ ಮಾಯಾವಾದಿಗಳು ಶಂಕಿಸುತ್ತಾರೆ -

ಅನುಮಾನದಲ್ಲಿ ಜಗತ್ತು ಆಶ್ರಯವಾಗಬೇಕಾದರೆ ಜಗತ್ತಿನಲ್ಲಿ ಸತ್ತಾ ಇರಬೇಕು ಎಂದೇನಿಲ್ಲ. ಕಿಂತು ಪ್ರತೀತಿಗೋಚರತಾ ಇದ್ದರೆ ಸಾಕು ಆಶ್ರಯವಾಗಬಹುದು. ಅಂದರೆ ಆಶ್ರಯತ್ವವನ್ನು ಕುರಿತು ಸತ್ತಾ ಪ್ರಯೋಜಕವಲ್ಲ. ಕಿಂತು ಪ್ರತೀತಿಗೋಚರತ್ವವು ಪ್ರಯೋಜಕವಾಗಿದೆ. ಜಗತ್ತಿನಲ್ಲಿ ಸತ್ತಾ ಇಲ್ಲದೇ ಹೋದರೂ 'ಸನ್ ಘಟಃ' 'ಸನ್ ಪಟಃ' ಇತ್ಯಾದಿ ಪ್ರತೀತಿಗಳಿಗೆ ವಿಷಯವಾಗುವುದರಿಂದ (ಪ್ರತೀತಿಗೋಚರತ್ವ ಇರುವುದರಿಂದ) ಜಗತ್ತು ಆಶ್ರಯ ಆಗಬಹುದಾಗಿದೆ. ಆದ್ದರಿಂದ ನಮ್ಮ ಅನುಮಾನಕ್ಕೆ ಆಶ್ರಯಾಸಿದ್ಧಿ ಬರುವುದಿಲ್ಲ.

ಹೌದು, ಅನುಮಾನದಲ್ಲಿ ಆಶ್ರಯವಾಗಬೇಕಾದರೆ ಕೇವಲ ಪ್ರತೀತಿವಿಷಯತ್ವವು ಪ್ರಯೋಜಕ ಎಂದು ಅಂಗೀಕರಿಸಿ, ಸತ್ತಾ ಪ್ರಯೋಜಕವಲ್ಲ ಎಂದು ಹೇಳುವುದಾದರೆ

**ಗಗನಾರವಿಂದಂ ಸುರಭಿ ಅರವಿಂದತ್ವಾತ್ ಸರೋಜಾರವಿಂದವತ್**

ಎಂಬ ಅನುಮಾನದಲ್ಲಿ ಪಕ್ಷವನ್ನಾಗಿ ಮಾಡಿದ ಗಗನಾರವಿಂದಕ್ಕೂ ಪ್ರತೀತಿವಿಷಯತ್ವವು ಉಪಪನ್ನವಾಗುವುದರಿಂದ, ಆಶ್ರಯಕ್ಕೆ ಸತ್ತಾ ಇಲ್ಲದ ಕಾರಣ ಆಶ್ರಯಾಸಿದ್ಧಿ ಬರುತ್ತದೆ ಎಂಬುದಾಗಿ ಏನು ಆಶ್ರಯಾಸಿದ್ಧಿ ಹೇಳುತ್ತಾರೆ ಅದನ್ನು ಹೇಳಬಾರದಾಗುತ್ತದೆ ಎಂದು ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ 'ಗಗನಾರವಿಂದಂ ಸುರಭಿ' ಎನ್ನುವಲ್ಲಿ ಆಶ್ರಯಕ್ಕೆ ಸತ್ತಾ ಇಲ್ಲದಾದ್ದರಿಂದ ಆಶ್ರಯಾಸಿದ್ಧಿ ಎಂದಲ್ಲ. ಕಿಂತು ಆಶ್ರಯಕ್ಕೆ (ಗಗನಾರವಿಂದಕ್ಕೆ) ಪ್ರತೀತಿಗೋಚರತ್ವ ಇಲ್ಲವಾದ್ದರಿಂದ ಅಲ್ಲಿ ಆಶ್ರಯಾಸಿದ್ಧಿ ಹೇಳುವುದು. ಆದ್ದರಿಂದ ಆಶ್ರಯತ್ವವನ್ನು ಕುರಿತು ಸತ್ತಾ ಪ್ರಯೋಜಕವಲ್ಲ, ಕಿಂತು ಪ್ರತೀತಿಗೋಚರತ್ವವೇ ಪ್ರಯೋಜಕವಾಗಿದೆ ಎಂದು ಮಾಯಾವಾದಿಗಳ ಶಂಕೆ.

ಈ ರೀತಿಯಾಗಿ ಮಾಯಾವಾದಿಗಳು ಶಂಕಿಸುವುದು ಸಮಂಜಸವಲ್ಲ. ಏಕೆಂದರೆ ಮೋಸ ಮಾಡಬೇಕೆಂಬ ಇಚ್ಛೆಯಿಂದ ಸರೋಜಾರವಿಂದದಂತೆ ಗಗನಾರವಿಂದವೂ ಇದೆ ಎಂಬುದಾಗಿ ಯಾರಾದರೂ ಹೇಳಿದಾಗ ಅಂತಹ ದುಷ್ಟಶಬ್ದದಿಂದ (ಶಬ್ದಾಭಾಸದಿಂದ) ಗಗನಾರವಿಂದಕ್ಕೂ ಸತ್ವವು ತೋರುತ್ತದೆ. ಹಾಗೆ ಶಬ್ದದಿಂದ ಗಗನಾರವಿಂದವು ತೋರಿದಾಗ ಗಗನಾರವಿಂದದಲ್ಲಿ ಪ್ರತೀತಿಗೋಚರತ್ವವು ಬರುವುದರಿಂದ (ಆಶ್ರಯತ್ವಕ್ಕೆ ಪ್ರಯೋಜಕವಾದ ಪ್ರತೀತಿಗೋಚರತ್ವವೇ ಗಗನಾರವಿಂದದಲ್ಲಿ ಇರುವುದರಿಂದ) ಅಲ್ಲಿ ಆಶ್ರಯಾಸಿದ್ಧಿಯನ್ನು ಹೇಳಬಾರದಾಗಿತ್ತು.

**ಟೀಕಾ :- ಅಸ್ತ್ವೇವಂ, ಅಂಗಾಂತರವೈಕಲ್ಯಂ ತತ್ರ ಭವಿಷ್ಯತೀತಿ ಚೇನ್ನ । ಕಾಲ್ಪನಿಕಾಂಗಸಾಕಲ್ಯಸ್ಯ ಸರ್ವತ್ರ ಸೌಲಭ್ಯಾತ್ । ತಥಾ ಚ ನ ಸಾಧನತದಾ-ಭಾಸನಿಯಮಃ ಸ್ಯಾತ್ । ವಾದ್ಯಾದ್ಯಭ್ಯುಪಗಮೇನ ನಿಯಮ ಇತಿ ಚೇನ್ನ । ಕಥಾಭಾಸಪ್ರಸಂಗೇನ ಅಸತ್‌ಸಾಧನದೂಷಣಯೋರಪಿ ಸತ್ವಪ್ರಸಂಗಾತ್ । ಕಿಂ ಚೈವಂ ಸತಿ ಪ್ರಕೃತಾನುಮಾನಸ್ಯಾಪಿ ನ ತತ್ತ್ವಾವೇದಕತ್ವಂ ಸ್ಯಾತ್ ।**

**ಗಗನಾರವಿಂದಸ್ಯಾಪರೋಕ್ಷಪ್ರತೀತಿರ್ನಾಸ್ತೀತಿ ಚೇತ್ ತಥಾ ಸತ್ಯ-ತೀಂದ್ರಿಯಪ್ರಪಂಚಭಾಗಸ್ಯ ಅನಾಶ್ರಯತ್ವಂ ಸ್ಯಾದಿತಿ ।**

**ಅನುವಾದ :-** ಹಾಗೆಯೇ ಆಗಲಿ. 'ಗಗನಾರವಿಂದಂ ಸುರಭಿ ಅರವಿಂದತ್ವಾತ್' ಎಂಬ ಅನುಮಾನದಲ್ಲಿ ಆಶ್ರಯಾಸಿದ್ಧಿಯನ್ನು ಹೇಳುವುದೇ ಬೇಡ. ಹಾಗಾದರೆ

ಅನುಮಾನಕ್ಕೆ ಆಶ್ರಯಾಸಿದ್ಧಿ ಬರುವುದಿಲ್ಲ ಎಂದಾದರೆ ಅಲ್ಲಿ ಅನುಮಿತಿ ಹುಟ್ಟಬೇಕಿತ್ತಲ್ಲವೇ ? ಎಂದರೆ, ಅಲ್ಲಿ ಆಶ್ರಯಾಸಿದ್ಧಿ ದೋಷದಿಂದಾಗಿ ಅನುಮಿತಿ ಬರುವುದಿಲ್ಲ ಎಂದಲ್ಲ. ಕಿಂತು ಬೇರೊಂದು ಅಂಗವೈಕಲ್ಯದಿಂದಾಗಿ ಅನುಮಿತಿ ಬರುವುದಿಲ್ಲ.

ಏನದು ಅಂಗಾಂತರವೈಕಲ್ಯ ? ಎಂದರೆ, ಅನುಮಾನಕ್ಕೆ ಎರಡು ಅಂಗಗಳು. 1) ವ್ಯಾಪ್ತಿ 2) ಪಕ್ಷಧರ್ಮತಾ ಎಂದು. ಪ್ರಕೃತ ''ಗಗನಾರವಿಂದಂ ಸುರಭಿ ಅರವಿಂದತ್ವಾತ್'' ಎನ್ನುವಲ್ಲಿ ಮ್ಲಾನವಾದ ಅರವಿಂದದಲ್ಲಿ (ಬಾಡಿದ ಕಮಲದಲ್ಲಿ) ಸುರಭಿತ್ವ ಸಾಧ್ಯ ಇಲ್ಲ. ಆದರೆ ಅರವಿಂದತ್ವ ಹೇತು ಇದೆ. ಹೀಗಾಗಿ ಮ್ಲಾನಾರವಿಂದಲ್ಲಿ ವ್ಯಭಿಚಾರ ಬರುತ್ತದೆ. ಆದ್ದರಿಂದ ವ್ಯಾಪ್ತಿರೂಪ ಅಂಗಾಂತರವೈಕಲ್ಯದಿಂದಾಗಿ ಅಲ್ಲಿ ಅನುಮಿತಿ ಬರುವುದಿಲ್ಲ ಎಂದು ಹೇಳಬಹುದು ಎಂದರೆ,

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಅಂಗಸಾಕಲ್ಯ-ಅಂಗವೈಕಲ್ಯಗಳಿಂದ ಯುಕ್ತಾಯುಕ್ತನಿರ್ಣಯ ಮಾಡುವುದು ಸರಿಯಾಗುವುದಿಲ್ಲ. ಕಾರಣ - ಅಕಾಲ್ಪನಿಕವಾದ (ವಾಸ್ತವಿಕವಾದ) ಅಂಗಸಾಕಲ್ಯವು ನಿನ್ನ ಮತದಲ್ಲಿ ಎಲ್ಲಿಯೂ (ಬರುವುದಿಲ್ಲ) ಇಲ್ಲ. ಇನ್ನು ಕಾಲ್ಪನಿಕವಾದ ಅಂಗಸಾಕಲ್ಯವನ್ನು ಹೇಳಬೇಕು. ಅಂತಹ ಕಾಲ್ಪನಿಕವಾದ ಅಂಗಸಾಕಲ್ಯವನ್ನು ಎಲ್ಲ ಅನುಮಾನಗಳಲ್ಲಿಯೂ (ದುಷ್ಟವಾದ ಅನುಮಾನದಲ್ಲಿಯೂ) ಹೇಳಲು ಬರುತ್ತದೆಯಾದ್ದರಿಂದ, ಇದು ಸದನುಮಾನ ಇದು ಅಸದನುಮಾನ ಎಂಬ ವಿಭಾಗವೇ ಇಲ್ಲದೇ ಹೋಗಬೇಕಾಗುತ್ತದೆ. ಕಾಲ್ಪನಿಕಅಂಗಸಾಕಲ್ಯವನ್ನು ಹೇಳುವುದಾದರೆ ಎಲ್ಲ ಅನುಮಾನಗಳಲ್ಲಿಯೂ ಕಾಲ್ಪನಿಕಾಂಗಸಾಕಲ್ಯ ಸಾಧ್ಯವಾದ್ದರಿಂದ ಎಲ್ಲ ಅನುಮಾನಗಳೂ ಸದನುಮಾನವೇ ಆಗಬೇಕಾಗುತ್ತದೆ. ಇನ್ನು ಅಕಾಲ್ಪನಿಕಾಂಗಸಾಕಲ್ಯವನ್ನು ಹೇಳುವುದಾದರೆ, ಅದು ನಿಮ್ಮ ಮತದಲ್ಲಿ ಯಾವ ಅನುಮಾನದಲ್ಲಿಯೂ ಸಾಧ್ಯವಿಲ್ಲವಾದ್ದರಿಂದ ಎಲ್ಲ ಅನುಮಾನಗಳೂ ಅಸದನುಮಾನವೇ ಆಗಬೇಕಾಗುತ್ತದೆ. ಕೆಲವು ಸದನುಮಾನ, ಕೆಲವು ಅಸದನುಮಾನ ಎಂಬ ವಿಭಾಗವೇ ಕೂಡದೇ ಹೋಗಬೇಕಾಗುತ್ತದೆ ಎಂದು ಭಾವ.

ಹಾಗಲ್ಲ ಯಾವ ಅನುಮಾನದಲ್ಲಿ ಅಂಗಸಾಕಲ್ಯವನ್ನು ವಾದಿ-ಪ್ರತಿವಾದಿಗಳು ಒಪ್ಪಿರುತ್ತಾರೆಯೋ ಆ ಅನುಮಾನ ಸದನುಮಾನ, ಯಾವ ಅನುಮಾನದಲ್ಲಿ




ಅಂಗಸಾಕಲ್ಯವನ್ನು ವಾದಿ-ಪ್ರತಿವಾದಿಗಳು ಒಪ್ಪಿಲ್ಲವೋ ಆ ಅನುಮಾನ ಅಸದನುಮಾನ ಎಂಬುದಾಗಿ ನಿಯಮ ಮಾಡುತ್ತೇವೆ ಎಂದು ಶಂಕಿಸುವುದೂ ಸರಿಯಲ್ಲ.

ಭ್ರಾಂತರಾದ ವಾದಿ-ಪ್ರತಿವಾದಿಗಳು ಆರಂಭಿಸಿದ ಕಥಾಭಾಸದಲ್ಲಿ ಅನುಮಾನವು ವಾಸ್ತವಿಕವಾಗಿ ದುಷ್ಟವಾಗಿದ್ದರೂ ಸಹ ಅದನ್ನು ಅಂಗಸಾಕಲ್ಯ ಉಳ್ಳದ್ದನ್ನಾಗಿ ವಾದ್ಯಾದಿಗಳು ಒಪ್ಪಿದ ಕಾರಣ ಅಂತಹ ದುಷ್ಟವಾದ ಅನುಮಾನವೂ ಸದನುಮಾನವಾಗಬೇಕಾಗುತ್ತದೆ. ಇನ್ನು ಅನುಮಾನವು ವಾಸ್ತವಿಕವಾಗಿ ನಿರ್ದುಷ್ಟವಾಗಿದ್ದರೂ ಸಹ ಅದನ್ನು ಅಂಗಸಾಕಲ್ಯರಹಿತವನ್ನಾಗಿ ವಾದ್ಯಾದಿಗಳು ಒಪ್ಪಿದ ಕಾರಣ ಅಂತಹ ನಿರ್ದುಷ್ಟವಾದ ಅನುಮಾನವೂ ದುಷ್ಟಾನುಮಾನ-ವಾಗಬೇಕಾಗುತ್ತದೆ.

ಮತ್ತು ಈ ರೀತಿ ವಾದಿ-ಪ್ರತಿವಾದಿಗಳ ಅಭ್ಯುಪಗಮದಿಂದ ಸಾಧನ-ತದಾಭಾಸ ನಿಯಮವನ್ನು ಹೇಳುವುದಾದರೆ, ಪ್ರಕೃತವಾದ ಪ್ರಪಂಚಮಿಥ್ಯಾತ್ವಸಾಧಕವಾದ ದೃಶ್ಯತ್ವಾನುಮಾನವೂ ಸಹ ಅತತ್ತ್ವಾವೇದಕ-ಆಭಾಸ ಎಂದಾಗಬೇಕಾಗುತ್ತದೆ. ಏಕೆಂದರೆ- ದೃಶ್ಯತ್ವಾನುಮಾನದಲ್ಲಿ ವಾದಿಗಳಾದ ನೀವು ಅಂಗಾಂತರಸಾಕಲ್ಯವನ್ನು ಅಂಗೀಕರಿಸಿದರೂ ಸಹ ಪ್ರತಿವಾದಿಗಳಾದ ನಾವು ಅಲ್ಲಿ ಅಂಗಾಂತರಸಾಕಲ್ಯವನ್ನು ಅಂಗೀಕರಿಸದೇ ಅಂಗಾಂತರವೈಕಲ್ಯವನ್ನೇ ಅಂಗೀಕರಿಸಿದ್ದರಿಂದ ವಾದಿ-ಪ್ರತಿವಾದಿ-ಸಮ್ಮತಾಂಗಾಂತರಸಾಕಲ್ಯ ಉಳ್ಳದ್ದಾಗದ ಕಾರಣ ದೃಶ್ಯತ್ವಾನುಮಾನವೂ ಆಭಾಸವಾಗಬೇಕಾಗುತ್ತದೆ.

ಮಾಯಾವಾದಿಗಳು ಶಂಕಿಸುತ್ತಾರೆ - ಅನುಮಾನದಲ್ಲಿ ಆಶ್ರಯತ್ವವನ್ನು ಕುರಿತು ಕೇವಲ ಪ್ರತೀತಿವಿಷಯತ್ವವನ್ನು ಪ್ರಯೋಜಕವನ್ನಾಗಿ ಹೇಳುವುದಿಲ್ಲ. ಕಿಂತು ಅಪರೋಕ್ಷಪ್ರತೀತಿವಿಷಯತ್ವ ಪ್ರಯೋಜಕ ಎಂದು ಹೇಳುತ್ತೇವೆ. ಪ್ರಕೃತ ಪ್ರಪಂಚದಲ್ಲಿ ಅಪರೋಕ್ಷಪ್ರತೀತಿವಿಷಯತ್ವ ಇರುವುದರಿಂದ ದೃಶ್ಯತ್ವಾನುಮಾನದಲ್ಲಿ ಆಶ್ರಯವು ಉಪಪನ್ನವಾಗುತ್ತದೆ (ಆಶ್ರಯಾಸಿದ್ಧಿ ಬರುವುದಿಲ್ಲ). ಗಗನಾರವಿಂದದಲ್ಲಿ ಅಪರೋಕ್ಷಪ್ರತೀತಿವಿಷಯತ್ವ ಇಲ್ಲದ ಕಾರಣ ಅರವಿಂದತ್ವಾನುಮಾನದಲ್ಲಿ ಆಶ್ರಯವು ಉಪಪನ್ನವಾಗುವುದಿಲ್ಲ (ಆಶ್ರಯಾಸಿದ್ಧಿ ಬರುತ್ತದೆ) ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ - ಆಶ್ರಯತ್ವವನ್ನು ಕುರಿತು ಅಪರೋಕ್ಷಪ್ರತೀತಿವಿಷಯತ್ವ ಪ್ರಯೋಜಕ ಎಂದು ಹೇಳುವುದಾದರೆ, ಧರ್ಮ-ಅಧರ್ಮ, ಸ್ವರ್ಗ-ನರಕ, ಪರಮಾಣು ಮುಂತಾದ ಪಕ್ಷಕೋಟಿಪ್ರವಿಷ್ಟವಾದ ಅತೀಂದ್ರಿಯವಾದ ವಸ್ತುಗಳಲ್ಲಿ ಅಂತಹ ಅಪರೋಕ್ಷಪ್ರತೀತಿವಿಷಯತ್ವ ಇಲ್ಲವಾದ್ದರಿಂದ ಆ ವಿಧವಾದ ಅತೀಂದ್ರಿಯ-ಪ್ರಪಂಚಭಾಗವು ಅಸಿದ್ಧವಾಗಬೇಕಾಗುತ್ತದೆ ಎಂದು ಭಾವ.

**ಅವತಾರಿಕೆ :-** 'ಜಗತ್ತಿಗೆ ಆಶ್ರಯತ್ವವು ಕೂಡುವುದಿಲ್ಲ' ಎಂಬ ನಮ್ಮ ಮಾತಿನ ಮೇಲೆ ಶಂಕೆ ಮಾಡುತ್ತಾರೆ -

**ಟೀಕಾ :- ಯದಪ್ಯುಕ್ತಂ ''ನಿಷೇಧಂ ಪ್ರತಿ ಅಸತೋಽಪ್ಯಾಶ್ರಯತ್ವಂ ಸಂಭವತಿ । ಯಥಾ ವಂಧ್ಯಾಸುತೋ ನ ವಕ್ತಾ ಇತಿ । ಅನ್ಯಥಾ ಸ್ವವಚನ-ವ್ಯಾಘಾತಾದಿದೋಷಪ್ರಸಂಗಃ । ಕಿಮು ವ್ಯವಹಾರಸತಃ ಪ್ರಪಂಚಸ್ಯ'' ಇತಿ ॥**

**ತದನುಪಪನ್ನಮ್ । ತಥಾ ಸತಿ ಪ್ರಪಂಚಸ್ಯ ವ್ಯಾವಹಾರಿಕಸತ್ತಾಸ್ವೀಕಾರ-ವೈಯರ್ಥ್ಯಪ್ರಸಂಗಾತ್ । ನಿಷೇಧಂ ಪ್ರತ್ಯಾಶ್ರಯತ್ವೇ ವಿಧಿಂ ಪ್ರತಿ ತತ್ ಕಸ್ಮಾನ್ನ ಸ್ಯಾತ್ । ನ ಹಿ ವಿಧಿನಿಷೇಧಯೋರ್ವಸ್ತುತ್ವೇ ಕಶ್ಚಿದ್ವಿಶೇಷಃ ।**

**ಅನುವಾದ :-** ಮಾಯಾವಾದಿಗಳು ಇಲ್ಲಿ ಮತ್ತೊಂದು ಶಂಕೆ ಮಾಡಿದ್ದಾರೆ -

ಅಸತ್ ಆದ ವಸ್ತುವಿಗೂ ನಿಷೇಧಾಶ್ರಯತ್ವವು (ನಿಷೇಧಂ ಪ್ರತಿ ಆಶ್ರಯತ್ವವು) ಉಪಪನ್ನವಾಗುತ್ತದೆ. ಅದು ಹೇಗೆಂದರೆ - ವಂಧ್ಯಾಸುತೋ ನ ವಕ್ತಾ ಎಂದು ಹೇಳುತೇವೆ. ಅಸತ್ ಆದ ವಂಧ್ಯಾಸುತನಿಗೂ ಸಹ (ವಕ್ತೃತ್ವನಿಷೇಧಂ ಪ್ರತಿ ಆಶ್ರಯತ್ವ ಇದೆ) ವಕ್ತೃತ್ವನಿಷೇಧಾಶ್ರಯತ್ವವನ್ನು ಹೇಳುತ್ತೇವೆ.

ಹಾಗೊಂದುವೇಳೆ ನಿಷೇಧರೂಪಧರ್ಮವನ್ನು ಕುರಿತು ಅಸತ್‌ಗೆ ಆಶ್ರಯತ್ವವನ್ನು ಅಂಗೀಕರಿಸದೇ ಹೋದರೆ, ಸ್ವವಚನವ್ಯಾಘಾತ ಮೊದಲಾದ ದೋಷಗಳು ಬರುತ್ತವೆ.

ಅಸತ್‌ಗೆ ನಿಷೇಧಾಶ್ರಯತ್ವ ಇಲ್ಲ ಎಂದರೆ - ನಿಷೇಧಾಶ್ರಯತ್ವನಿಷೇಧವನ್ನು ಕುರಿತು ಅಸತ್‌ಗೆ ಆಶ್ರಯತ್ವವು ಪ್ರಾಪ್ತವಾಗುವುದರಿಂದ ಪುನಃ ಅಸತ್‌ಗೆ ನಿಷೇಧಾಶ್ರಯತ್ವ ಇಲ್ಲ ಎನ್ನುವುದಾದರೆ ಸ್ವವಚನವ್ಯಾಘಾತ ಬರುತ್ತದೆ. ನಿಷೇಧಾಶ್ರಯತ್ವನಿಷೇಧವನ್ನು ಕುರಿತು ಅಸತ್‌ಗೆ ಆಶ್ರಯತ್ವವನ್ನು ಅಂಗೀಕರಿಸದಿದ್ದರೆ ನಿಷೇಧಾಶ್ರಯತ್ವವೇ ಪ್ರಾಪ್ತವಾಗುವುದರಿಂದ ಪುನಃ ವ್ಯಾಘಾತವೇ ಬರುತ್ತದೆ.

ಅಂದಮೇಲೆ ಈ ರೀತಿಯಾಗಿ ನಿಷೇಧವನ್ನು ಕುರಿತು ಆಶ್ರಯತ್ವವು ಅಸತ್ ಆದದ್ದಕ್ಕೂ ಇದೆ ಎಂದಮೇಲೆ, ಮಿಥ್ಯಾತ್ವವನ್ನು ಕುರಿತು (ಸತ್ತಾಪ್ರತಿಷೇಧವನ್ನು ಕುರಿತು) ಆಶ್ರಯತ್ವವು ವ್ಯಾವಹಾರಿಕಸತ್ ಆದ ಪ್ರಪಂಚಕ್ಕೆ ಉಪಪನ್ನವಾಗುತ್ತದೆ ಎಂದು ಏನು ಹೇಳುವುದು ?

ಈ ರೀತಿ ಶಂಕಿಸುವುದು ಸರಿಯಲ್ಲ. ಏಕೆಂದರೆ - ನಿಷೇಧಂ ಪ್ರತಿ ಆಶ್ರಯತ್ವವನ್ನು ಅಸತ್ ಆದದ್ದಕ್ಕೂ ಅಂಗೀಕರಿಸುವುದಾದರೆ, ಪ್ರಪಂಚಕ್ಕೂ ಅಸತ್ವವನ್ನೇ ಅಂಗೀಕರಿಸಿರಿ. ಅಸತ್ ಆದ ಪ್ರಪಂಚಕ್ಕೆ ಸತ್ತಾನಿಷೇಧರೂಪಮಿಥ್ಯಾತ್ವಂ ಪ್ರತಿ ಆಶ್ರಯತ್ವವು ಉಪಪನ್ನವಾಗುತ್ತದೆ. ಆದ್ದರಿಂದ ಆಶ್ರಯತ್ವವನ್ನು ಕೂಡಿಸುವುದಕ್ಕಾಗಿ ಪ್ರಪಂಚಕ್ಕೆ ವ್ಯಾವಹಾರಿಕಸತ್ವವನ್ನು ಸ್ವೀಕಾರ ಮಾಡುವುದು ವ್ಯರ್ಥವೇ ಆಗಬೇಕಾಗುತ್ತದೆ.

ಮತ್ತು, ಅಸತ್ ಆದದ್ದಕ್ಕೆ ನಿಷೇಧಂ ಪ್ರತಿ ಆಶ್ರಯತ್ವ ಕೂಡುವುದಾದರೆ ವಿಧಿಂ ಪ್ರತಿ ಆಶ್ರಯತ್ವ ಏಕೆ ಕೂಡುವುದಿಲ್ಲ ?

ಅಸತ್ ಆದದ್ದಕ್ಕೆ ನಿಷೇಧಾಶ್ರಯತ್ವ ಇದೆ ಎಂಬ ವಿಷಯದಲ್ಲಿ ''ವಂಧ್ಯಾಸುತೋ ನ ವಕ್ತಾ'' ಎಂಬ ಅನುಭವವೇ ಪ್ರಮಾಣವಾಗಿ ಇದೆ. ಆದರೆ ಅಸತ್‌ಗೆ ವಿಧಿಂ ಪ್ರತಿ ಆಶ್ರಯತ್ವ ಇದೆ ಎಂಬ ವಿಷಯದಲ್ಲಿ ಯಾವ ಪ್ರಮಾಣವಿದೆ ? ಎಂದು ಪ್ರಶ್ನೆ ಬಂದರೆ, ಅದು ಸರಿಯಲ್ಲ. ''ಘಟಃ ವಂಧ್ಯಾಸುತೋ ನ'' ಎಂಬುದಾಗಿ ಅಸತ್ ಆದದ್ದಕ್ಕೆ ಪ್ರತಿಯೋಗಿತ್ವರೂಪವಿಧ್ಯಾಶ್ರಯತ್ವ ವಿಷಯದಲ್ಲಿಯೂ ಪ್ರಮಾಣವಿದೆ.

ನಿಷೇಧವು ವಸ್ತುವಾಗಿಲ್ಲವಾದ್ದರಿಂದ ಅಸತ್ ಆದದ್ದು ನಿಷೇಧವನ್ನು ಕುರಿತು ಆಶ್ರಯವಾಗಬಹುದು. ಆದರೆ ವಿಧಿಯು ವಸ್ತುವಾದ್ದರಿಂದ ಅಂತಹ ವಸ್ತುವಾದ ವಿಧಿಯನ್ನು ಕುರಿತು ಅಸತ್ ಆಶ್ರಯವಾಗುವುದಾದರೆ ಅಸತ್ತೂ ವಸ್ತುವಾಗಬೇಕಾದ ಪ್ರಸಂಗ ಬರುವುದರಿಂದ ಅಸದ್ ಆದದ್ದು ವಿಧಿಯನ್ನು ಕುರಿತು ಆಶ್ರಯವಾಗುವುದಿಲ್ಲ. ಆದ್ದರಿಂದ ಅಸತ್ ಪ್ರತಿಯೋಗಿತ್ವರೂಪವಿಧ್ಯಾಶ್ರಯವಾಗಲು ಸಾಧ್ಯವಿಲ್ಲ ಎಂಬುದಾಗಿ ಶಂಕಿಸುವುದು ಸರಿಯಲ್ಲ.

ವಿಧಿ-ನಿಷೇಧಗಳು ಎರಡೂ ಸ್ವರೂಪಸತ್ ಆಗಿವೆ (ವಸ್ತುವಾಗಿವೆ) ಎಂಬ ವಿಷಯದಲ್ಲಿ ಯಾವ ವಿಶೇಷವೂ ಇಲ್ಲ. ''ಘಟಃ ಅಸ್ತಿ'' ಎಂಬುದಾಗಿ ಪ್ರತೀತಿ ಬರುವಂತೆ ''ಅಭಾವಃ ಅಸ್ತಿ'' ಎಂಬುದಾಗಿಯೂ ಪ್ರತೀತಿ ಬರುವುದರಿಂದ ವಿಧಿ -ನಿಷೇಧ ಎರಡೂ ವಸ್ತುಗಳಾಗಿವೆ. ಅಂದಮೇಲೆ ಅಸತ್ ಆದದ್ದು ನಿಷೇಧವನ್ನು

ಕುರಿತು ಆಶ್ರಯವಾಗುವುದಾದರೆ, ವಿಧಿಯನ್ನು ಕುರಿತೂ ಆಶ್ರಯವಾಗಲಿ ಎಂಬ ಆಪತ್ತಿ ಅಬಾಧಿತ.

**ಅವತಾರಿಕೆ :-** ಮಿಥ್ಯಾತ್ವ ಎಂದರೆ ಅಸತ್ವ-ಅನಿರ್ವಚನೀಯತ್ವ ಮೊದಲಾದ ಪಕ್ಷಗಳನ್ನು ಅಪಸಿದ್ಧಾಂತ-ಆಶ್ರಯಾಸಿದ್ಧಿ-ಸಿದ್ಧಸಾಧನತಾ ಮೊದಲಾದ ದೋಷಗಳಿಂದ ನಿರಾಕರಿಸಿ, ಪ್ರಕೃತದಲ್ಲಿ ''ತತ್ತ್ವಪ್ರದೀಪಿಕಾ''ಕಾರರು ಏನು ಮಿಥ್ಯಾತ್ವನಿರ್ವಚನ ಮಾಡಿದ್ದಾರೆ ಅದನ್ನು ಶಂಕಿಸಿಕೊಂಡು ನಿರಾಕರಿಸುತ್ತಾರೆ.

**ಟೀಕಾ :- ಏತೇನ ಸ್ವಾತ್ಯಂತಾಭಾವಸಮಾನಾಧಿಕರಣತಯಾ ಪ್ರತೀಯಮಾನತ್ವಂ ಮಿಥ್ಯಾತ್ವಮಿತಿ ನಿರಸ್ತಮ್ । ತದೇತತ್ ಅಪಾಕೃತಾಸತ್ವಾನಿರ್ವಚನೀಯತ್ವಾಭ್ಯಾಂ ನ ಬಹಿರ್ಭೂತಮಿತಿ ನ ಪೃಥಗಾಶಂಕ್ಯ ದೂಷಿತಮ್ ।**

**ಅನುವಾದ :-** ''ತತ್ತ್ವಪ್ರದೀಪಿಕಾ''ಕಾರರು ಈ ರೀತಿ ಅಭಿಪ್ರಾಯಪಡುತ್ತಾರೆ-

ಮಿಥ್ಯಾತ್ವ ಎಂದರೆ ಅಸತ್ವ ಎಂದಾಗಲೀ, ಅನಿರ್ವಚನೀಯತ್ವ ಎಂದಾಗಲೀ ನಾವು ಹೇಳುವುದಿಲ್ಲ. ಕಿಂತು -

**ಸ್ವಾತ್ಯಂತಾಭಾವಸಮಾನಾಧಿಕರಣತಯಾ ಪ್ರತೀಯಮಾನತ್ವಂ ಮಿಥ್ಯಾತ್ವಮ್ ।**

ತನ್ನ ಅಭಾವ ಇದ್ದಲ್ಲಿ ತಾನು ಇದೆ ಎಂದು ತೋರುವುದು. ಅಂದರೆ - ನಿಜವಾಗಿ ಅಲ್ಲಿ ವಸ್ತು ಇಲ್ಲ. ವಸ್ತುವಿನ ಅಭಾವವೇ ಇರುವುದು. ಅಂತಹ ವಸ್ತ್ವಭಾವ ಇದ್ದಲ್ಲಿ ವಸ್ತು ಇದೆ ಎಂದು ತೋರುವುದೇ ಮಿಥ್ಯಾತ್ವ ಎಂಬುದಾಗಿ ಹೇಳುತ್ತೇವೆ. ನಮ್ಮ ಈ ಪಕ್ಷದಲ್ಲಿ ಹಿಂದಿನ ದೋಷಗಳು ಬರುವುದಿಲ್ಲ.

ಈ ರೀತಿಯಾಗಿ 'ತತ್ತ್ವಪ್ರಕಾಶಿಕಾ'ಕಾರರು ಅಭಿಪ್ರಾಯಪಟ್ಟರೆ, ಇವರ ಈ ಪಕ್ಷವೂ ಸರಿಯಲ್ಲ. ಏಕೆಂದರೆ - ಇವರ ಈ ಪಕ್ಷವು ಈ ಹಿಂದೆ ನಿರಾಕರಿಸಿದ ಅಸತ್ವ-ಅನಿರ್ವಚನೀಯತ್ವ ಪಕ್ಷಗಳಿಂದ ಭಿನ್ನವಾಗಿಲ್ಲ. ಅಸತ್ವ -ಅನಿರ್ವಚನೀಯತ್ವ ಎಂಬ ಪಕ್ಷಗಳನ್ನು ನಿರಾಕರಿಸುವುದರಿಂದಲೇನೇ ಸ್ವಾತ್ಯಂತಾಭಾವಸಮಾನಾಧಿಕರಣತಯಾ ಪ್ರತೀಯಮಾನತ್ವ ಎಂಬ ಪಕ್ಷವೂ ನಿರಾಕೃತವಾದಂತಾಯಿತು.

ಸ್ವಾತ್ಯಂತಾಭಾವಸಮಾನಾಧಿಕರಣತಯಾ ಪ್ರತೀಯಮಾನತ್ವ ಎನ್ನುವುದು ಅಸತ್ವ-ಅನಿರ್ವಚನೀಯತ್ವಗಳಲ್ಲಿಯೇ ಹೇಗೆ ಅಂತರ್ಭೂತವಾಗುತ್ತದೆ ? ಎಂದರೆ,

ಒಂದುವೇಳೆ ಅತ್ಯಂತಾಭಾವಪ್ರತಿಯೋಗಿತ್ವವನ್ನು ಸ್ವರೂಪೇಣ ವಿವಕ್ಷಿಸುವುದಾದರೆ ಆಗ ಅಸತ್ವವನ್ನೇ ಹೇಳಿದಂತಾಗುತ್ತದೆ. ಕಾರಣ - ಸ್ವರೂಪೇಣ ಅತ್ಯಂತಾಭಾವ-ಪ್ರತಿಯೋಗಿತ್ವವೇ ಅಸತ್ವ. ಅತ್ಯಂತಾಸತ್ ಆದ ಶಶವಿಷಾಣಾದಿಗಳಿಗೂ ಸಹ ಸ್ವರೂಪೇಣ ಅತ್ಯಂತಾಭಾವಪ್ರತಿಯೋಗಿತ್ವದಿಂದ ಭಿನ್ನವಾದ ಅಸತ್ವ ಇಲ್ಲ. ಆದ್ದರಿಂದ ಅತ್ಯಂತಾಭಾವಪ್ರತಿಯೋಗಿತ್ವವನ್ನು ಸ್ವರೂಪೇಣ ವಿವಕ್ಷಿಸಿದರೆ ಅದು ಅಸತ್ವದಲ್ಲಿ ಅಂತರ್ಭೂತವಾಗುತ್ತದೆ.

ಇನ್ನು ಅಸದ್ವಿಲಕ್ಷಣಸ್ವರೂಪವನ್ನು ಉಳಿಸಿಕೊಂಡು ಪಾರಮಾರ್ಥಿಕತ್ವಾಕಾರೇಣ ಅತ್ಯಂತಾಭಾವಪ್ರತಿಯೋಗಿತ್ವವನ್ನು ವಿವಕ್ಷಿಸುವುದಾದರೆ, ಆಗ ಸದಸದ್ವೈಲಕ್ಷಣ್ಯವನ್ನೇ ಹೇಳಿದಂತಾಗಿ ಅನಿರ್ವಚನೀಯತ್ವದಲ್ಲಿ ಅಂತರ್ಭೂತವಾಗುತ್ತದೆ.

ಹೀಗೆ ತತ್ತ್ವಪ್ರದೀಪಿಕಾಕಾರರ ಅತ್ಯಂತಾಭಾವಪ್ರತಿಯೋಗಿತ್ವಪಕ್ಷವು ಅಸತ್ವ-ಅನಿರ್ವಚನೀಯತ್ವಪಕ್ಷಗಳಲ್ಲಿಯೇ ಅಂತರ್ಭಾವವಾಗುವುದರಿಂದ, ಆಶ್ರಯಾಸಿದ್ಧಿ-ಸಿದ್ಧಸಾಧನತಾದಿ ದೋಷಗಳನ್ನು ಹೇಳಿ ಅಸತ್ವ-ಅನಿರ್ವಚನೀಯತ್ವ ಪಕ್ಷಗಳನ್ನು ಹಿಂದೆಯೇ ನಿರಾಕರಿಸಿರುವ ಕಾರಣ ಅದರಿಂದಲೇ ತತ್ತ್ವಪ್ರದೀಪಿಕಾಕಾರರ ಪಕ್ಷವೂ ನಿರಾಕೃತವಾದಂತೆಯೇ ಆಯಿತು ಎಂದು ಭಾವ.

ಆದ್ದರಿಂದಲೇ ಸ್ವಾತ್ಯಂತಾಭಾವಸಮಾನಾಧಿಕರಣತಯಾ ಪ್ರತೀಯಮಾನತ್ವಂ ಮಿಥ್ಯಾತ್ವಂ ಎಂಬ ಪಕ್ಷವನ್ನು ಪ್ರತ್ಯೇಕವಾಗಿ ಆಶಂಕಿಸಿಕೊಂಡು ನಿರಾಕರಿಸಲಿಲ್ಲ.

**ವಿಶೇಷ ವಿಚಾರ :- ದಳಕೃತ್ಯವಿಚಾರ. (ಮಂದಾರಮಂಜರೀ-ಶ್ರೀನಿ)**

ಇಲ್ಲಿ ಸ್ವಾತ್ಯಂತಾಭಾವಸಮಾನಾಧಿಕರಣತಯಾ ಪ್ರತೀಯಮಾನತ್ವ ಎಂಬ ಲಕ್ಷಣದಲ್ಲಿ ಒಂದು ವಿಚಾರವನ್ನು (ದಶಕೃತ್ಯವನ್ನು) ಶ್ರೀವ್ಯಾಸರಾಜರು ಹಾಗೂ ಶ್ರೀನಿವಾಸತೀರ್ಥರು ತಮ್ಮ ಟಿಪ್ಪಣಿಯಲ್ಲಿ ನಿರೂಪಿಸಿದ್ದಾರೆ.

ಇಲ್ಲಿ ಸ್ವಾತ್ಯಂತಾಭಾವಸಮಾನಾಧಿಕರಣತಯಾ ಪ್ರತೀಯಮಾನತ್ವ ಎಂದೇ ಏಕೆ ಹೇಳಬೇಕು ? ಕೇವಲ ಸ್ವಾತ್ಯಂತಾಭಾವಸಮಾನಾಧಿಕರಣತ್ವ ಎಂದು ಹೇಳಬಹುದಲ್ಲ ? ಎಂದರೆ, ಅದು ಸರಿಯಲ್ಲ.

ಹಾಗೆ ಕೇವಲ ಸ್ವಾತ್ಯಂತಾಭಾವಸಮಾನಾಧಿಕರಣತ್ವ ಎಂದಷ್ಟೇ ಹೇಳಿದರೆ, (ತನ್ನ ಅಭಾವ ಇದ್ದಲ್ಲಿ ತಾನು ಇರುವುದು ಎಂದು ಹೇಳಿದರೆ) ಭಾವ-ತದತ್ಯಂತಾಭಾವಗಳಲ್ಲಿ

ಏಕಾಧಿಕರಣತ್ವ ಕೂಡದ ಕಾರಣ (ಭಾವ ಇದ್ದಲ್ಲಿ ಅದರ ಅಭಾವ ಇರದ ಕಾರಣ) ಭಾವ-ಅಭಾವಗಳನ್ನು ಒಂದೇಕಡೆ ಹೇಳಿದರೆ ವ್ಯಾಘಾತ ಬರುತ್ತದೆ.

ಅದಕ್ಕಾಗಿ ಪ್ರತೀಯಮಾನತ್ವ ಎಂದು ಹೇಳಬೇಕು. ಹಾಗೆ ಪ್ರತೀಯಮಾನತ್ವವನ್ನು ಹೇಳಿದಾಗ ವ್ಯಾಘಾತ ಬರುವುದಿಲ್ಲ. ಏಕೆಂದರೆ ಭಾವ-ಅಭಾವ ವಸ್ತುಗಳು ಒಂದೇಕಡೆ ಇರಲು ಸಾಧ್ಯವಿಲ್ಲದಿದ್ದರೂ ಸಹ, ಅಭಾವ ಇದ್ದಲ್ಲಿ ಭಾವವಸ್ತು ಇದೆ ಎಂದು ಭ್ರಾಂತಿ ಬರಬಹುದಾದ್ದರಿಂದ (ಭಾವಕ್ಕೆ ಅಧಿಕರಣವಾಗಿದೆ ಎಂದು ಭ್ರಾಂತಿಸಿದ್ಧವಾದ ವಸ್ತು ಅಭಾವಕ್ಕೆ ಅಧಿಕರಣವಾಗಬಹುದಾದ್ದರಿಂದ) ಸ್ವಾತ್ಯಂತಾಭಾವಸಮಾನಾಧಿಕರಣತಯಾ ಪ್ರತೀಯಮಾನತ್ವ ಎಂದು ಹೇಳಿದರೆ ವ್ಯಾಘಾತ ಬರುವುದಿಲ್ಲ. ಹಾಗಾದರೆ ಒಟ್ಟಿನಲ್ಲಿ

**''ಸ್ವಾಶ್ರಯತಯಾ ಪ್ರತೀಯಮಾನಾಧಿ**
**ಕರಣನಿಷ್ಠಾತ್ಯಂತಾಭಾವಪ್ರತಿಯೋಗಿತ್ವಂ ಮಿಥ್ಯಾತ್ವಂ''**

ಎಂಬುದಾಗಿ ಮಿಥ್ಯಾತ್ವದ ಪರಿಷ್ಕಾರ ಮಾಡಿದಂತಾಗುತ್ತದೆ. ಇದು ತತ್ತ್ವಪ್ರದೀಪಿಕಾಕಾರರ ಪಕ್ಷ.

**ಅವತಾರಿಕೆ:-** 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬುದಾಗಿ ಮಾಯಾವಾದಿಗಳು ಅನುಮಾನ ಮಾಡಿದಾಗ ಅದಕ್ಕೆ ಆಚಾರ್ಯರು

**''ಇತ್ಯುಕ್ತೇ ಜಗತೋಽಭಾವಾತ್ ಆಶ್ರಯಾಸಿದ್ಧಃ ಪಕ್ಷಃ''**

ಎಂಬುದಾಗಿ ಆಶ್ರಯಾಸಿದ್ಧಿದೋಷವನ್ನು ಹೇಳಿದರು. ಇದರ ಮೇಲೆ ಶಿಷ್ಯರು ಶಂಕಿಸುತ್ತಾರೆ :-

**ಟೀಕಾ :- ನನ್ವಾಶ್ರಯಾಸಿದ್ಧಿರಸ್ಮಾಕಂ ನ ದೋಷಃ । ಪರೋಽಪಿ ತಥಾ ಅಂಗೀಕುರುತೇ । 'ನಿರುಪಾಖ್ಯಮಪ್ಯಾಶ್ರಯ ಏವ' ಇತ್ಯುಕ್ತತ್ವಾತ್ । ತತ್ಕಥಂ ತದುದ್ಭಾವನಮ್ ?**

**ಇತ್ಥಮ್ । ಯದ್ಯಪಿ ಪರೋ ವೈಯಾತ್ಯಮಾತ್ರೇಣ ತಥಾಗತಮತಮನು-ಸೃತ್ಯ ತಥಾಽಹ । ತಥಾಪಿ ನಾಸೌ ತತ್ಸಿದ್ಧಾಂತಃ । ತಥಾತ್ವೇ ನಿರುಪಾಖ್ಯಸ್ಯಾಪಿ ಪ್ರತೀತ್ಯಂಗೀಕಾರಪ್ರಸಂಗಾತ್ । ಪ್ರಪಂಚಸ್ಯ ವ್ಯಾವಹಾರಿಕಸತ್ತಾಸ್ವೀಕಾರ-ವೈಯರ್ಥ್ಯಾಪತ್ತೇಶ್ಚ ಇತಿ ।**

**ಅನುವಾದ :-** ಆಶ್ರಯಾಸಿದ್ಧಿ ಎನ್ನುವುದು ನಮ್ಮ ಮತದಲ್ಲಿ ದೋಷವಲ್ಲ.

**''ಆಶ್ರಯಾಸಾಧ್ಯವ್ಯಧಿಕರಣಾಸಿದ್ಧಯೋ ನ ದೂಷಣಮ್ ॥''**

**''ಆಶ್ರಯವ್ಯಾಶ್ರಯಾಸಿದ್ಧೀ ಸಾಧ್ಯಾಸಿದ್ಧಿಶ್ಚ ದೂಷಣಮ್ ।''**

ಎಂಬುದಾಗಿ ಪ್ರಮಾಣಲಕ್ಷಣ-ಅನುವ್ಯಾಖ್ಯಾನಾದಿಗಳಲ್ಲಿ ಆಚಾರ್ಯರು ಅದನ್ನು ಸ್ಪಷ್ಟಪಡಿಸಿದ್ದಾರೆ. ಹಾಗಾಗಿ ಆಶ್ರಯಾಸಿದ್ಧಿಯು ನಮ್ಮ ಮತದಲ್ಲಿ ದೋಷವಲ್ಲ.

ಇನ್ನು ಮಾಯಾವಾದಿಗಳೂ ಸಹ ಆಶ್ರಯಾಸಿದ್ಧಿಯನ್ನು ದೋಷವಲ್ಲವೆಂದೇ ಅಂಗೀಕರಿಸುತ್ತಾರೆ. ಆ ವಿಷಯದಲ್ಲಿ ಅವರ ಮಾತೇ ಜ್ಞಾಪಕವಾಗಿ ಇದೆ -

**''ನಿರುಪಾಖ್ಯಮಪಿ ಆಶ್ರಯ ಏವ''**

ಅಸತ್ ಆದದ್ದೂ ಸಹ ಆಶ್ರಯವಾಗಬಹುದು. 'ವಂಧ್ಯಾಸುತೋ ನ ವಕ್ತಾ' ಇತ್ಯಾದಿ ಸ್ಥಳಗಳಲ್ಲಿ ಅಸತ್ ಆದ ವಂಧ್ಯಾಸುತನೂ ವಕ್ತೃತ್ವಾಭಾವಕ್ಕೆ ಆಶ್ರಯ ಆಗಿರುವುದು ಕಂಡಿದೆ ಎಂದು ಅವರ ಅಭಿಪ್ರಾಯ. ಹಾಗಾಗಿ ಆಶ್ರಯಾಸಿದ್ಧಿ ಅವರ ಪ್ರಕಾರವೂ ದೋಷವಲ್ಲ.

ಅಂದಮೇಲೆ ಆಶ್ರಯಾಸಿದ್ಧಿಯು ಉಭಯಮತರೀತಿಯಿಂದಲೂ ದೋಷವಲ್ಲ ಎಂದಾದಾಗ ''ಇತ್ಯುಕ್ತೇ ಜಗತೋಽಭಾವಾತ್ ಆಶ್ರಯಾಸಿದ್ಧಃ ಪಕ್ಷಃ'' ಎಂದು ಮಾಯವಾದಿಗಳನ್ನು ಕುರಿತು ಆಚಾರ್ಯರು ಆಶ್ರಯಾಸಿದ್ಧಿಯನ್ನು ಹೇಗೆ ದೋಷವಾನ್ನಾಗಿ ಕೊಟ್ಟರು ?

ಈ ರೀತಿಯಾಗಿ ಶಿಷ್ಯರು ಶಂಕೆ ಮಾಡಿದರೆ, ಅದಕ್ಕೆ ಶ್ರೀಮಟ್ಟೀಕಾಕೃತ್ಪಾದರು ಹೀಗೆ ಸಮಾಧಾನ ಹೇಳುತ್ತಾರೆ -

ಯದ್ಯಪಿ ಮಾಯಾವಾದಿಗಳು ಉದ್ಧಟತನದಿಂದ ಬೌದ್ಧಮತವನ್ನು ಅವಲಂಬಿಸಿ (ಬೌದ್ಧಮತದಲ್ಲಿ ಆಶ್ರಯಾಸಿದ್ಧಿಯು ದೋಷವಲ್ಲದ ಕಾರಣ ಆ ಮತವನ್ನು ಅನುಸರಿಸಿ) ಆಶ್ರಯಾಸಿದ್ಧಿಯು ದೋಷವಲ್ಲ ಎಂಬುದಾಗಿ ಹೇಳಿದ್ದಾರೆ ಅಷ್ಟೇ. ಆದರೆ ಆಶ್ರಯಾಸಿದ್ಧಿಯು ದೋಷವಲ್ಲ ಎನ್ನುವುದು ಅವರ ನಿಜವಾದ ಸಿದ್ಧಾಂತವಲ್ಲ.

ಹಾಗೊಂದುವೇಳೆ ಅವರು ಅಸತ್‌ಗೂ ಆಶ್ರಯತ್ವವನ್ನು ಅಂಗೀಕರಿಸಿ ಆಶ್ರಯಾಸಿದ್ಧಿ ದೋಷವಲ್ಲ ಎಂದೇ ಹೇಳುವುದಾದರೆ, ಅಸತ್‌ಗೂ ಪ್ರತೀತಿಯನ್ನು ಅಂಗೀಕರಿಸಬೇಕಾದ ಪ್ರಸಂಗ ಬರುತ್ತದೆ. ಅಂದರೆ,

**'ಸದ್ಭ್ಯಾಂ ಅಧಿಕರಣಪ್ರತಿಯೋಗಿಭ್ಯಾಂ ಅಭಾವೋ ನಿರೂಪ್ಯತೇ''**

ಎಂದು ವಚನ (ನಿಯಮ) ಇರುವುದರಿಂದ, ಧರ್ಮಿಯು ಅಪ್ರತೀತವಾದರೆ ಅದರಲ್ಲಿ ಯಾವ ಧರ್ಮವನ್ನೂ ನಿಷೇಧಿಸಲು ಶಕ್ಯವಿಲ್ಲದ ಕಾರಣ ವಂಧ್ಯಾಸುತ ಎಂಬ ಅಸದ್ರೂಪಧರ್ಮಿಯಲ್ಲಿ ವಕ್ತೃತ್ವವನ್ನು ನಿಷೇಧ ಮಾಡುವುದಕ್ಕಾಗಿ ಅಸತ್‌ಗೆ (ವಂಧ್ಯಾಸುತನಿಗೆ) ಪ್ರತೀತಿವಿಷಯತ್ವವನ್ನು ಅವಶ್ಯ ಹೇಳಬೇಕಾಗುತ್ತದೆ. ಆದರೆ ಅದು ನಿಮಗೆ ಸಾಧ್ಯವಿಲ್ಲ. ಕಾರಣ - 'ಅಸಚ್ಚೇನ್ನ ಪ್ರತೀಯೇತ' ಎಂಬುದಾಗಿ ನೀವು ಅಸತ್‌ಗೆ ಪ್ರತೀತಿ ಒಪ್ಪಿಲ್ಲ. ಆದ್ದರಿಂದ ಅಸತ್‌ಗೂ ಆಶ್ರಯತ್ವವನ್ನು ಅಂಗೀಕರಿಸಿ ಆಶ್ರಯಾಸಿದ್ಧ ದೋಷವಲ್ಲ ಎಂದು ಹೇಳಿದರೆ, ಅಸತ್‌ಗೂ ಪ್ರತೀತಿಯನ್ನು ಅಂಗೀಕರಿಸಬೇಕಾದ ಅತಿಪ್ರಸಂಗ ಬರುತ್ತದೆ.

ಮತ್ತು ಆಶ್ರಯಾಸಿದ್ಧಿ ದೋಷವಲ್ಲ ಎಂದು ಹೇಳುವುದಾದರೆ, ಪ್ರಪಂಚಕ್ಕೆ ಅಸತ್ವವನ್ನು ಅಂಗೀಕರಿಸಿದರೂ ಆಶ್ರಯತ್ವವು ಉಪಪನ್ನವಾಗುವುದರಿಂದ, ಆಶ್ರಯತ್ವವನ್ನು ಕೂಡಿಸುವುದಕ್ಕಾಗಿ ಪ್ರಪಂಚಕ್ಕೆ ವ್ಯಾವಹಾರಿಕಸತ್ವವನ್ನು ಸ್ವೀಕಾರ ಮಾಡುವುದು ವ್ಯರ್ಥವೂ ಆಗಬೇಕಾಗುತ್ತದೆ.

ಆದ್ದರಿಂದ ಆಶ್ರಯಾಸಿದ್ಧಿ ದೋಷವಲ್ಲ ಎಂಬುದಾಗಿ ಬೌದ್ಧಮತವನ್ನು ಅನುಸರಿಸಿ ಹೇಳಿದರೂ, ಅದು ಮಾಯವಾದಿಗಳ ನಿಜವಾದ ಸಿದ್ಧಾಂತವಲ್ಲ. ಮಾಯಾವಾದಿಗಳ ಮತದಲ್ಲಿ ಆಶ್ರಯಾಸಿದ್ಧಿಯು ದೋಷವೇ ಆಗಿದೆ. ಹಾಗಾಗಿ ಆಚಾರ್ಯರು ಮಾಯವಾದಿಗಳಿಗೆ ಆಶ್ರಯಾಸಿದ್ಧಿ ದೋಷ ಹೇಳಿದ್ದು ಸಮಂಜಸವೇ ಆಗಿದೆ.

**ಟೀಕಾ :- ಪ್ರತಿಜ್ಞಾನಿರಾಕರಣಾನಂತರಂ ಹೇತುನಿರಾಸಾವಸರಃ । ತತ್ರಾದೌ ಲಿಂಗದರ್ಶನಂ ತತೋ ವ್ಯಾಪ್ತಿಸ್ಮೃತಿಃ ಅಥಾವಸರವಿಚಾರಃ ತತೋಽನುಮಿತಿರಿತಿ ತೇನೈವ ಕ್ರಮೇಣ ಹೇತುಮಾಭಾಸೀಕರಿಷ್ಯನ್ನಸಿದ್ಧಿಂ ತಾವದಾಹ -**

**ಮೂಲ :- ದೃಶ್ಯತ್ವಾಭಾವಾದಸಿದ್ಧೋ ಹೇತುಃ ।**

**ಹೇತುರಿತಿ ತದರ್ಥೋ ಲಿಂಗಮುಚ್ಯತೇ । ಪರೇಣ ಹೇತುತಯಾ ಅಭಿಧೀಯ-ಮಾನತ್ವಮೇವಾಸ್ಯ ಹೇತುತ್ವಂ ನ ತು ವಾಸ್ತವಮಿತಿ ನ ವ್ಯಾಘಾತಃ ।**

**ದೃಶ್ಯತ್ವಂ ಹಿ ಪರೇಣ ವಿಯದಾದಿಪ್ರಪಂಚಸ್ಯ ನ ತಾವತ್ ಸತ್ಯಮಂಗೀಕರ್ತುಂ ಶಕ್ಯಮ್ । ತತ್ರ ದೃಶ್ಯತ್ವಸ್ಯ ವೃತ್ತಾವನೈಕಾಂತಿಕತ್ವ ಪ್ರಸಂಗಾತ್ । ಅವೃತ್ತಾವಜ್ಞಾನಾಸಿದ್ಧಿಪ್ರಸಕ್ತೇಃ । ಅತಸ್ತದಸದೇವೇತಿ ವಾಚ್ಯಮ್ । ತಥಾ ಚ ದೃಶ್ಯತ್ವಾಭಾವಾದಸಿದ್ಧೋ ಹೇತುಃ ಸ್ಯಾತ್ ।**

**ಅನುವಾದ :-** ಈ ರೀತಿಯಾಗಿ ಅಸಿದ್ಧಿ-ಅಪ್ರಸಿದ್ಧವಿಶೇಷಣತಾ-ಸಿದ್ಧಸಾಧನತಾ ಮೊದಲಾದ ದೋಷಗಳನ್ನು ಹೇಳಿ ಪ್ರತಿಜ್ಞೆಯನ್ನು (ವಿಮತಂ ಮಿಥ್ಯಾ ಎಂಬ ಭಾಗವನ್ನು) ನಿರಾಕರಿಸಿದ ಅನಂತರ ಪ್ರಕೃತ 'ದೃಶ್ಯತ್ವಾತ್' ಎಂಬ ಹೇತುವನ್ನು ನಿರಾಕರಿಸುವ ಪ್ರಸಕ್ತಿ .

ಅದರಲ್ಲಿಯೂ ಮೊದಲಿಗೆ ಲಿಂಗದರ್ಶನವು, ಅನಂತರ ವ್ಯಾಪ್ತಿಸ್ಮರಣೆ, ಅದರ ನಂತರ [1] ಅವಸರವಿಚಾರ, ಅದಾದಮೇಲೆ ಅನುಮಿತಿ. ಹೀಗೆ ಕ್ರಮ ಇರುವುದು. ಹೀಗಾಗಿ ಈ ಕ್ರಮದಿಂದಲೇ ಹೇತುವನ್ನು ನಿರಾಕರಿಸುವವರಾಗಿ ಮೊದಲಿಗೆ ಅಸಿದ್ಧಿದೋಷವನ್ನು ಹೇಳುತ್ತಾರೆ ಆಚಾರ್ಯರು -

**ಮೂಲ :- ದೃಶ್ಯತ್ವಾಭಾವಾದಸಿದ್ಧೋ ಹೇತುಃ ।**

**ಮೂಲಾರ್ಥ :-** ದೃಶ್ಯತ್ವಹೇತುವು ಸತ್ಯವಾಗದೇ ಅಸತ್ ಆದ್ದರಿಂದ, ಅಂತೆಯೇ ಪಕ್ಷವಾದ ವಿಯದಾದಿಪ್ರಪಂಚದಲ್ಲಿ ಬಾರದ ಕಾರಣ ದೃಶ್ಯತ್ವಹೇತು ಅಸಿದ್ಧವಾಗಿದೆ.

---

1 ಅವಸರವಿಚಾರ ಎಂದರೆ ಪ್ರತಿಬಂಧಕಜಿಜ್ಞಾಸಾವಿಚ್ಛೇದ ಎಂದರ್ಥ. ಅಂದರೆ ಅನುಮಾನಪ್ರಯೋಗ ಮಾಡುವವನು ವ್ಯಾಪ್ತಿಸ್ಮರಣಾನಂತರದಲ್ಲಿ

''ಲಿಂಗಪರಾಮರ್ಶಾನಂತರಮಪಿ ಬಾಧಸತ್ಪ್ರತಿಪಕ್ಷಾವತಾರಶಂಕಯಾ ಮುಹೂರ್ತಂ ವಿಲಂಬ್ಯ ಅನುಮಾನಾವತಾರಃ''

ಎಂಬುದಾಗಿ ಮಣಿಕಾರನು ಹೇಳುವಂತೆ, ಅನುಮತಿಗೆ ಪ್ರತಿಬಂಧಕವಾದ ಬಾಧ- ಪ್ರತಿಪಕ್ಷಗಳ ಅಭಾವವನ್ನು ನಿಶ್ಚಯ ಮಾಡಿಕೊಳ್ಳುತ್ತಾನಾದ್ದರಿಂದ, ಬಾಧ-ಪ್ರತಿಪಕ್ಷರೂಪ ಪ್ರತಿಬಂಧಕದ ಅಭಾವವನ್ನು ನಿಶ್ಚಯ ಮಾಡಿಕೊಳ್ಳುವುದೇ ಅವಸರವಿಚಾರ.

ಲಿಂಗಪ್ರತಿಪಾದಕವಾದ ವಚನವು ಹೇತು ಎನಿಸಿಕೊಳ್ಳುತ್ತದೆ. ಅದು ಸಿದ್ಧವೇ ಆಗಿರುವುದರಿಂದ ''ಅಸಿದ್ಧೋ ಹೇತುಃ'' ಎಂದು ಹೇಗೆ ಹೇಳಿದರು ? ಎಂಬ ಶಂಕೆ ಬೇಡ. ಕಾರಣ ಇಲ್ಲಿ ಹೇತು ಎಂದರೆ ಲಿಂಗಪ್ರತಿಪಾದಕ ವಚನ ಎಂದು ಅರ್ಥವಲ್ಲ. ಕಿಂತು ಲಿಂಗಪ್ರತಿಪಾದಕವಚನದಿಂದ ಪ್ರತಿಪಾದ್ಯವಾದ ಲಿಂಗ (ವಸ್ತು) ಎಂಬ ಅರ್ಥವನ್ನು [1]ಲಕ್ಷಣಾವೃತ್ತಿಯಿಂದ ವಿವಕ್ಷಿಸಲಾಗಿದೆ. ಲಿಂಗಪ್ರತಿಪಾದಕವಚನವು ಸಿದ್ಧವಾಗಿದ್ದರೂ ಆ ವಚನದಿಂದ ಪ್ರತಿಪಾದ್ಯವಾದ ಲಿಂಗವು (ದೃಶ್ಯತ್ವವು) ಸಿದ್ಧವಾಗಿಲ್ಲವಾದ್ದರಿಂದ ಅಸಿದ್ಧಿದೋಷ ಹೇಳಿದ್ದು ಸಮಂಜಸವೇ ಆಗಿದೆ.

ವ್ಯಾಪ್ತಿಬಲದಿಂದ ಅರ್ಥಗಮಕವಾದ (ಸಾಧ್ಯಸಾಧಕವಾದ) ಲಿಂಗವು ಹೇತುವಾಗುವುದರಿಂದ ಅದು ನಿರ್ದುಷ್ಟವೇ ಆದ್ದರಿಂದ ಅದಕ್ಕೆ ಅಸಿದ್ಧಿಯನ್ನು ಹೇಳುವುದು ವ್ಯಾಹತವಾಗುತ್ತದೆ ಎಂಬ ಶಂಕೆಯೂ ಬೇಡ. ಕಾರಣ - ಪರರು ಯಾವುದನ್ನು ಹೇತುವನ್ನಾಗಿ ಹೇಳಿದ್ದಾರೆಯೋ ಅದು (ಆಭಿಮಾನಿಕವಾದದ್ದು) ಎನ್ನುವುದು ಪ್ರಕೃತ ಹೇತುಶಬ್ದದಿಂದ ವಿವಕ್ಷಿತವಾದ ಅರ್ಥ. ಹೊರತು ವಾಸ್ತವವಾದ ಹೇತುತ್ವವನ್ನು (ವ್ಯಾಪ್ತಿಬಲೇನ ಅರ್ಥಗಮಕತ್ವವನ್ನು) ವಿವಕ್ಷಿಸಿಲ್ಲ. ಆದ್ದರಿಂದ ವ್ಯಾಹತಿಗೆ ಅವಕಾಶವಿಲ್ಲ.

ಪರರು ವಿಯದಾದಿಪ್ರಪಂಚಕ್ಕೆ ಸತ್ಯವಾದ ದೃಶ್ಯತ್ವವನ್ನು ಅಂಗೀಕರಿಸಲು ಶಕ್ಯವಿಲ್ಲ. ಏಕೆಂದರೆ - ದೃಶ್ಯತ್ವವನ್ನು ಸತ್ಯ ಎಂದು ಹೇಳುವುದಾದರೆ, ಆ ದೃಶ್ಯತ್ವದಲ್ಲಿ ದೃಶ್ಯತ್ವ ಇದೆಯೋ ? ಇಲ್ಲವೋ ?

ದೃಶ್ಯತ್ವದಲ್ಲಿ ದೃಶ್ಯತ್ವ ಇದೆ ಎನ್ನುವುದಾದರೆ, ಆ ದೃಶ್ಯತ್ವವನ್ನು ಸತ್ಯ ಎಂದು ಅಂಗೀಕರಿಸಿದ್ದರಿಂದ ಅಲ್ಲಿ ಮಿಥ್ಯಾತ್ವಸಾಧ್ಯ ಇಲ್ಲ. ಆದರೆ ದೃಶ್ಯತ್ವ ಇರುವ ಕಾರಣ ವ್ಯಭಿಚಾರ ಬರುತ್ತದೆ.

ಇನ್ನು ದೃಶ್ಯತ್ವದಲ್ಲಿ ದೃಶ್ಯತ್ವ ಇಲ್ಲ ಎನ್ನುವುದಾದರೆ, ದೃಶ್ಯತ್ವಹೇತುವು ಜ್ಞಾನವಿಷಯವಾಗಿಲ್ಲ ಎಂದಾಗಿ ಹೇತುವಿನ ಜ್ಞಾನವೇ ಇಲ್ಲದಂತಾಗಿ ಅಜ್ಞಾನಾಸಿದ್ಧಿಪ್ರಸಂಗ ಬರುತ್ತದೆ.

---

1 ಲಕ್ಷಣಾವೃತ್ತಿಯನ್ನು ಹೇಳಬೇಕಾದರೆ ಅದಕ್ಕೆ ಮುಖ್ಯಾರ್ಥಸಂಬಂಧವನ್ನು ಹೇಳಬೇಕು. ಪ್ರಕೃತ ''ತದರ್ಥೋ ಲಿಂಗಮುಚ್ಯತೇ'' ಎಂಬುದಾಗಿ ಹೇಳುವ ಮೂಲಕ ಪ್ರತಿಪಾದ್ಯ-ಪ್ರತಿಪಾದಕಭಾವಸಂಬಂಧವು ಪ್ರಕೃತದಲ್ಲಿ ಲಕ್ಷಣಾಬೀಜವಾಗಿದೆ ಎಂದು ಸೂಚಿಸುತ್ತಿದ್ದಾರೆ.

ಆದ್ದರಿಂದ ದೃಶ್ಯತ್ವವನ್ನು ಸತ್ಯ ಎಂದು ಅಂಗೀಕರಿಸಲು ಬರುವುದಿಲ್ಲವಾದ್ದರಿಂದ ''ದೃಶ್ಯತ್ವವು ಅಸತ್ ಆಗಿದೆ'' ಎಂದೇ ಹೇಳಬೇಕು. ದೃಶ್ಯತ್ವವು ಅಸತ್ ಎಂದರೆ ದೃಶ್ಯತ್ವವೇ ಇಲ್ಲ ಎಂದಾಗುವುದರಿಂದ, ಪಕ್ಷವಾದ ವಿಯದಾದಿಪ್ರಪಂಚದಲ್ಲಿ ದೃಶ್ಯತ್ವ ಬಾರದ ಕಾರಣ ಅಸಿದ್ಧಿ ಬರುತ್ತದೆ (ಹೇತುವು ಅಸಿದ್ಧವಾಗುತ್ತದೆ) ಎಂದು ಅಭಿಪ್ರಾಯ.

**ಟೀಕಾ :- ಮಾ ಭೂತ್ ದೃಶ್ಯತ್ವಮ್ । ಅನಿರ್ವಚನೀಯಂ ತು ವಿದ್ಯತ ಏವ । ಅತೋ ನಾಸಿದ್ಧಿರಿತ್ಯತ ಆಹ -**

## ಮೂಲ :- ಅನಿರ್ವಚನೀಯಾಸಿದ್ಧೇರೇವ ।

**ಅನಿರ್ವಚನೀಯದೃಶ್ಯತ್ವಸ್ಯ ಪ್ರಪಂಚೇ ಅಸ್ಮಾಕಮಸಿದ್ಧೇರಸಿದ್ಧಿರೇವ ।**

**ನ ಬ್ರೂಮೋ ವಯಂ ಸತ್ಯಮನಿರ್ವಚನೀಯಂ ವಾ ದೃಶ್ಯತ್ವಂ ಹೇತುರಿತಿ। ಯೇನಾನ್ಯತರಾಸಿದ್ಧಿಃ ಸ್ಯಾತ್ । ಕಿಂ ನಾಮ ? ದೃಶ್ಯತ್ವಸಾಮಾನ್ಯಮ್ । ತಚ್ಚಾಸ್ತ್ಯೇವ ವಿಯದಾದೌ ವಾದಿಪ್ರತಿವಾದಿಸಮ್ಮತಮಿತಿ ಕಥಮಸಿದ್ಧಿಃ ಸ್ಯಾತ್ । ಸಾಧಾರಣಪ್ರಯುಕ್ತಹೇತೋಶ್ಚ ವಿಶೇಷವಿಕಲ್ಪೇನ ನಿರಾಸೇ ಸರ್ವಾನುಮಾನ-ಭಂಗಃ । ತಥಾ ಚ ಧೂಮಾದೂರ್ಧ್ವಧ್ವಜಸಾಧನೇಽಪ್ಯನೇತದ್ದೇಶಕಾಲ-ಸಂಲಗ್ನೋ ಧೂಮೋ ಹೇತುಃ ? ಕಿಂ ವೈತದ್ದೇಶಕಾಲಸಂಲಗ್ನಃ ? ಇತಿ ವಿಕಲ್ಪ್ಯ ಅಸಿದ್ಧಿರಾದ್ಯೇ, ದ್ವಿತೀಯೇ ಸಾಧನಶೂನ್ಯಂ ನಿದರ್ಶನಮಿತಿ ಶಕ್ಯತೇ ವಕ್ತುಮ್ । ತತ್ರ ಚ ಅವಿವಕ್ಷಿತವಿಶೇಷಂ ಧೂಮಮಾತ್ರಂ ಹೇತುರಿತ್ಯೇವ ಪರಿಹಾರಃ । ಸ ತು ಸಮಃ ಪ್ರಕೃತೇಽಪೀತಿ ।**

**ತತ್ರಾಪ್ಯೇತದೇವೋತ್ತರಮ್ । ತಥಾ ಹಿ, ಸ್ಯಾದಯಂ ಧೂಮಾನುಮಾನೇ ಪರಿಹಾರಃ । ಧೂಮದ್ವಯೇಽಪಿ ಧೂಮತ್ವಸಾಮಾನ್ಯಸ್ಯ ವಾದಿಪ್ರತಿವಾದಿ-ಸಮ್ಮತತ್ವಾತ್ । ಸ ಚ ಸತ್ಯಾನಿರ್ವಚನೀಯದೃಶ್ಯತ್ವಯೋರ್ದೃಶ್ಯತ್ವಸಾಮಾನ್ಯಂ ವಾದಿಪ್ರತಿವಾದಿಸಮ್ಮತಮ್ । ಯೇನಾತ್ರ ತಥಾ ಪರಿಹಾರಃ ಸ್ಯಾತ್ । ಅನಿರ್ವಚನೀಯಸ್ಯ ಸ್ವರೂಪತ ಏವಾಸ್ಮಾಕಮಸಿದ್ಧೇಃ । ನ ಚಾಸಿದ್ಧಾಶ್ರಯಂ ಸಾಮಾನ್ಯಂ ಸಿದ್ಧಂ ಭವತಿ ।**

**ಅನುವಾದ :-** ವಿಯದಾದಿಪ್ರಪಂಚದಲ್ಲಿ ಸತ್ಯವಾದ ದೃಶ್ಯತ್ವವು ಇರುವುದು ಬೇಡ. ಆದರೆ ಅನಿರ್ವಚನೀಯವಾದ ದೃಶ್ಯತ್ವವು ಮಾತ್ರ ಇದ್ದೇ ಇದೆ. ಆದ್ದರಿಂದ

ನೀವು ಶಂಕಿಸಿದಂತೆ ನಮ್ಮ ದೃಶ್ಯತ್ವಾನುಮಾನಕ್ಕೆ ಅಸಿದ್ಧಿದೋಷ ಬರುವುದಿಲ್ಲ ಎಂಬುದಾಗಿ ಮಾಯಾವಾದಿಗಳು ಆಕ್ಷೇಪ ಮಾಡಿದರೆ, ಅದನ್ನು ನಿರಾಕರಿಸುತ್ತಾರೆ -

## ಮೂಲ :- ಅನಿರ್ವಚನೀಯಾಸಿದ್ಧೇರೇವ ।

**ಮೂಲಾರ್ಥ :-** ನೀವು ಹೇಳಿದ ಅನಿರ್ವಚನೀಯದೃಶ್ಯತ್ವವು ವಿಯದಾದಿಪ್ರಪಂಚದಲ್ಲಿ ನಮಗೆ ಅಸಿದ್ಧವಾದ್ದರಿಂದ ನಿಮ್ಮ ಅನುಮಾನಕ್ಕೆ ಅಸಿದ್ಧಿದೋಷ ಬಂದೇ ಬರುತ್ತದೆ.

**ಮಾಯಾವಾದಿಗಳು ಶಂಕಿಸುತ್ತಾರೆ :-** ಸತ್ಯವಾದ ದೃಶ್ಯತ್ವವು ಹೇತುವಾಗಿದೆ ಎಂದಾಗಲೀ, ಅನಿರ್ವಚನೀಯವಾದ ದೃಶ್ಯತ್ವವು ಹೇತುವಾಗಿದೆ ಎಂದಾಗಲೀ ನಾವು ಹೇಳುವುದಿಲ್ಲ. ಒಂದುವೇಳೆ ಹಾಗೆ ಹೇಳುತ್ತಿದ್ದರೆ ಅನ್ಯತರಾಸಿದ್ಧಿ (ಸತ್ಯವಾದ ದೃಶ್ಯತ್ವವು ನಮಗೆ ಅಸಿದ್ಧ. ಅನಿರ್ಚವನೀಯವಾದ ದೃಶ್ಯತ್ವವು ನಿಮಗೆ ಅಸಿದ್ಧ. ಹೀಗೆ ಅಸಿದ್ಧಿದೋಷ) ಬರುತ್ತಿತ್ತು .

ಕಿಂತು ಏನು ಹೇಳುತ್ತೇವೆ ? [1] ದೃಶ್ಯತ್ವಸಾಮಾನ್ಯವು ಹೇತುವಾಗಿದೆ ಎಂದು ಹೇಳುತ್ತೇವೆ. ಇಂತಹ ದೃಶ್ಯತ್ವಸಾಮಾನ್ಯವು ವಿಯದಾದಿಪ್ರಪಂಚದಲ್ಲಿ ಇದ್ದೇ ಇದೆ ಎಂಬುದಾಗಿ ವಾದಿ-ಪ್ರತಿವಾದಿಗಳಿಗೆ ಸಮ್ಮತವಾಗಿದೆ. ಅಂದಮೇಲೆ ಅಸಿದ್ಧಿ ಹೇಗೆ ಬರುತ್ತದೆ ?

ಸಾಧಾರಣವಾಗಿ ಪ್ರಯೋಗಿಸಿದ ಹೇತುವನ್ನು ವಿಶೇಷವಿಕಲ್ಪಗಳಿಂದ ನಿರಾಕರಣೆ ಮಾಡುವುದಾದರೆ, ಎಲ್ಲ ಅನುಮಾನ(ಸದನುಮಾನ)ಗಳೂ ಭಗ್ನವಾಗಬೇಕಾದ ಪ್ರಸಂಗ ಬರುತ್ತದೆ.

ಅದು ಹೇಗೆಂದರೆ -

**'ಪರ್ವತೋ ವಹ್ನಿಮಾನ್ ಧೂಮಾತ್'**

ಎಂಬುದಾಗಿ ಧೂಮದಿಂದ ವಹ್ನಿಯನ್ನು ಸಾಧಿಸುವ ಸದನುಮಾನದಲ್ಲಿಯೂ, ಮಹಾನಸದೇಶ-ಭೂತಕಾಲಗಳಲ್ಲಿ ಸಂಬದ್ಧವಾದ ಧೂಮವನ್ನು ಹೇತುವನ್ನಾಗಿ

1 ದೃಶ್ಯತ್ವಸಾಮಾನ್ಯ ಎಂದರೆ, ಸತ್ಯ-ಅನಿರ್ವಚನೀಯ ಎಂಬುದಾಗಿ ಯಾವ ವಿಶೇಷಣವನ್ನೂ ನೀಡದೆ, ಕೇವಲ ದೃಶ್ಯತ್ವ ಎಂದು ಅರ್ಥ.




ಮಾಡುತ್ತೀರೋ ? ಅಥವಾ ಪರ್ವತದೇಶ-ವರ್ತಮಾನಕಾಲಗಳಲ್ಲಿ ಸಂಬದ್ಧವಾದ ಧೂಮವನ್ನು ಹೇತುವನ್ನಾಗಿ ಮಾಡುತ್ತೀರೋ ?

ಮಹಾನಸದೇಶ-ಭೂತಕಾಲಗಳಲ್ಲಿ ಸಂಬದ್ಧವಾದ ಧೂಮವನ್ನು ಹೇತು ಮಾಡಿದರೆ, ಅಂತಹ ಧೂಮವು ಪಕ್ಷದಲ್ಲಿ (ಪರ್ವತದಲ್ಲಿ) ಬಾರದ ಕಾರಣ ಅಸಿದ್ಧಿ ಬರುತ್ತದೆ. ಇನ್ನು ಪರ್ವತದೇಶ-ವರ್ತಮಾನಕಾಲಗಳಲ್ಲಿ ಸಂಬದ್ಧವಾದ ಧೂಮವನ್ನು ಹೇತು ಮಾಡಿದರೆ, ಅಂತಹ ಧೂಮವು ದೃಷ್ಟಾಂತದಲ್ಲಿ (ಮಹಾನಸದಲ್ಲಿ) ಬಾರದ ಕಾರಣ ಸಾಧನವೈಕಲ್ಯ ಬರುತ್ತದೆ. ಈ ರೀತಿಯಾಗಿ ಎಲ್ಲ ಸದನುಮಾನಗಳಲ್ಲಿಯೂ ವಿಶೇಷವಿಕಲ್ಪಗಳಿಂದ ನಿರಾಕರಣೆ ಮಾಡಲು ಶಕ್ಯವಿದೆ.

ಅಲ್ಲಿ ನೀವು ಏನು ಪರಿಹಾರ ಹೇಳಬೇಕು ? ಏತದ್ದೇಶಕಾಲಸಂಬದ್ಧ-ಅನೇತದ್ದೇಶಕಾಲಸಂಬದ್ಧ ಎಂಬುದಾಗಿ ಯಾವ ವಿಶೇಷವನ್ನೂ ವಿವಕ್ಷಿಸದೇ (ಯಾವ ವಿಶೇಷಣವನ್ನೂ ಕೊಡದೇ) ಕೇವಲ ಧೂಮವು ಹೇತುವಾಗಿದೆ ಎಂಬುದಾಗಿ ಪರಿಹಾರ ಹೇಳಬೇಕು. ಪ್ರಕೃತದಲ್ಲಿ ನಾವೂ ಅದೇ ಪರಿಹಾರವನ್ನು ಹೇಳುತ್ತೇವೆ. ಸತ್ಯ-ಅನಿರ್ವಚನೀಯ ಎಂಬುದಾಗಿ ಯಾವ ವಿಶೇಷವನ್ನೂ ವಿವಕ್ಷಿಸದೇ (ಸತ್ಯತ್ವ-ಅನಿರ್ವಚನೀಯತ್ವ ಈ ಯಾವ ವಿಶೇಷಣವನ್ನೂ ಕೂಡದೇ) ಕೇವಲ ದೃಶ್ಯತ್ವವು ಹೇತುವಾಗಿದೆ ಎಂದು ಪರಿಹಾರ ಹೇಳುತ್ತೇವೆ. ಆದ್ದರಿಂದ ನಮಗೆ ಯಾವುದೇ ದೋಷ ಬರುವುದಿಲ್ಲ. ಇದು ಮಾಯಾವಾದಿಗಳ ಶಂಕೆಯ ಅಭಿಪ್ರಾಯ.

**ಮಾಯಾವಾದಿಗಳ ಶಂಕೆಗೆ ಸಮಾಧಾನ :-** ಈ ರೀತಿಯಾಗಿ ಮಾಯಾವಾದಿಗಳು ಶಂಕಿಸಿದರೆ, ಅದಕ್ಕೂ ''ಅನಿರ್ವಚನೀಯಾಸಿದ್ಧೇರೇವ'' ಎಂಬ ಆಚಾರ್ಯರ ಮಾತೇ ಸಮಾಧಾನ.

ಆದರ ಅಭಿಪ್ರಾಯ - ಏತದ್ದೇಶಕಾಲಸಂಬದ್ಧ ಧೂಮ, ಅನೇತದ್ದೇಶಕಾಲ-ಸಂಬದ್ಧ ಧೂಮ ಈ ಎರಡೂ ಧೂಮಗಳಲ್ಲಿಯೂ ಧೂಮತ್ವಸಾಮಾನ್ಯವು ಇದೆ ಎಂಬುದಾಗಿ ವಾದಿ-ಪ್ರತಿವಾದಿಗಳಿಬ್ಬರಿಗೂ ಸಮ್ಮತವೇ ಆಗಿದ್ದರಿಂದ ಧೂಮಾನುಮಾನದಲ್ಲಿ ಈ ರೀತಿಯ ಪರಿಹಾರ ಸಂಭಾವಿತವಾಗಿದೆ. ಆದರೆ ಸತ್ಯ-ಅನಿರ್ವಚನೀಯ ದೃಶ್ಯತ್ವಗಳಲ್ಲಿ ದೃಶ್ಯತ್ವಸಾಮಾನ್ಯವು ಇದೆ ಎಂಬುದಾಗಿ ವಾದಿ-ಪ್ರತಿವಾದಿಗಳಿಗೆ ಸಮ್ಮತವಾಗಿಲ್ಲವಾದ್ದರಿಂದ ದೃಶ್ಯತ್ವಾನುಮಾನದಲ್ಲಿ ಈ ರೀತಿ ಪರಿಹಾರ ಹೇಳಲು ಬರುವುದಿಲ್ಲ.

ಸತ್ಯ-ಅನಿರ್ವಚನೀಯ ದೃಶ್ಯತ್ವಗಳಲ್ಲಿ ದೃಶ್ಯತ್ವಸಾಮಾನ್ಯವು ವಾದಿ-ಪ್ರತಿವಾದಿಗಳಿಗೆ ಸಮ್ಮತವಾಗಿಲ್ಲ ಏಕೆ ? ಎಂದರೆ, ಉಭಯಾನುಗತವಾದ ಸಾಮಾನ್ಯವು ಇರಬೇಕಾದರೆ, ಆ ಸಾಮಾನ್ಯಕ್ಕೆ ಆಶ್ರಯವಾದ ಉಭಯ ವಸ್ತುಗಳೂ ಸತ್ಯವಾಗಿರಬೇಕು. ಏತದ್ದೇಶಕಾಲಸಂಬದ್ಧಧೂಮ - ಅನೇತದ್ದೇಶಕಾಲಸಂಬದ್ಧ ಧೂಮ ಈ ಎರಡೂ ವಸ್ತುಗಳು ಸತ್ಯವಾಗಿರುವುದರಿಂದ ಅವುಗಳಲ್ಲಿ ಧೂಮತ್ವಸಾಮಾನ್ಯವು ಇರಬಹುದಾಗಿದೆ. ಆದರೆ ಪ್ರಕೃತದಲ್ಲಿ ಸತ್ಯವಾದ ದೃಶ್ಯತ್ವ ಇದ್ದರೂ ಸಹ ಅನಿರ್ವಚನೀಯವಾದ ದೃಶ್ಯತ್ವವು ಸ್ವರೂಪತಃ ಏವ ನಮಗೆ ಅಸಿದ್ಧವಾಗಿದೆ. ಒಂದು ವಸ್ತು ಸತ್ಯ, ಮತ್ತೊಂದು ಅಸತ್ ಆಗಿದ್ದರೆ ಅಂತಹವುಗಳಲ್ಲಿ ಸಾಮಾನ್ಯವು ಸಿದ್ಧವಾಗುವುದಿಲ್ಲ.

ಆದ್ದರಿಂದ ದೃಶ್ಯತ್ವವು ನಿಮ್ಮ ಪ್ರಕಾರ ಸತ್ಯವಾಗಲು ಸಾಧ್ಯವಿಲ್ಲವಾದ್ದರಿಂದ ಅಸತ್ ಎಂದೇ ಹೇಳಬೇಕು. ಹಾಗಾಗಿ ದೃಶ್ಯತ್ವಹೇತುವೇ ಇಲ್ಲದ ಕಾರಣ ಅಸಿದ್ಧಿದೋಷ ಬಂದೇ ಬರುತ್ತದೆ ಎಂದು ಸಿದ್ಧವಾಗುತ್ತದೆ.

**ಟೀಕಾ :- ಅಥ ವಾ ದೃಗ್ಜನ್ಯಫಲಾಶ್ರಯತ್ವಂ ದೃಶ್ಯತ್ವಂ ಪರೇಣ ವಕ್ತವ್ಯಮ್। ವೃತ್ತಿವ್ಯಾಪ್ಯತ್ವಸ್ಯ ಸಾಧಾರಣಸ್ಯ ಚ ದೃಶ್ಯತ್ವಸ್ಯ ಆತ್ಮನಿ ವಿಪಕ್ಷೇಽಪ್ಯಂಗೀಕೃತತ್ವೇನ ಅನೈಕಾಂತಿಕತ್ವಾಪಾತಾತ್ । ಜ್ಞಾತತಾಲಕ್ಷಣಫಲಸ್ಯಾನ್ಯತ್ರ ನಿರಾಕೃತತ್ವೇನ ಅಸ್ಮನ್ಮತೇ ದೃಶ್ಯತ್ವಾಭಾವಾದಸಿದ್ಧೋ ಹೇತುಃ ಸ್ಯಾತ್ ।**

**ಜ್ಞಾತತಾಂಗೀಕಾರೇಽಪಿ ಅತೀತಾದಾವತೀಂದ್ರಿಯೇಷು ಚ ದೃಶ್ಯತ್ವಾ-ಭಾವಾದ್ಭಾಗಾಸಿದ್ಧಿಃ । ಅಸಿದ್ಧೋ ಹೇತುರಿತಿ ಚ ಯೋಗವಿಭಾಗಃ ಕರ್ತವ್ಯಃ । ತೇನ ಆಶ್ರಯಾಸಿದ್ಧಿಸಂಗ್ರಹೋಽಪಿ ಭವತಿ । ಉಪಪತ್ತಿಸ್ತು ಪೂರ್ವೋಕ್ತೈ-ವಾನುಸಂಧೇಯೇತಿ ।**

**ನನು ದೃಶ್ಯತ್ವಾಭಾವಾತಿರಿಕ್ತಂ ನ ತಸ್ಯಾಸಿದ್ಧತ್ವಂ ನಾಮ । ಅತಃ ಕಥಂ ಹೇತುಹೇತುಮದ್ಭಾವಃ ? ಮೈವಮ್ । ಸಾಮಾನ್ಯವಿಶೇಷಭಾವೇನ ವೃಕ್ಷತ್ವ ಶಿಂಶುಪಾತ್ವಯೋರಿವೋಪಪತ್ತೇಃ । ವ್ಯವಹಾರೋ ವಾ ಅತ್ರ ಸಾಧ್ಯ ಇತ್ಯದೋಷಃ । ಏವಮುತ್ತರತ್ರಾಪಿ ವೇದಿತವ್ಯಮ್ ।**

**ಅನುವಾದ :-** ಅಥವಾ ದೃಶ್ಯತ್ವ ಎಂದರೆ ದೃಗ್ಜನ್ಯಫಲಾಶ್ರಯತ್ವ ಎಂಬುದಾಗಿಯೇ ಪರರು ಅರ್ಥೈಸಬೇಕು. ಏಕೆಂದರೆ- ವೃತ್ತಿಜ್ಞಾನವಿಷಯತ್ವವೇ

ದೃಶ್ಯತ್ವ ಎಂದು ಹೇಳಿದರೆ ಅಥವಾ ದೃಗ್‌ಜನ್ಯಫಲಾಶ್ರಯತ್ವವೃತ್ತಿಜ್ಞಾನ-ವಿಷಯತ್ವಗಳಲ್ಲಿ ಸಾಧಾರಣವಾದ ಕೇವಲ ದೃಶ್ಯತ್ವ ಎಂದು ಹೇಳುವುದಾದರೆ ಈ ವಿಧವಾದ ದೃಶ್ಯತ್ವವು ವಿಪಕ್ಷನಾದ ಆತ್ಮನಲ್ಲಿಯೂ ಇರುವುದರಿಂದ (ಈ ವಿಧವಾದ ದೃಶ್ಯತ್ವವನ್ನು ನೀವು ಆತ್ಮನಲ್ಲಿಯೂ ಅಂಗೀಕರಿಸಿದ್ದರಿಂದ) ವ್ಯಭಿಚಾರ ಬರಬೇಕಾಗುತ್ತದೆ. ಆದ್ದರಿಂದ ದೃಶ್ಯತ್ವ ಎಂದರೆ ದೃಗ್‌ಜನ್ಯಫಲಾಶ್ರಯತ್ವ ಎಂದೇ ಹೇಳಬೇಕು.

ಆಗಲಿ, ಹಾಗೆಯೇ ಹೇಳೋಣ ಎಂದರೆ ಅದು ಸಮಂಜಸವಲ್ಲ. ಏಕೆಂದರೆ - ದೃಗ್‌ಜನ್ಯಫಲಾಶ್ರಯತ್ವ ಎನ್ನುವಲ್ಲಿ ದೃಗ್‌ಜನ್ಯವಾದ ಫಲ ಎಂದರೆ ಜ್ಞಾತತಾ ಎಂದು ಹೇಳಿ ದೃಗ್‌ಜನ್ಯಜ್ಞಾತತಾರೂಪಫಲಾಶ್ರಯತ್ವ ಎಂದು ಹೇಳಬೇಕು. ಆದರೆ -

## ಜ್ಞಾನವ್ಯತಿರಿಕ್ತಜ್ಞಾತತಾಯಾಂ ಪ್ರಮಾಣಾಭಾವಾತ್

ಇತ್ಯಾದಿಯಾಗಿ ಪ್ರಮಾಣಲಕ್ಷಣ ಮೊದಲಾದ ಗ್ರಂಥಗಳಲ್ಲಿ ಜ್ಞಾನವಿಷಯತ್ವದಿಂದ ಭಿನ್ನವಾದ ಜ್ಞಾತತಾವಿಷಯದಲ್ಲಿ ಪ್ರಮಾಣವಿಲ್ಲ ಎಂಬುದಾಗಿ ಜ್ಞಾತತಾವನ್ನು ನಿರಾಕರಿಸಿದ್ದರಿಂದ, ಪಕ್ಷವಾದ ವಿಯದಾದಿಪ್ರಪಂಚದಲ್ಲಿ ದೃಗ್‌ಜನ್ಯಜ್ಞಾತತಾರೂಪ- ಫಲಾಶ್ರಯತ್ವರೂಪವಾದ ದೃಶ್ಯತ್ವಹೇತುವು ಬಾರದ ಕಾರಣ ನಿಮ್ಮ ಅನುಮಾನಕ್ಕೆ ಅಸಿದ್ಧಿದೋಷ ಬರುತ್ತದೆ.

ಈ ರೀತಿಯಾಗಿ ದೃಗ್‌ಜನ್ಯಜ್ಞಾತತಾಲಕ್ಷಣಫಲಾಶ್ರಯತ್ವಂ ದೃಶ್ಯತ್ವಂ ಎಂಬ ಪಕ್ಷದಲ್ಲಿ ನಮ್ಮ ಮತಾನುಸಾರವಾಗಿ

''**ದೃಶ್ಯತ್ವಾಭಾವಾತ್ ಅಸಿದ್ಧೋ ಹೇತುಃ**''

ಎಂಬ ಮೂಲವನ್ನು ಸಂಪೂರ್ಣಾಸಿದ್ಧಿಪರವಾಗಿ ವ್ಯಾಖ್ಯಾನ ಮಾಡಿ, ಪ್ರಕೃತ ಯಾವ ವಾದಿಗಳು ಜ್ಞಾತತಾವನ್ನು ಅಂಗೀಕರಿಸುತ್ತಾರೆಯೋ ಅವರ ಪ್ರಕಾರವಾಗಿಯೂ ಹೇತು ಭಾಗಾಸಿದ್ಧವಾಗುತ್ತದೆ ಎಂಬುದಾಗಿ ಮೂಲವನ್ನು ವ್ಯಾಖ್ಯಾನಿಸುತ್ತಾರೆ - '**ಜ್ಞಾತತಾಂಗೀಕಾರೇಽಪಿ**' ಇತ್ಯಾದಿಯಾಗಿ.

ಕೆಲವು ವಾದಿಗಳ ಪ್ರಕಾರ ಜ್ಞಾತತಾವನ್ನು ಅಂಗೀಕಾರ ಮಾಡಿದರೂ ಸಹ, ಆ ಜ್ಞಾತತಾವು ವರ್ತಮಾನಕಾಲೀನವಾದ ಇಂದ್ರಿಯಸನ್ನಿಕೃಷ್ಟವಾದ ವಸ್ತುಗಳಲ್ಲಿ ಇರಬಹುದೇ ಹೊರತು ಅತೀತ-ಅನಾಗತ ವಸ್ತುಗಳಲ್ಲಿ ಮತ್ತು ಅತೀಂದ್ರಿಯವಾದ

ವಸ್ತುಗಳಲ್ಲಿ ಜ್ಞಾತತಾ ಇರುವುದಿಲ್ಲ. ಹಾಗಾಗಿ ಅತೀತ-ಅನಾಗತ ಅತೀಂದ್ರಿಯ ವಸ್ತುರೂಪವಾದ ಪಕ್ಷೈಕದೇಶದಲ್ಲಿ ದೃಗ್‌ಜನ್ಯಜ್ಞಾತತಾಲಕ್ಷಣಫಲಾಶ್ರಯತ್ವ ರೂಪವಾದ ದೃಶ್ಯತ್ವ ಹೇತುವು ಬಾರದ ಕಾರಣ ಭಾಗಾಸಿದ್ಧಿ ಬರುತ್ತದೆ.

ಇಲ್ಲಿ 'ದೃಶ್ಯತ್ವಾಭಾವಾತ್ ಅಸಿದ್ಧೋ ಹೇತುಃ' ಎನ್ನುವಲ್ಲಿ ಯೋಗವಿಭಾಗ ಮಾಡಿಕೊಳ್ಳಬೇಕು. ಅಂದರೆ - ಯೋಗವೆಂದರೆ ವಾಕ್ಯ. ಯೋಗವಿಭಾಗ ಎಂದರೆ ವಾಕ್ಯಭೇದ. 'ದೃಶ್ಯತ್ವಾಭಾವಾತ್' ಎನ್ನುವುದು ಒಂದು ವಾಕ್ಯ. 'ಅಸಿದ್ಧೋ ಹೇತುಃ' ಎನ್ನುವುದು ಮತ್ತೊಂದು ವಾಕ್ಯ. ಹೀಗೆ ಯೋಗವಿಭಾಗ ಮಾಡಿಕೊಳ್ಳುವುದರಿಂದ 'ಅಸಿದ್ಧೋ ಹೇತುಃ' ಎಂಬ ವಿಭಕ್ತವಾದ ವಾಕ್ಯದಿಂದ ಆಶ್ರಯಾಸಿದ್ಧಿಯನ್ನೂ ಸಂಗ್ರಹಿಸಿದಂತಾಗುತ್ತದೆ.

ಹಿಂದೆ ''ಸಾಧ್ಯಧರ್ಮವನ್ನು ಕುರಿತು ಆಶ್ರಯ ಯಾವುದೂ ಇಲ್ಲವಾದ್ದರಿಂದ ಆಶ್ರಯಾಸಿದ್ಧಿ ಬರುತ್ತದೆ'' ಎಂಬುದಾಗಿ ಪ್ರತಿಜ್ಞಾದೋಷವಾಗಿ ಆಶ್ರಯಾಸಿದ್ಧಿಯನ್ನು ಹೇಳಲಾಯಿತು. ಈಗ ಅಸದಾಶ್ರಯಕತ್ವವನ್ನು ಹೇತುದೋಷವಾಗಿ ಹೇಳುತ್ತಿದ್ದಾರೆ. ಅದು ಹೇಗೆಂದರೆ - ಜಗತ್ತನ್ನು ಸದ್ವಿಲಕ್ಷಣ ಎಂಬುದಾಗಿ ಅಂಗೀಕರಿಸಿದ್ದರಿಂದ ಜಗತ್ತಿಗೆ ಅಸತ್ವವೇ ಪ್ರಾಪ್ತವಾಗುವುದರಿಂದ ದೃಶ್ಯತ್ವಹೇತುವಿಗೆ ಆಶ್ರಯವೇ ಇಲ್ಲದಂತಾಗುವ ಕಾರಣ ಆಶ್ರಯಾಸಿದ್ಧಿ ಬರುತ್ತದೆ ಎಂದು ಭಾವ.

ಇಲ್ಲಿ 'ದೃಶ್ಯತ್ವಾಭಾವಾತ್ ಅಸಿದ್ಧೋ ಹೇತುಃ' ಎಂಬ ಮೂಲವಾಕ್ಯದಿಂದ

**'ಹೇತುಃ ಅಸಿದ್ಧಃ ದೃಶ್ಯತ್ವಾಭಾವಾತ್ ।'**

ಎಂಬುದಾಗಿ ಅನುಮಾನ ಮಾಡಿದಂತಾಗುತ್ತದೆ. ಆದರೆ ದೃಶ್ಯತ್ವಾಭಾವವೇ[1] ಅಸಿದ್ಧತ್ವ. ದೃಶ್ಯತ್ವಾಭಾವದಿಂದ ಭಿನ್ನವಾದ ಅಸಿದ್ಧತ್ವ ಎನ್ನುವುದು ಇಲ್ಲ. ಹಾಗಾಗಿ ಹೇತುಸಾಧ್ಯಗಳು ಒಂದೇ ಆಗಿರುವುದರಿಂದ ಸಾಧ್ಯಾವಿಶಿಷ್ಟತಾ ಬರುತ್ತದೆ. ಅರ್ಥಾತ್ ದೃಶ್ಯತ್ವಾಭಾವ-ಅಸಿದ್ಧತ್ವಗಳಲ್ಲಿ (ಅಭೇದ ಬರುವ ಕಾರಣ) ಹೇತು-ಹೇತುಮದ್ಭಾವವು ಹೇಗೆ ಉಪಪನ್ನವಾಗುತ್ತದೆ ?

---

1 ಸಿದ್ಧವಾಗಿದೆ ಎಂದರೆ ಜ್ಞಾನವಿಷಯವಾಗಿದೆ (ದೃಶ್ಯವಾಗಿದೆ) ಎಂದರ್ಥ. ಸಿದ್ಧವಾಗಿಲ್ಲ ಎಂದರೆ ದೃಶ್ಯವಾಗಿಲ್ಲ ಎಂದರ್ಥ. ಹೀಗಾಗಿ ಅಸಿದ್ಧತ್ವ-ದೃಶ್ಯತ್ವಾಭಾವ ಎರಡೂ ಒಂದೇ ಎಂದು ಭಾವ.

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ - ''ಶಬ್ದಃ ನಿತ್ಯಃ ಚಾಕ್ಷುಷತ್ವಾತ್'' ಇತ್ಯಾದಿಸ್ಥಳಗಳಲ್ಲಿ ಚಾಕ್ಷುಷತ್ವಾದಿಗಳಲ್ಲಿ ಅಸಿದ್ಧತ್ವ ಇದ್ದರೂ ದೃಶ್ಯತ್ವಾಭಾವ ಇಲ್ಲ (ಚಾಕ್ಷುಷತ್ವವು ಪಕ್ಷವಾದ ಶಬ್ದದಲ್ಲಿ ಇಲ್ಲದ ಕಾರಣ ಅಸಿದ್ಧವಾದರೂ, ದೃಶ್ಯವೇ-ಜ್ಞಾನವಿಷಯವೇ ಆಗಿರುವುದರಿಂದ ಅದೃಶ್ಯವಾಗಿಲ್ಲ). ಆದ್ದರಿಂದ ದೃಶ್ಯತ್ವಾಭಾವ-ಅಸಿದ್ಧತ್ವಗಳು ಎರಡೂ ಒಂದೇ ಅಲ್ಲ. ಕಿಂತು ವೃಕ್ಷತ್ವ-ಶಿಂಶುಪಾತ್ವಗಳಲ್ಲಿ ಇರುವಂತೆ ಅವುಗಳಲ್ಲಿ ಸಾಮಾನ್ಯ-ವಿಶೇಷಭಾವ ಇದೆ. ಅಂದರೆ-ಯಾವ ರೀತಿಯಾಗಿ

**ಅಯಂ, ವೃಕ್ಷಃ , ಶಿಂಶುಪಾತ್ವಾತ್ ।**

ಎನ್ನುವಲ್ಲಿ ಶಿಂಶುಪಾತ್ವವಿಶೇಷವು ವೃಕ್ಷತ್ವಸಾಮಾನ್ಯಕ್ಕೆ ಹೇತುವಾಗಿದೆಯೋ ಆದರಂತೆ ದೃಶ್ಯತ್ವಾಭಾವರೂಪವಿಶೇಷವು ಅಸಿದ್ಧತ್ವಸಾಮಾನ್ಯಕ್ಕೆ ಹೇತುವಾಗಿದೆ. ಆದ್ದರಿಂದ ಸಾಧ್ಯಾವಿಶಿಷ್ಟತಾ ಬರುವುದಿಲ್ಲ ಎಂದು ಅಭಿಪ್ರಾಯ.

ಅಥವಾ 'ಹೇತುಃ, ಅಸಿದ್ಧ ಇತಿ ವ್ಯವಹರ್ತವ್ಯಃ, ದೃಶ್ಯತ್ವಾಭಾವಾತ್ ।' ಎಂಬುದಾಗಿ ವ್ಯವಹಾರವನ್ನು ಸಾಧ್ಯ ಮಾಡಬಹುದು. ಹಾಗಾದರೂ ಸಾಧ್ಯಾವಿಶಿಷ್ಟತಾ ಬರುವುದಿಲ್ಲ.

ಇದೇ ರೀತಿಯಾಗಿ ಮುಂದೆ

**''ಸಪಕ್ಷಾಭಾವಾತ್ ವಿರುದ್ಧಃ''**

ಇತ್ಯಾದಿ ವಾಕ್ಯಗಳಲ್ಲಿಯೂ ಸಹ ಸಾಮಾನ್ಯ-ವಿಶೇಷಭಾವವನ್ನು ಅಂಗೀಕರಿಸಿ ಅಥವಾ ವ್ಯವಹಾರವನ್ನು ಸಾಧ್ಯವನ್ನಾಗಿ ಮಾಡಿ ಹೇತು-ಹೇತುಮದ್ಭಾವವನ್ನು ಸಮರ್ಥನೆ ಮಾಡಿಕೊಳ್ಳಬೇಕು.

**ಟೀಕಾ :- ವ್ಯಾಪ್ತಿಭಂಗಭೇದಾಃ ವಿರುದ್ಧಾನೈಕಾಂತಿಕಾನಧ್ಯವಸಿತಾಃ । ತತ್ರ ವಿರುದ್ಧೋ ವಿಪರೀತನಿಶ್ಚಯಂ ಕರೋತಿ । ಅನೈಕಾಂತಿಕಃ ಸಂದೇಹ-ಮುತ್ಪಾದಯತಿ । ಅನಧ್ಯವಸಿತಸ್ತು ಜ್ಞಾನಮೇವ ನ ಜನಯತಿ । ತದೇವಂ ದುಷ್ಟತ್ವಕ್ರಮಾನುರೋಧೇನ ವ್ಯಾಪ್ತ್ಯಭಾವಮುದ್ಭಾವಯಿಷ್ಯನ್ ವಿರುದ್ಧಂ ತಾವದಾಹ -**

**ಮೂಲ :- ಅನಿರ್ವಚನೀಯಾಸಿದ್ಧೇರೇವ ಸಪಕ್ಷಾಭಾವಾದ್ವಿರುದ್ಧಃ।**

**ಹೇತುರಿತಿ ಸರ್ವತ್ರಾನುವರ್ತತೇ । ನನು ಸಾಧ್ಯವಿಪರೀತವ್ಯಾಪ್ತೋ ಹೇತುರ್ವಿರುದ್ಧ ಉಚ್ಯತೇ । ನ ತು ಸಪಕ್ಷಶೂನ್ಯಃ । ತಥಾ ಸತಿ ಕೇವಲವ್ಯತಿರೇಕಿಣೋ ಹೇತೋರನಧ್ಯವಸಿತವಿಶೇಷಸ್ಯಾಪಿ ವಿರುದ್ಧತ್ವಪ್ರಾಪ್ತೇಃ । ತತ್ಕಥಮುಕ್ತಂ 'ಸಪಕ್ಷಾಭಾವಾದ್ವಿರುದ್ಧಃ' ಇತಿ ? ಕಥಂ ಚ ಅನಿರ್ವಚನೀಯಾ-ಸಿದ್ಧೇಃ ಸಪಕ್ಷಾಭಾವಃ ? ನ ಹ್ಯನಿರ್ವಚನೀಯತಾ ಮಿಥ್ಯಾತ್ವಂ ಇತಿ ಪರೇಣೋಕ್ತಮಿತಿ ।**

**ಮೈವಮ್ । ಏವಂ ಹೀದಂ ವಿಜ್ಞಾಯತೇ । ಯಾವಂತೋ ಹಿ ಮಿಥ್ಯಾತ್ವ-ವಿಕಲ್ಪಾಸ್ತೇ ಸರ್ವೇ ನಾಸತ್ತ್ವಾನಿರ್ವಚನೀಯತ್ವಾಭ್ಯಾಂ ಬಹಿರ್ಭೂತಾ ಇತ್ಯುಪಪಾದಿತಮ್ । ತತ್ರಾಸತ್ತ್ವಮಪಸಿದ್ಧಾಂತಾದಿಭಯಾನ್ನ ಪರೇಣಾಂಗೀ-ಕೃತಮಿತಿ ವಾಚನಿಕವಿನ್ಯಾಸಭೇದೇನಾಪ್ಯನಿರ್ವಚನೀಯತ್ವಮೇವ ಪರಸ್ಯಾಭಿ-ಪ್ರಾಯವ್ಯಾಪ್ತಮ್ । ತತೋಽನಿರ್ವಚನೀಯೇನೈವ ಸಪಕ್ಷೇಣ ಭಾವ್ಯಮ್ । ತಥಾ ಚ ಯಥಾ ಅನಿರ್ವಚನೀಯಾಸಿದ್ಧೇರಪ್ರಸಿದ್ಧವಿಶೇಷಣತ್ವಾದ್ಯುಕ್ತಮ್, ಏವಂ ತತ ಏವ ಸಪಕ್ಷಾಭಾವಾದ್ವಿಯದಾದಿವ್ಯತಿರಿಕ್ತಂ ಸರ್ವಂ ವಿಪಕ್ಷ ಇತಿ ಶುಕ್ತಿರಜತಾದೌ ವಿಪಕ್ಷೇ ವರ್ತಮಾನತ್ವಾತ್ ಸಾಧ್ಯವಿಪರೀತವ್ಯಾಪ್ತ್ಯಾ ವಿರುದ್ಧೋ ಹೇತುರಿತಿ ।**

**ಅನುವಾದ :-** ವಿರುದ್ಧ-ಅನೈಕಾಂತಿಕ-ಅನಧ್ಯವಸಿತ ಇವು ವ್ಯಾಪ್ತಿಭಂಗ-ಪ್ರಭೇದಗಳು. ಅಂದರೆ -

1) ಸಾಧ್ಯಸಂಬಂಧಾಭಾವೇ ಸತಿ ತದಭಾವೇನೈವ ಸಂಬಂಧವತ್ತ್ವಂ ವಿರುದ್ಧತ್ವಂ । ಸಾಧ್ಯದ ಜೊತೆಗೆ ಸಂಬಂಧ ಇಲ್ಲದೇ ಸಾಧ್ಯಾಭಾವದ ಜೊತೆಗೇ ಸಂಬಂಧ ಉಳ್ಳದ್ದಾಗಿದ್ದರೆ ಅಂತಹ ಹೇತು ವಿರುದ್ಧ ಎನಿಸಿಕೊಳ್ಳುತ್ತದೆ.

2) ಸಾಧ್ಯ ತದಭಾವ ಉಭಯಸಂಬಂಧವತ್ತ್ವಂ ಅನೈಕಾಂತಿಕತ್ವಮ್ । ಸಾಧ್ಯದ ಜೊತೆಗೂ ಸಂಬಂಧ ಉಳ್ಳದ್ದಾಗಿ, ಸಾಧ್ಯಾಭಾವದ ಜೊತೆಗೂ ಸಂಬಂಧ ಉಳ್ಳ ಹೇತು ಅನೈಕಾಂತಿಕ ಎನಿಸಿಕೊಳ್ಳುತ್ತದೆ.

3) ಸಾಧ್ಯ-ತದಭಾವ ಉಭಯಸಂಬಂಧಾಭಾವವತ್ವಂ ಅನಧ್ಯವಸಿತತ್ವಂ । ಸಾಧ್ಯದ ಜೊತೆಗೂ ಸಂಬಂಧ ಇಲ್ಲದೇ, ಸಾಧ್ಯಾಭಾವದ ಜೊತೆಗೂ ಸಂಬಂಧ ಇಲ್ಲದ ಹೇತು ಅನಧ್ಯವಸಿತ ಎನಿಸಿಕೊಳ್ಳುತ್ತದೆ.

ಇವುಗಳಲ್ಲಿ ವಿರುದ್ಧವಾದ ಹೇತುವು ಸಾಧ್ಯಾಭಾವದ ಜೊತೆಗೆ ಮಾತ್ರವೇ ಸಂಬಂಧ ಉಳ್ಳದ್ದಾದ್ದರಿಂದ ವಿಪರೀತನಿಶ್ಚಯವನ್ನು ಉಂಟುಮಾಡುತ್ತದೆ. (ಪಕ್ಷದಲ್ಲಿ ಸಾಧ್ಯಾಭಾವವಿದೆ ಎಂದೇ ನಿಶ್ಚಯಿಸುತ್ತದೆ.) ಇನ್ನು ಅನೈಕಾಂತಿಕವು ಸಾಧ್ಯ-ಸಾಧ್ಯಾಭಾವ ಎರಡರ ಜೊತೆಗೂ ಸಂಬಂಧ ಉಳ್ಳದ್ದಾದ್ದರಿಂದ ಸಂದೇಹವನ್ನು ಉಂಟುಮಾಡುತ್ತದೆ. (ಪಕ್ಷದಲ್ಲಿ ಸಾಧ್ಯವಿದೆಯೋ ? ಸಾಧ್ಯಾಭಾವವಿದೆಯೋ ? ಎಂದು ಸಂದೇಹ ತರಿಸುತ್ತದೆ.) ಇನ್ನು ಅನಧ್ಯವಸಿತವು ಸಾಧ್ಯ-ಸಾಧ್ಯಾಭಾವ ಎರಡರ ಜೊತೆಗೂ ಸಂಬಂಧ ಉಳ್ಳದ್ದಾಗಿಲ್ಲವಾದ್ದರಿಂದ ಅದು ಜ್ಞಾನವನ್ನೇ ಹುಟ್ಟಿಸುವುದಿಲ್ಲ.

ಈ ರೀತಿಯಾಗಿ ನೋಡುವಾಗ ವಿಪರೀತನಿಶ್ಚಯ-ಸಂಶಯ-ಜ್ಞಾನಾಜನನ ಇವುಗಳಲ್ಲಿ ಜ್ಞಾನಾಜನನವು ದುಷ್ಟ, ಸಂಶಯವು ದುಷ್ಟತರ (ಹೆಚ್ಚು ದುಷ್ಟ), ವಿಪರೀತನಿಶ್ಚಯವು ದುಷ್ಟತಮವಾಗಿದೆ (ಅತಿ ಹೆಚ್ಚು ದುಷ್ಟವಾಗಿದೆ) ಎಂಬುದಾಗಿ ಕ್ರಮ. ಈ ವಿಧವಾದ ದುಷ್ಟತ್ವಕ್ರಮಕ್ಕೆ ಅನುಸಾರವಾಗಿ, ಮಾಯಾವಾದಿಗಳ ಮಿಥ್ಯಾತ್ವಾನುಮಾನಕ್ಕೆ ವ್ಯಾಪ್ತ್ಯಭಾವವನ್ನು ತೋರಿಸಲು ಹೊರಟ ಆಚಾರ್ಯರು ಮೊದಲಿಗೆ ದುಷ್ಟತಮ ಎನಿಸಿದ ವಿರುದ್ಧತ್ವ ದೋಷವನ್ನು ಹೇಳುತ್ತಾರೆ -

## ಮೂಲ :- ಅನಿರ್ವಚನೀಯಾಸಿದ್ಧೇರೇವ ಸಪಕ್ಷಾಭಾವಾದ್ವಿರುದ್ಧಃ ।

**ಮೂಲಾರ್ಥ :-** ಅನಿರ್ವಚನೀಯವಾದ ವಸ್ತು ಅಸಿದ್ಧವಾದ್ದರಿಂದಲೇನೇ ಸಪಕ್ಷ ಯಾವುದೂ ಇಲ್ಲವಾದ್ದರಿಂದ, ದೃಶ್ಯತ್ವಹೇತುವು ವಿರುದ್ಧವಾಗಿದೆ.

'ಅನಿರ್ವಚನೀಯಾಸಿದ್ಧೇರೇವ ಸಪಕ್ಷಾಭಾವಾದ್ವಿರುದ್ಧಃ' ಎಂಬ ಇಲ್ಲಿನ ವಾಕ್ಯದಲ್ಲಿ ಹಾಗೂ 'ಆತ್ಮನೋಽಪಿ ದೃಶ್ಯತ್ವಾದನೈಕಾಂತಿಕಃ' 'ಜಗತೋಽಭಾವೇಽ-ನುಮಾನಸ್ಯಾಪ್ಯಭಾವ ಇತಿ ತರ್ಕಬಾಧಿತತ್ವೇನ ಅನಧ್ಯವಸಿತಃ' ಎಂಬ ಮುಂದಿನ ವಾಕ್ಯಗಳಲ್ಲಿ ಎಲ್ಲೆಡೆ 'ಹೇತುಃ' ಎಂಬ ಪದವನ್ನು ಅನುವರ್ತನ ಮಾಡಿಕೊಳ್ಳಬೇಕು.

ಹೌದು, 'ಸಾಧ್ಯವಿಪರೀತವ್ಯಾಪ್ತೋ ಹೇತುರ್ವಿರುದ್ಧಃ' ಎಂಬುದಾಗಿ ಹೇಳುವಂತೆ ಸಾಧ್ಯಾಭಾವದಿಂದ ವ್ಯಾಪ್ತವಾದ ಹೇತುವಿಗೆ ವಿರುದ್ಧ ಎಂದು ಕರೆಯುತ್ತಾರೆ. ಹೊರತು

ಸಪಕ್ಷಶೂನ್ಯವಾದ ಹೇತುವಿಗೆ ವಿರುದ್ಧ ಎಂದು ಕರೆಯುವುದಿಲ್ಲ. ಹಾಗೆ ಸಪಕ್ಷಶೂನ್ಯವಾದ ಹೇತುವನ್ನು ವಿರುದ್ಧ ಎನ್ನುವುದಾದರೆ, ಕೇವಲವ್ಯತಿರೇಕಿ ಅನುಮಾನದಲ್ಲಿ ಸಪಕ್ಷ [1] ಇರುವುದಿಲ್ಲವಾದ್ದರಿಂದ ಕೇವಲವ್ಯತಿರೇಕಿಯಾದಂತಹ

**'ಜೀವಚ್ಛರೀರಂ ಸಾತ್ಮಕಂ ಪ್ರಾಣಾದಿಮತ್ತ್ವಾತ್'**

ಇತ್ಯಾದಿ ಹೇತುಗಳಿಗೂ ಸಹ ವಿರುದ್ಧತ್ವ ಬರಬೇಕಾಗುತ್ತದೆ.

ಮತ್ತು 'ಅವಿದ್ಯಮಾನಸಪಕ್ಷವಿಪಕ್ಷೋ ಹೇತುಃ ಅನಧ್ಯವಸಿತಃ' ಸಪಕ್ಷ-ವಿಪಕ್ಷಗಳಿಂದ ರಹಿತವಾದ ಹೇತುವಿಗೆ ಅನಧ್ಯವಸಿತ ಎನ್ನುತ್ತಾರೆ. ಉದಾ - 'ಸರ್ವಂ ಅನಿತ್ಯಂ ಸತ್ತ್ವಾತ್' ಎನ್ನುವಲ್ಲಿ ಎಲ್ಲವೂ ಪಕ್ಷವೇ ಆಗಿರುವುದರಿಂದ ಪಕ್ಷದಿಂದ ಭಿನ್ನವಾದ ಸಪಕ್ಷ-ವಿಪಕ್ಷಗಳು ಯಾವುದೂ ಇಲ್ಲವಾದ್ದರಿಂದ ಇದು ಅನಧ್ಯವಸಿತ. ಒಂದುವೇಳೆ ಸಪಕ್ಷಶೂನ್ಯವಾದ ಹೇತುವನ್ನು ವಿರುದ್ಧ ಎನ್ನುವುದಾದರೆ, ಈ ಅನಧ್ಯವಸಿತ ವಿಶೇಷಾನುಮಾನಕ್ಕೂ ವಿರುದ್ಧತ್ವ ಬರಬೇಕಾಗುತ್ತದೆ.

ಅಂದಮೇಲೆ ಸಪಕ್ಷಶೂನ್ಯವಾದ ಹೇತು ವಿರುದ್ಧ ಅಲ್ಲ ಎಂದಮೇಲೆ 'ಸಪಕ್ಷಾಭಾವಾತ್ ವಿರುದ್ಧಃ' ಎಂಬುದಾಗಿ ಆಚಾರ್ಯರು ಹೇಗೆ ಹೇಳಿದರು ?

ಜೊತೆಗೆ, ಮಿಥ್ಯಾಭೂತವಾದ ವಸ್ತು ಯಾವುದೂ ಇಲ್ಲವಾದ್ದರಿಂದ ಸಪಕ್ಷ ಯಾವುದೂ ಇಲ್ಲ ಎಂದು ಹೇಳಬೇಕಿತ್ತು. ಆದರೆ ಅನಿರ್ವಚನೀಯವಾದ ವಸ್ತು ಇಲ್ಲವಾದ್ದರಿಂದ ಸಪಕ್ಷ ಇಲ್ಲ ಎಂಬುದಾಗಿ ಹೇಗೆ ಹೇಳಿದರು ? ಮಿಥ್ಯಾತ್ವ ಎಂದರೆ ಅನಿರ್ವಚನೀಯತ್ವ ಎಂದು ಪರರು ಹೇಳಿಲ್ಲವಲ್ಲ ?

ಈ ರೀತಿಯಾಗಿ ಮಧ್ಯಸ್ಥರು ಶಂಕೆ ಮಾಡಿದರೆ, ಅದು ಸರಿಯಲ್ಲ. ಏಕೆಂದರೆ ಮಿಥ್ಯಾತ್ವ ಎಂದರೆ ಏನು ? ಎಂಬುದಾಗಿ ವಿಕಲ್ಪ ಮಾಡಿದಾಗ, ಮಿಥ್ಯಾತ್ವವಿಷಯದಲ್ಲಿ ಎಷ್ಟೆಷ್ಟು ವಿಕಲ್ಪಗಳಿವೆಯೋ (ಪಕ್ಷಗಳಿವೆಯೋ) ಆ ಎಲ್ಲ ವಿಕಲ್ಪ(ಪಕ್ಷ)ಗಳೂ ಅಸತ್ತ್ವ ಅನಿರ್ವಚನೀಯತ್ವಗಳಿಂದ ಭಿನ್ನವಾಗಿಲ್ಲ (ಅಸತ್ವ-ಅನಿರ್ವಚನೀಯತ್ವಗಳಲ್ಲಿಯೇ

---

1 ಪಕ್ಷವಾದ ಜೀವಚ್ಛರೀರವನ್ನು ಬಿಟ್ಟು ಉಳಿದ ಎಲ್ಲಿಯೂ ಸಾತ್ಮಕತ್ವ ಸಾಧ್ಯ ಇಲ್ಲದ ಕಾರಣ ಈ ಅನುಮಾನದಲ್ಲಿ ಸಪಕ್ಷ ಯಾವುದೂ ಇಲ್ಲ. ಅಂತೆಯೇ ''ಯತ್ರ ಸಾತ್ಮಕತ್ವಾಭಾವಃ ತತ್ರ ಪ್ರಾಣಾದಿಮತ್ತ್ವಾಭಾವಃ'' ಎಂಬುದಾಗಿ ಕೇವಲ ವ್ಯತಿರೇಕವ್ಯಾಪ್ತಿಯನ್ನು ಮಾತ್ರ ಹೇಳುವುದರಿಂದ ಇದು ಕೇವಲವ್ಯತಿರೇಕೀ ಆಗಿದೆ.

ಅಂತರ್ಭೂತವಾಗುತ್ತವೆ) ಎಂದು ಉಪಪಾದನೆ ಮಾಡಲಾಗಿದೆ. ಹಾಗಾಗಿ ಉಳಿದದ್ದು ಅಸತ್ವ-ಅನಿರ್ವಚನೀಯತ್ವ ಎಂಬ ಎರಡು ಪಕ್ಷಗಳು ಮಾತ್ರ. ಈ ಎರಡರಲ್ಲಿ ಅಸತ್ವವನ್ನು ಅಂಗೀಕರಿಸಿದರೆ ಅಪಸಿದ್ಧಾಂತ ಬರುವ ಕಾರಣ ಅಸತ್ವಪಕ್ಷವನ್ನು ಪರರು ಅಂಗೀಕರಿಸುವುದಿಲ್ಲ. ಅಂತತೋ ಗತ್ವಾ ಮಿಥ್ಯಾತ್ವ ಎಂದರೆ ಅನಿರ್ವಚನೀಯತ್ವ ಎಂದೇ ಪರರು ಅಭಿಪ್ರಾಯಪಡಬೇಕು. ಹಾಗಾಗಿ ಅನಿರ್ವಚನೀಯವಾದ ವಸ್ತುವೇ ಸಪಕ್ಷವಾಗಬೇಕು.

ಅಂದಮೇಲೆ ಅನಿರ್ವಚನೀಯವಾದ ವಸ್ತುವೇ ಅಸಿದ್ಧವಾದ್ದರಿಂದ ಅಪ್ರಸಿದ್ಧವಿಶೇಷಣತ್ವಾದಿಗಳು ಬರುತ್ತವೆ ಎಂಬುದಾಗಿ ಹೇಗೆ ಹೇಳಿದೆವೋ ಅದೇ ರೀತಿಯಾಗಿ ಅನಿರ್ವಚನೀಯವಾದ ವಸ್ತು ಅಸಿದ್ಧವಾದ್ದರಿಂದಲೇನೇ ಸಪಕ್ಷ ಯಾವುದೂ ಇಲ್ಲವಾದ್ದರಿಂದ, ವಿಯದಾದಿಗಳಿಂದ ಭಿನ್ನವಾದ ಎಲ್ಲವೂ ವಿಪಕ್ಷವೇ ಆಗಿ, ಶುಕ್ತಿರಜತಾದಿರೂಪವಿಪಕ್ಷದಲ್ಲಿ ದೃಶ್ಯತ್ವಹೇತು ಇರುವ ಕಾರಣ, ಸಾಧ್ಯದ ಜೊತೆ ಸಂಬಂಧವಿರದೇ ಕೇವಲ ಸಾಧ್ಯಾಭಾವದ ಜೊತೆಗೇ ಸಂಬಂಧ ಇರುವುದರಿಂದ ದೃಶ್ಯತ್ವಹೇತುವು ವಿರುದ್ಧವಾಯಿತು ಎಂದು ಅಭಿಪ್ರಾಯ.

**ಟೀಕಾ :- ನನು 'ರಜತಂ ದೃಷ್ಟಮಿತಿ ಭ್ರಮಮಾತ್ರತ್ವಾತ್' ಇತಿ ಶುಕ್ತಿರಜತಾದೇಃ ದೃಶ್ಯತ್ವಾಭಾವಂ ವಕ್ಷ್ಯತಿ । ಅತಃ ಕಥಂ ನ ವಿರೋಧಃ ? ಸತ್ಯಂ, ಯಥಾ ನ ವಿರೋಧಸ್ತಥಾ ತತ್ರೈವ ವಕ್ಷ್ಯಾಮಃ ।**

**ಅಥ ವಾ 'ಆತ್ಮನೋಽಪಿ ದೃಶ್ಯತ್ವಾತ್' ಇತಿ ವಕ್ಷ್ಯಮಾಣಮತ್ರಾಪಿ ಸಿಂಹಾವಲೋಕನನ್ಯಾಯೇನ ಸಂಬಧ್ಯತೇ । ತತ್ರ 'ಸಪಕ್ಷಾಭಾವಾತ್' ಇತ್ಯನೇನ ಸಾಧ್ಯಸಂಬಂಧಾಭಾವ ಉಪಪಾದಿತಃ । 'ಆತ್ಮನೋಽಪಿ ದೃಶ್ಯತ್ವಾತ್' ಇತ್ಯನೇನ ತದಭಾವಸಂಬಂಧಃ ಸಮರ್ಥಿತಃ । ತಥಾ ಚ ವಿಪರೀತವ್ಯಾಪ್ತಿರೇವ ಸಿದ್ಧಾ ಭವತೀತಿ ।**

**ಅನುವಾದ:-** ಮುಂದೆ, 'ರಜತಂ ದೃಷ್ಟಮಿತಿ ಭ್ರಮಮಾತ್ರತ್ವಾತ್' ಎಂಬುದಾಗಿ ಶುಕ್ತಿರಜತಾದಿಗಳಿಗೆ ದೃಶ್ಯತ್ವವಿಲ್ಲ ಎಂದು ಹೇಳುವವರಿದ್ದಾರೆ. ಅಂದಮೇಲೆ ಈಗ ''ವಿಪಕ್ಷವಾದ ಶುಕ್ತಿರಜತಾದಿಗಳಲ್ಲಿ ಇರುವುದರಿಂದ ದೃಶ್ಯತ್ವಹೇತುವು ವಿರುದ್ಧ'' ಎಂಬುದಾಗಿ ವಿರೋಧ ದೋಷವನ್ನು ಹೇಳುವುದಾದರೆ ಮುಂದಿನ ಮಾತಿನ ವಿರೋಧ ಬರುವುದಿಲ್ಲವೇ ?

ಸತ್ಯವೇ. ಶುಕ್ತಿರಜತಾದಿಗಳಿಗೆ ದೃಶ್ಯತ್ವವಿಲ್ಲ ಎಂದು ಮುಂದೆ ಹೇಳುವುದು ಸರಿಯೇ. ಆದರೆ ಹಾಗೆ ಹೇಳಿದರೂ ವಿರೋಧ ಹೇಗೆ ಬರುವುದಿಲ್ಲ ಎನ್ನುವುದನ್ನು ಅಲ್ಲಿಯೇ ತೋರಿಸುತ್ತೇವೆ.

**ಅದರ ಅಭಿಪ್ರಾಯ :-** ಶುಕ್ತಿರಜತಾದಿಗಳಿಗೆ ದೃಶ್ಯತ್ವವಿಲ್ಲ ಎಂದರೆ, ದೃಗ್ವಿಷಯತ್ವ ರೂಪವಾದ ದೃಶ್ಯತ್ವ ಇಲ್ಲ ಎಂದು ಅರ್ಥ. ಪ್ರಕೃತದಲ್ಲಿ ಶುಕ್ತಿರಜತಾದಿಗಳಿಗೆ ದೃಗ್ವಿಷಯತ್ವರೂಪವಾದ ದೃಶ್ಯತ್ವ ಇಲ್ಲದೇ ಹೋದರೂ ಸಹ ದೃಗ್ವ್ಯಾವರ್ತಕತ್ವ-ರೂಪವಾದ ದೃಶ್ಯತ್ವವನ್ನು ಅಂಗೀಕರಿಸುವುದರಿಂದ (ವಿಪಕ್ಷವಾದ ಶುಕ್ತಿರಜತಾದಿಗಳಲ್ಲಿ ದೃಗ್ವ್ಯಾವರ್ತಕತ್ವರೂಪದೃಶ್ಯತ್ವ ಇರುವುದರಿಂದ ದೃಶ್ಯತ್ವ ಹೇತುವು ವಿರುದ್ಧ ಎಂಬುದಾಗಿ ಇಲ್ಲಿ ಅಭಿಪ್ರಾಯ ಇರುವುದರಿಂದ) ನಮಗೆ ಮುಂದಿನ ಮಾತಿನ ವಿರೋಧ ಬರುವುದಿಲ್ಲ ಎಂದು ಭಾವ.

ಅಥವಾ 'ಆತ್ಮನೋಽಪಿ ದೃಶ್ಯತ್ವಾತ್' ಎಂಬುದಾಗಿ ಮುಂದೆ ಹೇಳುವುದನ್ನು ಸಿಂಹಾವಲೋಕನನ್ಯಾಯದಿಂದ ಇಲ್ಲಿಯೂ ತಂದುಕೊಳ್ಳಬೇಕು. ಹಾಗಾದರೆ - 'ಅನಿರ್ವಚನೀಯಾಸಿದ್ಧೇರೇವ ಸಪಕ್ಷಾಭಾವಾತ್' ಎಂಬ ವಾಕ್ಯದಿಂದ ದೃಶ್ಯತ್ವ ಹೇತುವಿಗೆ ಸಾಧ್ಯದ ಜೊತೆ ಸಂಬಂಧವಿಲ್ಲ ಎಂದು ಉಪಪಾದನೆ ಮಾಡುತ್ತಿದ್ದಾರೆ. 'ಆತ್ಮನೋಽಪಿ ದೃಶ್ಯತ್ವಾತ್' ಎಂಬ ವಾಕ್ಯದಿಂದ ದೃಶ್ಯತ್ವ ಹೇತುವಿಗೆ ಸಾಧ್ಯಾಭಾವದ ಜೊತೆ ಸಂಬಂಧವಿದೆ ಎಂದು ಸಮರ್ಥನೆ ಮಾಡುತ್ತಾರೆ. ಹಾಗಾಗಿ ಈ ಎರಡೂ ವಾಕ್ಯಗಳಿಂದ ''ದೃಶ್ಯತ್ವಹೇತುವಿಗೆ ಸಾಧ್ಯದ ಜೊತೆ ಸಂಬಂಧವಿಲ್ಲ. ಕಿಂತು ಸಾಧ್ಯಾಭಾವದ ಜೊತೆಗೇ ಸಂಬಂಧವಿದೆ'' ಎಂಬುದಾಗಿ ಹೇಳುತ್ತಿರುವುದರಿಂದ ದೃಶ್ಯತ್ವಹೇತುವಿಗೆ ವಿಪರೀತವ್ಯಾಪ್ತಿಯೇ ಸಿದ್ಧಿಸುತ್ತದೆ. ಆದ್ದರಿಂದ ವಿಪರೀತವ್ಯಾಪ್ತಿ ಮೂಲಕವಾಗಿಯೇ ವಿರುದ್ಧತ್ವವನ್ನು ಹೇಳುತ್ತಿರುವ ಕಾರಣ ಯಾವ ಅನುಪಪತ್ತಿಯೂ ಇಲ್ಲ.

**ಮೂಲ :- ಆತ್ಮನೋಽಪಿ ದೃಶ್ಯತ್ವಾದನೈಕಾಂತಿಕಃ ।**

**ಟೀಕಾ :- ನ ಕೇವಲಂ ಸಪಕ್ಷಸ್ಯ ಶುಕ್ತಿರಜತಾದೇಃ । ಕಿಂ ತು ? ವಿಪಕ್ಷಸ್ಯಾತ್ಮನೋಽಪೀತಿ ಯೋಜನಾ ।**

**ನನ್ವೇತದ್ವಿರುದ್ಧಮ್ ? ಪ್ರಾಗನಿರ್ವಚನೀಯಾಭಾವಾತ್ ಸಪಕ್ಷಾಭಾವ ಉಕ್ತಃ । ಇದಾನೀಂ ತು ತದ್ಭಾವಃ । ನ ಹಿ ತದಭಾವೇ ತತ್ರ ದೃಶ್ಯತ್ವಸ್ಯ ವೃತ್ತಿಃ**

**ಸಂಭವತೀತಿ । ಸತ್ಯಮ್, ಅಭ್ಯುಪಗಮವಾದೋಽಯಮಿತ್ಯದೋಷಃ । ವಾದ್ಯನೈಕಾಂತಿಕೋ ವಾ । ಆತ್ಮನಿ ದೃಶ್ಯತ್ವಸ್ಯ ತಂ ಪ್ರತಿ ಸಮರ್ಥನಾತ್ ।**

**ಅಥ ವಾ ಮಿಥ್ಯಾತ್ವಂ ನಾಮ ಅಸತ್ವಂ ವಾ ಅನಿರ್ವಚನೀಯತ್ವಂ ವಾ ಸದ್ವಿವಿಕ್ತತ್ವಂ ವಾ ವಕ್ತವ್ಯಮ್ । ತತ್ರ ಅನಿರ್ವಚನೀಯತ್ವೇ ಸಾಧ್ಯೇ ವಿರುದ್ಧತ್ವಮುಕ್ತ್ವಾ ಅಸತ್ವ-ಸದ್ವಿವಿಕ್ತತ್ವಯೋರನೈಕಾಂತಿಕತ್ವಮನೇನೋಚ್ಯತೇ । ಏತೇನ ಲಕ್ಷಣವಿರೋಧೋಽಪಿ ಪರಿಹೃತಃ ।**

**ಅನುವಾದ :-**

**ಮೂಲ :- ಆತ್ಮನೋಽಪಿ ದೃಶ್ಯತ್ವಾದನೈಕಾಂತಿಕಃ ।**

**ಮೂಲಾರ್ಥ** - ಸಪಕ್ಷವಾದ ಶುಕ್ತಿರಜತಾದಿಗಳಲ್ಲಿ ಇರುವಂತೆ ವಿಪಕ್ಷನಾದ ಆತ್ಮನಲ್ಲಿಯೂ ದೃಶ್ಯತ್ವ ಇರುವುದರಿಂದ ದೃಶ್ಯತ್ವ ಹೇತುವು ವ್ಯಭಿಚಾರೀ ಆಗಿದೆ.

ಕೇವಲ ಸಪಕ್ಷವಾದ ಶುಕ್ತಿರಜತಾದಿಗಳಿಗೆ ಮಾತ್ರ ದೃಶ್ಯತ್ವವಿದೆ ಎಂದಲ್ಲ. ಕಿಂತು ? ವಿಪಕ್ಷನಾದ ಆತ್ಮನಿಗೂ ದೃಶ್ಯತ್ವ ಇದೆ ಎಂಬುದಾಗಿ ಯೋಜನೆ (ಅಪಿಶಬ್ದದ ಅನ್ವಯ) ಮಾಡಿಕೊಳ್ಳಬೇಕು.

(ಶುಕ್ತಿರಜತಾದಿಗಳಲ್ಲಿ ಮಿಥ್ಯಾತ್ವವು ನಿಶ್ಚಿತವಾದ್ದರಿಂದ ಅವು ಸಪಕ್ಷವಾಗಿವೆ. ಆತ್ಮನಲ್ಲಿ ಮಿಥ್ಯಾತ್ವ ಇಲ್ಲದ ಕಾರಣ ಅವನು ವಿಪಕ್ಷನಾಗಿದ್ದಾನೆ. ದೃಶ್ಯತ್ವ ಹೇತುವು ಸಪಕ್ಷವಾದ ಶುಕ್ತಿರಜತಾದಿಗಳಲ್ಲಿ ಇರುವಂತೆ ವಿಪಕ್ಷನಾದ ಆತ್ಮನಲ್ಲಿಯೂ ಇರುವುದರಿಂದ (ಆತ್ಮನೂ ಜ್ಞಾನವಿಷಯನಾಗುವುದರಿಂದ) ಅನುಮಾನಕ್ಕೆ ವ್ಯಭಿಚಾರದೋಷ ಬರುತ್ತದೆ ಎಂದು ಭಾವ.)

ಹೌದು, ಇದು ವಿರುದ್ಧವಾಗುತ್ತದೆಯಲ್ಲವೇ ? ಹಿಂದೆ 'ಅನಿರ್ವಚನೀಯಾ-ಸಿದ್ಧೇರೇವ ಸಪಕ್ಷಾಭಾವಾತ್' ಎಂಬುದಾಗಿ ಅನಿರ್ವಚನೀಯವಸ್ತು ಇಲ್ಲದ ಕಾರಣ ಸಪಕ್ಷವೇ ಇಲ್ಲ ಎಂದು ಹೇಳಿದಿರಿ. ಈಗ ಸಪಕ್ಷ ಇದೆ ಎಂದು ಹೇಳುತ್ತಿದ್ದೀರಿ. ಒಂದುವೇಳೆ ಸಪಕ್ಷವೇ ಇಲ್ಲದಿದ್ದರೆ ಅದರಲ್ಲಿ ದೃಶ್ಯತ್ವಹೇತು (ಇದೆ ಎಂದು ಹೇಳಲು) ಇರಲು ಸಾಧ್ಯವಿಲ್ಲ. ಅಂದಮೇಲೆ ಸಪಕ್ಷವೇ ಇಲ್ಲ ಎಂದು ಹಿಂದೆ ಹೇಳಿ, ಈಗ ಸಪಕ್ಷ ಇದೆ ಎನ್ನುವುದಾದರೆ ವಿರುದ್ಧವಾಗುವುದಿಲ್ಲವೇ ?

ಸತ್ಯವೇ. ಆದರೂ ವಾಸ್ತವವಾಗಿ ಸಪಕ್ಷ (ಅನಿರ್ವಚನೀಯವಾದ ವಸ್ತು) ಇಲ್ಲದಿದ್ದರೂ ಸಹ ಒಂದುಪಕ್ಷ ಸಪಕ್ಷವಿದೆ ಎಂಬುದಾಗಿ ಅಂಗೀಕರಿಸಿ,

ಸತ್ಯವೇ. ಶುಕ್ತಿರಜತಾದಿಗಳಿಗೆ ದೃಶ್ಯತ್ವವಿಲ್ಲ ಎಂದು ಮುಂದೆ ಹೇಳುವುದು ಸರಿಯೇ. ಆದರೆ ಹಾಗೆ ಹೇಳಿದರೂ ವಿರೋಧ ಹೇಗೆ ಬರುವುದಿಲ್ಲ ಎನ್ನುವುದನ್ನು ಅಲ್ಲಿಯೇ ತೋರಿಸುತ್ತೇವೆ.

**ಅದರ ಅಭಿಪ್ರಾಯ :-** ಶುಕ್ತಿರಜತಾದಿಗಳಿಗೆ ದೃಶ್ಯತ್ವವಿಲ್ಲ ಎಂದರೆ, ದೃಗ್ವಿಷಯತ್ವ ರೂಪವಾದ ದೃಶ್ಯತ್ವ ಇಲ್ಲ ಎಂದು ಅರ್ಥ. ಪ್ರಕೃತದಲ್ಲಿ ಶುಕ್ತಿರಜತಾದಿಗಳಿಗೆ ದೃಗ್ವಿಷಯತ್ವರೂಪವಾದ ದೃಶ್ಯತ್ವ ಇಲ್ಲದೇ ಹೋದರೂ ಸಹ ದೃಗ್‌ವ್ಯಾವರ್ತಕತ್ವ-ರೂಪವಾದ ದೃಶ್ಯತ್ವವನ್ನು ಅಂಗೀಕರಿಸುವುದರಿಂದ (ವಿಪಕ್ಷವಾದ ಶುಕ್ತಿರಜತಾದಿಗಳಲ್ಲಿ ದೃಗ್‌ವ್ಯಾವರ್ತಕತ್ವರೂಪದೃಶ್ಯತ್ವ ಇರುವುದರಿಂದ ದೃಶ್ಯತ್ವ ಹೇತುವು ವಿರುದ್ಧ ಎಂಬುದಾಗಿ ಇಲ್ಲಿ ಅಭಿಪ್ರಾಯ ಇರುವುದರಿಂದ) ನಮಗೆ ಮುಂದಿನ ಮಾತಿನ ವಿರೋಧ ಬರುವುದಿಲ್ಲ ಎಂದು ಭಾವ.

ಅಥವಾ 'ಆತ್ಮನೋऽಪಿ ದೃಶ್ಯತ್ವಾತ್' ಎಂಬುದಾಗಿ ಮುಂದೆ ಹೇಳುವುದನ್ನು ಸಿಂಹಾವಲೋಕನನ್ಯಾಯದಿಂದ ಇಲ್ಲಿಯೂ ತಂದುಕೊಳ್ಳಬೇಕು. ಹಾಗಾದರೆ - 'ಅನಿರ್ವಚನೀಯಾಸಿದ್ಧೇರೇವ ಸಪಕ್ಷಾಭಾವಾತ್' ಎಂಬ ವಾಕ್ಯದಿಂದ ದೃಶ್ಯತ್ವ ಹೇತುವಿಗೆ ಸಾಧ್ಯದ ಜೊತೆ ಸಂಬಂಧವಿಲ್ಲ ಎಂದು ಉಪಪಾದನೆ ಮಾಡುತ್ತಿದ್ದಾರೆ. 'ಆತ್ಮನೋऽಪಿ ದೃಶ್ಯತ್ವಾತ್' ಎಂಬ ವಾಕ್ಯದಿಂದ ದೃಶ್ಯತ್ವ ಹೇತುವಿಗೆ ಸಾಧ್ಯಾಭಾವದ ಜೊತೆ ಸಂಬಂಧವಿದೆ ಎಂದು ಸಮರ್ಥನೆ ಮಾಡುತ್ತಾರೆ. ಹಾಗಾಗಿ ಈ ಎರಡೂ ವಾಕ್ಯಗಳಿಂದ ''ದೃಶ್ಯತ್ವಹೇತುವಿಗೆ ಸಾಧ್ಯದ ಜೊತೆ ಸಂಬಂಧವಿಲ್ಲ. ಕಿಂತು ಸಾಧ್ಯಾಭಾವದ ಜೊತೆಗೇ ಸಂಬಂಧವಿದೆ'' ಎಂಬುದಾಗಿ ಹೇಳುತ್ತಿರುವುದರಿಂದ ದೃಶ್ಯತ್ವಹೇತುವಿಗೆ ವಿಪರೀತವ್ಯಾಪ್ತಿಯೇ ಸಿದ್ಧಿಸುತ್ತದೆ. ಆದ್ದರಿಂದ ವಿಪರೀತವ್ಯಾಪ್ತಿ ಮೂಲಕವಾಗಿಯೇ ವಿರುದ್ಧತ್ವವನ್ನು ಹೇಳುತ್ತಿರುವ ಕಾರಣ ಯಾವ ಅನುಪಪತ್ತಿಯೂ ಇಲ್ಲ.

**ಮೂಲ :- ಆತ್ಮನೋऽಪಿ ದೃಶ್ಯತ್ವಾದನೈಕಾಂತಿಕಃ ।**

**ಟೀಕಾ :- ನ ಕೇವಲಂ ಸಪಕ್ಷಸ್ಯ ಶುಕ್ತಿರಜತಾದೇಃ । ಕಿಂ ತು ? ವಿಪಕ್ಷಸ್ಯಾತ್ಮನೋऽಪೀತಿ ಯೋಜನಾ ।**

**ನನ್ವೇತದ್ವಿರುದ್ಧಮ್ ? ಪ್ರಾಗನಿರ್ವಚನೀಯಾಭಾವಾತ್ ಸಪಕ್ಷಾಭಾವ ಉಕ್ತಃ । ಇದಾನೀಂ ತು ತದ್ಭಾವಃ । ನ ಹಿ ತದಭಾವೇ ತತ್ರ ದೃಶ್ಯತ್ವಸ್ಯ ವೃತ್ತಿಃ**




**ಸಂಭವತೀತಿ । ಸತ್ಯಮ್, ಅಭ್ಯುಪಗಮವಾದೋಽಯಮಿತ್ಯದೋಷಃ । ವಾದ್ಯನೈಕಾಂತಿಕೋ ವಾ । ಆತ್ಮನಿ ದೃಶ್ಯತ್ವಸ್ಯ ತಂ ಪ್ರತಿ ಸಮರ್ಥನಾತ್ ।**

**ಅಥ ವಾ ಮಿಥ್ಯಾತ್ವಂ ನಾಮ ಅಸತ್ವಂ ವಾ ಅನಿರ್ವಚನೀಯತ್ವಂ ವಾ ಸದ್ವಿವಿಕ್ತತ್ವಂ ವಾ ವಕ್ತವ್ಯಮ್ । ತತ್ರ ಅನಿರ್ವಚನೀಯತ್ವೇ ಸಾಧ್ಯೇ ವಿರುದ್ಧತ್ವಮುಕ್ತ್ವಾ ಅಸತ್ವ-ಸದ್ವಿವಿಕ್ತತ್ವಯೋರನೈಕಾಂತಿಕತ್ವಮನೇನೋಚ್ಯತೇ । ಏತೇನ ಲಕ್ಷಣವಿರೋಧೋಽಪಿ ಪರಿಹೃತಃ ।**

**ಅನುವಾದ :-**

**ಮೂಲ :- ಆತ್ಮನೋಽಪಿ ದೃಶ್ಯತ್ವಾದನೈಕಾಂತಿಕಃ ।**

**ಮೂಲಾರ್ಥ** - ಸಪಕ್ಷವಾದ ಶುಕ್ತಿರಜತಾದಿಗಳಲ್ಲಿ ಇರುವಂತೆ ವಿಪಕ್ಷನಾದ ಆತ್ಮನಲ್ಲಿಯೂ ದೃಶ್ಯತ್ವ ಇರುವುದರಿಂದ ದೃಶ್ಯತ್ವ ಹೇತುವು ವ್ಯಭಿಚಾರೀ ಆಗಿದೆ.

ಕೇವಲ ಸಪಕ್ಷವಾದ ಶುಕ್ತಿರಜತಾದಿಗಳಿಗೆ ಮಾತ್ರ ದೃಶ್ಯತ್ವವಿದೆ ಎಂದಲ್ಲ. ಕಿಂತು ? ವಿಪಕ್ಷನಾದ ಆತ್ಮನಿಗೂ ದೃಶ್ಯತ್ವ ಇದೆ ಎಂಬುದಾಗಿ ಯೋಜನೆ (ಅಪಿಶಬ್ದದ ಅನ್ವಯ) ಮಾಡಿಕೊಳ್ಳಬೇಕು.

(ಶುಕ್ತಿರಜತಾದಿಗಳಲ್ಲಿ ಮಿಥ್ಯಾತ್ವವು ನಿಶ್ಚಿತವಾದ್ದರಿಂದ ಅವು ಸಪಕ್ಷವಾಗಿವೆ. ಆತ್ಮನಲ್ಲಿ ಮಿಥ್ಯಾತ್ವ ಇಲ್ಲದ ಕಾರಣ ಅವನು ವಿಪಕ್ಷನಾಗಿದ್ದಾನೆ. ದೃಶ್ಯತ್ವ ಹೇತುವು ಸಪಕ್ಷವಾದ ಶುಕ್ತಿರಜತಾದಿಗಳಲ್ಲಿ ಇರುವಂತೆ ವಿಪಕ್ಷನಾದ ಆತ್ಮನಲ್ಲಿಯೂ ಇರುವುದರಿಂದ (ಆತ್ಮನೂ ಜ್ಞಾನವಿಷಯನಾಗುವುದರಿಂದ) ಅನುಮಾನಕ್ಕೆ ವ್ಯಭಿಚಾರದೋಷ ಬರುತ್ತದೆ ಎಂದು ಭಾವ.)

ಹೌದು, ಇದು ವಿರುದ್ಧವಾಗುತ್ತದೆಯಲ್ಲವೇ ? ಹಿಂದೆ 'ಅನಿರ್ವಚನೀಯಾ-ಸಿದ್ಧೇರೇವ ಸಪಕ್ಷಾಭಾವಾತ್' ಎಂಬುದಾಗಿ ಅನಿರ್ವಚನೀಯವಸ್ತು ಇಲ್ಲದ ಕಾರಣ ಸಪಕ್ಷವೇ ಇಲ್ಲ ಎಂದು ಹೇಳಿದಿರಿ. ಈಗ ಸಪಕ್ಷ ಇದೆ ಎಂದು ಹೇಳುತ್ತಿದ್ದೀರಿ. ಒಂದುವೇಳೆ ಸಪಕ್ಷವೇ ಇಲ್ಲದಿದ್ದರೆ ಅದರಲ್ಲಿ ದೃಶ್ಯತ್ವಹೇತು (ಇದೆ ಎಂದು ಹೇಳಲು) ಇರಲು ಸಾಧ್ಯವಿಲ್ಲ. ಅಂದಮೇಲೆ ಸಪಕ್ಷವೇ ಇಲ್ಲ ಎಂದು ಹಿಂದೆ ಹೇಳಿ, ಈಗ ಸಪಕ್ಷ ಇದೆ ಎನ್ನುವುದಾದರೆ ವಿರುದ್ಧವಾಗುವುದಿಲ್ಲವೇ ?

ಸತ್ಯವೇ. ಆದರೂ ವಾಸ್ತವವಾಗಿ ಸಪಕ್ಷ (ಅನಿರ್ವಚನೀಯವಾದ ವಸ್ತು) ಇಲ್ಲದಿದ್ದರೂ ಸಹ ಒಂದುಪಕ್ಷ ಸಪಕ್ಷವಿದೆ ಎಂಬುದಾಗಿ ಅಂಗೀಕರಿಸಿ,

**'ಆತ್ಮನೋಽಪಿ ದೃಶ್ಯತ್ವಾತ್'**

ಎಂದು ಹೇಳಿದ್ದು. ಅಥವಾ, ವಾಸ್ತವಿಕವಾಗಿ ಸಪಕ್ಷ ಇಲ್ಲದಿದ್ದರೂ ಸಹ ಪರರು ಶುಕ್ತಿರಜತಾದಿಗಳನ್ನು ಸಪಕ್ಷ ಎಂದು ಅಂಗೀಕರಿಸಿದ್ದರಿಂದ, ಪರರ ಪ್ರಕಾರ ಕೇವಲ ಸಪಕ್ಷವಾದ ಶುಕ್ತಿರಜತಾದಿಗಳಲ್ಲಿ ಮಾತ್ರ ದೃಶ್ಯತ್ವ ಇಲ್ಲ, ಕಿಂತು ವಿಪಕ್ಷನಾದ ಆತ್ಮನಲ್ಲಿಯೂ ದೃಶ್ಯತ್ವ ಇದೆ. ಆದ್ದರಿಂದ ಅನೈಕಾಂತಿಕ ಎಂಬುದಾಗಿ ಪರರೀತ್ಯಾ ವ್ಯಭಿಚಾರ ಹೇಳಿದ್ದು.

ಪರರು ವಿಪಕ್ಷನಾದ ಆತ್ಮನಿಗೆ ದೃಶ್ಯತ್ವವನ್ನೇ ಅಂಗೀಕರಿಸಿಲ್ಲವಾದ್ದರಿಂದ ಪರರೀತ್ಯಾ ವ್ಯಭಿಚಾರ ಬರುವುದೇ ಇಲ್ಲವಲ್ಲ ? ಎಂಬ ಶಂಕೆ ಬೇಡ. ಕಾರಣ - ''ಒಂದುವೇಳೆ ಆತ್ಮನಿಗೆ ದೃಶ್ಯತ್ವವನ್ನು ಅಂಗೀಕರಿಸದೇ ಹೋದರೆ ಆಗ ಬ್ರಹ್ಮಜ್ಞಾನವನ್ನು ಮಾಡಿಸುವುದಕ್ಕಾಗಿ ಹೊರಟಂತಹ ವೇದಾಂತಗಳು ವ್ಯರ್ಥವಾಗಬೇಕಾಗುತ್ತದೆ'' ಎಂಬುದಾಗಿ ವೇದಾಂತವೈಯರ್ಥ್ಯಾಪತ್ತಿ ಮೊದಲಾದ ಯುಕ್ತಿಗಳಿಂದ ಪರರನ್ನು ಕುರಿತು ಆತ್ಮನಿಗೆ ದೃಶ್ಯತ್ವವನ್ನು ಸಮರ್ಥಿಸುತ್ತೇವೆ. ಆದ್ದರಿಂದ ಪರರೀತ್ಯಾ ವ್ಯಭಿಚಾರ ಬಂದೇ ಬರುತ್ತದೆ.

ಅಥವಾ ಮಿಥ್ಯಾತ್ವ ಎಂದರೆ ಅಸತ್ವ ಎಂದಾಗಲೀ, ಅನಿರ್ವಚನೀಯತ್ವ ಎಂದಾಗಲೀ, ಸದ್ವಿವಿಕ್ತತ್ವ ಎಂದಾಗಲೀ ಹೇಳಬೇಕು. ಮಿಥ್ಯಾತ್ವ ಎಂದರೆ ಅನಿರ್ವಚನೀಯತ್ವ ಎಂಬ ಪಕ್ಷದಲ್ಲಿ (ಅನಿರ್ವಚನೀಯತ್ವವನ್ನು ಸಾಧ್ಯ ಮಾಡಿದಾಗ)

**'ಅನಿರ್ವಚನೀಯಾಸಿದ್ಧೇರೇವ ಸಪಕ್ಷಾಭಾವಾತ್ ವಿರುದ್ಧಃ'**

(ಅನಿರ್ವಚನೀಯವಾದ ವಸ್ತುವೇ ಅಪ್ರಸಿದ್ಧವಾದ್ದರಿಂದ ಸಪಕ್ಷ ಇಲ್ಲದ ಕಾರಣ ದೃಶ್ಯತ್ವಹೇತು ವಿರುದ್ಧವಾಗುತ್ತದೆ) ಎಂಬುದಾಗಿ ವಿರುದ್ಧತ್ವವನ್ನು ಹೇಳಿ, ಇನ್ನು ಮಿಥ್ಯಾತ್ವ ಎಂದರೆ ಅಸತ್ವ - ಸದ್ವಿವಿಕ್ತತ್ವ ಎಂಬ ಪಕ್ಷಗಳಲ್ಲಿ ಅನೈಕಾಂತಿಕತ್ವವನ್ನು ಹೇಳುತ್ತಿದ್ದಾರೆ -

**'ಆತ್ಮನೋಽಪಿ ದೃಶ್ಯತ್ವಾದನೈಕಾಂತಿಕಃ'**

ಎಂಬ ಈ ವಾಕ್ಯದಿಂದ. ಅಂದರೆ - ಅಸತ್ವವನ್ನು ಸಾಧ್ಯ ಮಾಡಿದಾಗ, ಅಸತ್ ಆದ ಶುಕ್ತಿರಜತಾದಿಗಳು ಸಪಕ್ಷವಾಗಿ ಸತ್ ಆದ ಆತ್ಮನು ವಿಪಕ್ಷನಾಗುತ್ತಾನೆ. ದೃಶ್ಯತ್ವಹೇತು ಕೇವಲ ಸಪಕ್ಷವಾದ ಶುಕ್ತಿರಜತಾದಿಗಳಲ್ಲಿ ಮಾತ್ರ ಇರದೇ ವಿಪಕ್ಷನಾದ




ಆತ್ಮನಲ್ಲಿಯೂ ಇರುವುದರಿಂದ ವ್ಯಭಿಚಾರ ಬರುತ್ತದೆ ಎಂದು ಭಾವ. (ಹೀಗೆಯೇ ಸದ್ವಿವಿಕ್ತತ್ವ ಪಕ್ಷದಲ್ಲಿಯೂ ವ್ಯಭಿಚಾರ ತಿಳಿಯಬೇಕು.)

ಈ ರೀತಿಯಾಗಿ ಪಕ್ಷಭೇದದಿಂದ ವ್ಯವಸ್ಥೆ ಮಾಡುವುದರಿಂದ ಲಕ್ಷಣವಿರೋಧವನ್ನೂ ಪರಿಹರಿಸಿಕೊಂಡಂತಾಗುತ್ತದೆ.

**ಅದರ ಅಭಿಪ್ರಾಯ ಇಷ್ಟು:-** 'ಹೌದು, ಒಂದೇ ದೃಶ್ಯತ್ವ ಹೇತುವಿಗೆ ವಿರುದ್ಧತ್ವ - ಅನೈಕಾಂತಿಕತ್ವಗಳು ವಿರುದ್ಧವಾಗುತ್ತವೆ. ಹೇಗೆಂದರೆ -

'ಸಾಧ್ಯಸಂಬಂಧಾಭಾವೇ ಸತಿ ತದಭಾವೇನೈವ ಸಂಬಂಧವಾನ್ ವಿರುದ್ಧಃ' (ಸಾಧ್ಯದ ಜೊತೆ ಸಂಬಂಧ ಇಲ್ಲದೇ ಕೇವಲ ಸಾಧ್ಯಾಭಾವದೊಂದಿಗೆ ಸಂಬಂಧ ಉಳ್ಳ ಹೇತು ವಿರುದ್ಧ ಎನಿಸುತ್ತದೆ.)

**'ಸಾಧ್ಯತದಭಾವ ಉಭಯಸಂಬಂಧವಾನ್ ಅನೈಕಾಂತಿಕಃ'**

(ಸಾಧ್ಯದ ಜೊತೆಗೂ ಸಂಬಂಧ ಉಳ್ಳದ್ದಾಗಿ, ಸಾಧ್ಯಾಭಾವದ ಜೊತೆಗೂ ಸಂಬಂಧ ಉಳ್ಳ ಹೇತು ಅನೈಕಾಂತಿಕ ಎನಿಸುತ್ತದೆ.)

ಹೀಗೆ ವಿರುದ್ಧ- ಅನೈಕಾಂತಿಕಗಳ ಲಕ್ಷಣಗಳು ಪರಸ್ಪರ ವಿರುದ್ಧವಾಗಿರುವುದ-ರಿಂದ ಒಂದೇ ದೃಶ್ಯತ್ವ ಹೇತುವಿಗೆ ವಿರುದ್ಧತ್ವ - ಅನೈಕಾಂತಿಕತ್ವ ಎರಡನ್ನೂ ಹೇಗೆ ಹೇಳಲು ಸಾಧ್ಯ ?

ಈ ರೀತಿಯಾದ ಶಂಕೆಗೆ ಅವಕಾಶ ಇಲ್ಲ. ಕಾರಣ - ಅನಿರ್ವಚನೀಯತ್ವ ಅಸತ್ವ ಸದ್ವಿವಿಕ್ತತ್ವ ಎಂಬ ಮೂರುಪಕ್ಷಗಳಲ್ಲಿ ಯಾವಾಗ ಅನಿರ್ವಚನೀಯತ್ವವನ್ನು ಸಾಧ್ಯ ಮಾಡುತ್ತೀರೋ ಆವಾಗ ಸಪಕ್ಷ ಇಲ್ಲದ ಕಾರಣ ವಿರುದ್ಧವಾಗುತ್ತದೆ ದೃಶ್ಯತ್ವ ಹೇತು. ಯಾವಾಗ ಅಸತ್ವ - ಸದ್ವಿವಿಕ್ತತ್ವಗಳನ್ನು ಸಾಧ್ಯ ಮಾಡುತ್ತೀರೋ ಆವಾಗ ಅನೈಕಾಂತಿಕ ಆಗುತ್ತದೆ ದೃಶ್ಯತ್ವ ಹೇತು. ಈ ರೀತಿಯಾಗಿ ಪಕ್ಷಭೇದದಿಂದ ವಿರುದ್ಧತ್ವ ಅನೈಕಾಂತಿಕತ್ವಗಳನ್ನು ವ್ಯವಸ್ಥೆ ಮಾಡುವುದರಿಂದ ಯಾವ (ಲಕ್ಷಣವಿರೋಧವೂ) ಅನುಪಪತ್ತಿಯೂ ಬರುವುದಿಲ್ಲ ಎಂದು ಅಭಿಪ್ರಾಯ.

**ಟೀಕಾ :- ಆಹ, ನಾತ್ಮನೋ ದೃಶ್ಯತ್ವಂ ಯುಕ್ತಮ್ । ತಸ್ಯಾಪರಾಧೀನ-ಪ್ರಕಾಶತ್ವಾತ್ । ತಥಾಹಿ - ಮಮೇದಮನುಕೂಲಂ ಪ್ರತಿಕೂಲಮಿತಿ ವಾ ವಿಜ್ಞಾನಸ್ಯ ಅವಚ್ಛಿನ್ನಪ್ರಕಾಶತ್ವೇನ ಅವಚ್ಛೇದಕಾತ್ಮಪ್ರಕಾಶನಾಂತರೀಯಕತ್ವಾತ್**

**ಅವಶ್ಯಮಾತ್ಮಾ ಪ್ರಕಾಶತ ಇತ್ಯಂಗೀಕಾರ್ಯಮ್ । ತಸ್ಯ ಚ ಮಾನಸವೇದ-ನೀಯತಾಯಾಂ ವೃತ್ತಿವಿರೋಧಾತ್, ಸಂವಿತ್ಕರ್ಮತಾಮಂತರೇಣಾಪರೋಕ್ಷಸ್ಯ ಸಂವಿದಧೀನಪ್ರಕಾಶತಾವಿರೋಧಾತ್ ಪರಿಶೇಷತಃ ಸ್ವಪ್ರಕಾಶತಾಸಿದ್ಧಿರಿತಿ ।**

**ಅನುವಾದ :-** ಆತ್ಮನಿಗೆ ದೃಶ್ಯತ್ವವು (ವೃತ್ತ್ಯಧೀನಪ್ರಕಾಶತ್ವರೂಪವಾದ ವೃತ್ತಿವಿಷಯತ್ವವು) ಕೂಡುವುದಿಲ್ಲ. ಕಾರಣ - ಅವನು ಸ್ವಪ್ರಕಾಶನಾಗಿದ್ದಾನೆ. ಹೇಗೆಂದರೆ - ''ಮಮೇದಂ ಅನುಕೂಲಂ'' ''ಮಮೇದಂ ಪ್ರತಿಕೂಲಂ'' ಎಂಬ ಜ್ಞಾನವು ಅವಚ್ಛಿನ್ನಪ್ರಕಾಶವಾಗಿದೆ. ಅಂದರೆ ಅಹಮರ್ಥವಿಶೇಷಣಕ ಅನುಕೂಲಾದಿವಸ್ತುವಿಶೇಷ್ಯಕವಿಶಿಷ್ಟಜ್ಞಾನವಾಗಿದೆ. ಹಾಗಾಗಿ 'ದಂಡೀ' ಇತ್ಯಾದಿ ವಿಶಿಷ್ಟಜ್ಞಾನವು ದಂಡಾದಿರೂಪವಿಶೇಷಣಜ್ಞಾನಸಾಪೇಕ್ಷವಾಗಿದ್ದು ಕಂಡಿರುವುದರಿಂದ ಪ್ರಕೃತ ''ಮಮೇದಂ ಅನುಕೂಲಂ'' ಎಂಬ ವಿಶಿಷ್ಟಜ್ಞಾನವೂ ಒಂದು ವಿಶಿಷ್ಟಜ್ಞಾನವೇ ಆದ್ದರಿಂದ ವಿಶೇಷಣೀಭೂತ ಆತ್ಮಜ್ಞಾನಸಾಪೇಕ್ಷವಾಗಿದೆ. ಈ ಹಿನ್ನಲೆಯಲ್ಲಿ 'ಆತ್ಮಾ ಪ್ರಕಾಶತೇ' ಆತ್ಮನು ತೋರುತ್ತಾನೆ (ಜ್ಞಾನವಿಷಯನಾಗುತ್ತಾನೆ) ಎಂಬುದಾಗಿ ಅವಶ್ಯವಾಗಿ ಒಪ್ಪಲೇಬೇಕು.

ಈ ರೀತಿಯಾಗಿ ಆತ್ಮನಿಗೆ ಪ್ರಕಾಶಮಾತ್ರವನ್ನು ಒಪ್ಪಿದ ಮೇಲೆ, ಸ್ವಪ್ರಕಾಶತ್ವವನ್ನೂ ಒಪ್ಪಲೇಬೇಕು. ಅದು ಹೇಗೆಂದರೆ - ಒಂದುವೇಳೆ ಆತ್ಮನಿಗೆ ಸ್ವಪ್ರಕಾಶತ್ವವನ್ನು ಒಪ್ಪದೇ ಪರಾಧೀನಪ್ರಕಾಶತ್ವವನ್ನು ಹೇಳುವುದಾದರೆ, ನೈಯಾಯಿಕಮತಾನುಸಾರವಾಗಿ ಆತ್ಮನಿಗೆ ಮಾನಸವೇದ್ಯತ್ವವನ್ನು ಅಂಗೀಕರಿಸುತ್ತೀರೋ ? ಅಥವಾ ಪ್ರಾಭಾಕರಮತಾನುಸಾರವಾಗಿ ಸ್ವಪ್ರಕಾಶ-ಜ್ಞಾನಾಶ್ರಯತಯಾ ಆತ್ಮಪ್ರಕಾಶ ಎಂದು ಹೇಳುತ್ತೀರೋ ?

ನೈಯಾಯಿಕಮತಾನುಸಾರವಾಗಿ ಆತ್ಮನಿಗೆ ಮಾನಸವೇದ್ಯತ್ವವನ್ನು ಅಂಗೀಕರಿಸುವುದಾದರೆ ವೃತ್ತಿವಿರೋಧ ಬರುತ್ತದೆ. ಅಂದರೆ - 'ಕ್ರಿಯಾಶ್ರಯಃ ಕರ್ತಾ' ಕ್ರಿಯೆಗೆ ಆಶ್ರಯನಾದವನು ಕರ್ತಾ ಎನಿಸುತ್ತಾನೆ. 'ಕ್ರಿಯಾವಿಷಯಃ ಕರ್ಮ' ಕ್ರಿಯೆಗೆ ವಿಷಯವಾದದ್ದು ಕರ್ಮ ಎನಿಸುತ್ತದೆ. ಸ್ವನಿಷ್ಠವಾದ ಕ್ರಿಯೆಗೆ ಸ್ವವಿಷಯತ್ವವನ್ನು ಹೇಳಿದರೆ ಕರ್ತೃತ್ವ-ಕರ್ಮತ್ವಗಳನ್ನು ಒಂದೇಕಡೆಗೆ ಹೇಳಿದಂತಾಗುವುದರಿಂದ ವೃತ್ತಿವಿರೋಧ ಬರುತ್ತದೆ. ಪ್ರಕೃತದಲ್ಲಿ ಮನೋಜನ್ಯವಾದ ಜ್ಞಾನವು ಆತ್ಮನಿಷ್ಠವಾಗಿದೆ. ಆತ್ಮನು ಮನೋಜನ್ಯಸ್ವನಿಷ್ಠಜ್ಞಾನವೇದ್ಯನಾಗುವುದಾದರೆ ಜ್ಞಾನರೂಪವಾದ ಕ್ರಿಯೆಗೆ ತಾನೇ ಆಶ್ರಯ, ತಾನೇ ವಿಷಯ ಎಂದಾಗುತ್ತದೆ. ಆದರೆ ಅದು ಯುಕ್ತವಲ್ಲ.

 

''ದೇವದತ್ತಃ ಗ್ರಾಮಂ ಗಚ್ಛತಿ'' ಎನ್ನುವಲ್ಲಿ ಗಮನರೂಪವಾದ ಕ್ರಿಯೆಗೆ ಆಶ್ರಯನಾಗಿರುವ ದೇವದತ್ತನೇ ಗಮನವಿಷಯನಾಗಿಲ್ಲ. ಆದ್ದರಿಂದ ಆತ್ಮನಿಗೆ ಸ್ವನಿಷ್ಠಜ್ಞಾನವಿಷಯತ್ವವನ್ನು ಹೇಳಿದರೆ ವೃತ್ತಿವಿರೋಧ ಬರುವುದರಿಂದ ಆತ್ಮನಿಗೆ ಮಾನಸವೇದ್ಯತ್ವವನ್ನು ಅಂಗೀಕರಿಸಲು ಬರುವುದಿಲ್ಲ.

ಇನ್ನು ಪ್ರಾಭಾಕರಮತಾನುಸಾರವಾಗಿ ಸ್ವಪ್ರಕಾಶಜ್ಞಾನಾಶ್ರಯತಯಾ ಆತ್ಮಪ್ರಕಾಶ ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ :- ಆತ್ಮಾಂಶ-ಸ್ವಾತ್ಮಾಂಶ-ವೇದ್ಯಾಂಶ ಎಂದು ತ್ರಿಪುಟೀಪ್ರತ್ಯಕ್ಷವಾದಿಗಳಾಗಿದ್ದಾರೆ ಪ್ರಾಭಾಕರರು. ಅವರ ಮತದಲ್ಲಿ ''ಘಟಮಹಂ ಜಾನಾಮಿ'' ಎಂಬುದಾಗಿ (ಜ್ಞಾನ ಉಂಟಾಗುವ ಕ್ರಮ)ಜ್ಞಾನಾಕಾರ. ಅದರಲ್ಲಿ 'ಘಟಂ' ಎಂಬುದಾಗಿ ವೇದ್ಯಾಂಶ ತೋರುತ್ತದೆ. 'ಅಹಂ' ಎಂಬುದಾಗಿ ಆತ್ಮಾಂಶ ತೋರುತ್ತದೆ. 'ಜಾನಾಮಿ' ಎಂಬುದಾಗಿ ಸ್ವಾತ್ಮಾಂಶವು ತೋರುತ್ತದೆ. ಇಲ್ಲಿ ಸ್ವಾತ್ಮಾಂಶವಾದ ಜ್ಞಾನ ಏನಿದೆ ಅದು ಸ್ವಪ್ರಕಾಶವಾಗಿದೆ. ಅಂತಹ ಸ್ವಪ್ರಕಾಶವಾದ ಜ್ಞಾನಕ್ಕೆ ಆಶ್ರಯನಾಗಿ ಆತ್ಮನು ತೋರುತ್ತಾನೆ ಎಂಬುದಾಗಿ ಪ್ರಾಭಾಕರರ ಸಿದ್ಧಾಂತ.

ಅದು ಸರಿಯಲ್ಲ. ಏಕೆಂದರೆ,

**ಆತ್ಮಾ, ಸಂವಿದಾಶ್ರಯತಯಾ ನ ಸಂವಿದಧೀನಪ್ರಕಾಶಃ,**
**ಸಂವಿತ್ಕರ್ಮತಾಮಂತರೇಣ ಅಪರೋಕ್ಷತ್ವಾತ್, ಸಂವೇದನವತ್ ।**

**ಅನುಮಾನದ ಅಭಿಪ್ರಾಯ :-** 'ಘಟಮಹಂ ಜಾನಾಮಿ' ಎಂಬ ತ್ರಿಪುಟೀಪ್ರತ್ಯಕ್ಷದಲ್ಲಿ ಸಂವಿತ್ಕರ್ಮತಯಾ (ಜ್ಞಾನದಲ್ಲಿ ಕರ್ಮವಾಗಿ) ವಿಷಯವಾಗುವುದು ಘಟವು ಮಾತ್ರ. ಆತ್ಮನಾಗಲೀ ಜ್ಞಾನವಾಗಲೀ ಸಂವಿತ್ಕರ್ಮತಯಾ ವಿಷಯವಾಗುವುದಿಲ್ಲ. ಸಂವಿತ್ಕರ್ಮತಾ ಇಲ್ಲದೇ ವಿಷಯವಾಗುತ್ತವೆ. ಹಾಗಾದರೆ, ಜ್ಞಾನವು ಯಾವ ರೀತಿಯಾಗಿ ಸಂವಿತ್ಕರ್ಮತಾ ಇಲ್ಲದೇ ಅಪರೋಕ್ಷ(ಜ್ಞಾನವಿಷಯ)ವಾದ್ದರಿಂದ ಅದು ಸಂವಿದಾಶ್ರಯತಯಾ (ಜ್ಞಾನಾಶ್ರಯತಯಾ) ಸಂವಿದಧೀನಪ್ರಕಾಶವಾಗಿಲ್ಲವೋ ಅದೇ ರೀತಿಯಾಗಿ ಆತ್ಮನೂ ಸಂವಿತ್ಕರ್ಮತಾ ಇಲ್ಲದೇ ಅಪರೋಕ್ಷವಾದ್ದರಿಂದ ಅವನೂ ಸಂವಿದಾಶ್ರಯತಯಾ ಸಂವಿದಧೀನಪ್ರಕಾಶನಲ್ಲ.

ಈ ರೀತಿಯಾಗಿ ಅನುಮಾನವು ಸ್ವಪ್ರಕಾಶಜ್ಞಾನಾಶ್ರಯತಯಾ ಆತ್ಮನು ತೋರುವುದಿಲ್ಲ ಎಂದು ಸಾಧಿಸುತ್ತಿರುವುದರಿಂದ, ನೀವು ಸ್ವಪ್ರಕಾಶಜ್ಞಾನಾಶ್ರಯತಯಾ

ಆತ್ಮನು ತೋರುತ್ತಾನೆ ಎನ್ನುವುದಾದರೆ ಈ ಅನುಮಾನದ ವಿರೋಧ ಬರುತ್ತದೆ. ಆದ್ದರಿಂದ ಆತ್ಮನಿಗೆ ಪ್ರಕಾಶತ್ವವನ್ನಂತೂ ಒಪ್ಪಲೇಬೇಕು. ಆದರೆ ಮಾನಸವೇದ್ಯ ಎಂದಾಗಲೀ, ಸ್ವಪ್ರಕಾಶಜ್ಞಾನಾಶ್ರಯತಯಾ ಆತ್ಮಪ್ರಕಾಶ ಎಂದಾಗಲೀ ಹೇಳಲು ಬರುವುದಿಲ್ಲವಾದ್ದರಿಂದ ಪರಿಶೇಷತಃ ಆತ್ಮನಿಗೆ ಸ್ವಪ್ರಕಾಶತ್ವವೇ ಸಿದ್ಧಿಸುತ್ತದೆ.

ಆತ್ಮನಿಗೆ ಸ್ವಪ್ರಕಾಶತ್ವ ಇರುವುದರಿಂದ ವೃತ್ತಿವಿಷಯತ್ವರೂಪ ದೃಶ್ಯತ್ವ ಇಲ್ಲದ ಕಾರಣ ಆತ್ಮನಲ್ಲಿ ವ್ಯಭಿಚಾರ ಬರುವುದಿಲ್ಲ ಎಂದು ಶಂಕೆಯ ಆಶಯ.

**ಟೀಕಾ :- ತತ್ರೇದಂ ವಕ್ತವ್ಯಮ್, ಕಿಮಾತ್ಮನೋ ನಿರುಪಾಧಿಕರೂಪಮಪರಾಧೀನಪ್ರಕಾಶಂ ? ಉತ ಸೋಪಾಧಿಕಮಪಿ ? ಆದ್ಯೇ ಕಿಮನೇನಾನುಕೂಲಪ್ರತಿಕೂಲಸಂಬಂಧಿನಃ ಸೋಪಾಧಿಕಸ್ಯಾಪರಾಧೀನ-ಪ್ರಕಾಶತಾಪ್ರತಿಪಾದನೇನ ? ದ್ವಿತೀಯೇ ತು ಜ್ಞಾಮಾತ್ರಸ್ಯಾತ್ಮನ್ಯವೃತ್ತಿ-ಪ್ರಸಂಗಾತ್ ।**

**ಸರ್ವಪ್ರತ್ಯಯವೇದ್ಯೇ ಚ ಬ್ರಹ್ಮರೂಪೇ ವ್ಯವಸ್ಥಿತೇ । ಇತ್ಯಾದಿಸ್ವವಚನ-ವಿರೋಧಶ್ಚ ಸ್ಯಾತ್ ।**

**ಕಿಂ ಚ 'ಆತ್ಮಾ ನ ಪರಾಧೀನಪ್ರಕಾಶಃ' ಇತಿ ವೃತ್ತಿವಿಷಯೋ ನ ವಾ ? ಆದ್ಯೇ ದೃಶ್ಯತ್ವಾಪತ್ತಿಃ । ಮೂಕೋಽಹಮಿತಿವತ್ ಸ್ವಕ್ರಿಯಾವಿರೋಧಶ್ಚ । ದ್ವಿತೀಯೇ ವ್ಯತಿರೇಕಾಸಿದ್ಧ್ಯಾ ಸಂದಿಗ್ಧಾನೈಕಾಂತಿಕಃ ।**

**ಅನುವಾದ :-** ಈ ರೀತಿಯಾಗಿ ಆತ್ಮನಿಗೆ ಸ್ವಪ್ರಕಾಶತ್ವವನ್ನು ಹೇಳುವ ನೀವು ನಮ್ಮ ವಿಕಲ್ಪಗಳಿಗೆ ಸಮಾಧಾನ ಹೇಳಿರಿ. ಆತ್ಮನ ನಿರುಪಾಧಿಕವಾದ ಸ್ವರೂಪವು (ದೇಹ-ಇಂದ್ರಿಯ-ಅಂತಃಕರಣರೂಪ ಉಪಾಧಿಯಿಂದ ವಿಶಿಷ್ಟವಲ್ಲದ ಸ್ವರೂಪವು) ಸ್ವಪ್ರಕಾಶಎಂದು ಹೇಳುತ್ತೀರೋ ? ಅಥವಾ ನಿರುಪಾಧಿಕಸ್ವರೂಪ - ಸೋಪಾಧಿಕಸ್ವರೂಪ (ದೇಹ-ಇಂದ್ರಿಯ-ಅಂತಃಕರಣರೂಪ ಉಪಾಧಿಯಿಂದ ವಿಶಿಷ್ಟವಾದ ಸ್ವರೂಪ) ಎರಡೂ ಸ್ವಪ್ರಕಾಶ ಎಂದು ಹೇಳುತ್ತೀರೋ ?

ಆತ್ಮನ ನಿರುಪಾಧಿಕವಾದ ಸ್ವರೂಪವು ಸ್ವಪ್ರಕಾಶ ಎಂದು ಹೇಳುವುದಾದರೆ, ಅನುಕೂಲ-ಪ್ರತಿಕೂಲಸಂಬಂಧಿಯಾದ ಚಿದಚಿತ್ಸಂವಲನಾತ್ಮಕ ಅಹಮರ್ಥ-ವಿಶಿಷ್ಟವಾದ ಆತ್ಮನ ಸೋಪಾಧಿಕಸ್ವರೂಪಕ್ಕೆ 'ಮಮೇದಮನುಕೂಲಂ' 'ಮಮೇದಂ ಪ್ರತಿಕೂಲಂ' ಇತ್ಯಾದಿಯಾಗಿ ಸ್ವಪ್ರಕಾಶತ್ವಸಾಧನ ಮಾಡುವುದು ಅಸಂಗತವಾಗುತ್ತದೆ.




ಆತ್ಮನ ನಿರುಪಾಧಿಕಸ್ವರೂಪ ಹಾಗೂ ಸೋಪಾಧಿಕಸ್ವರೂಪ ಎರಡೂ ಸ್ವಪ್ರಕಾಶ ಎಂದು ಹೇಳುವುದಾದರೆ, (ನಿರುಪಾಧಿಕಸ್ವರೂಪದಂತೆ ಸೋಪಾಧಿಕಸ್ವರೂಪವೂ ಸ್ವಪ್ರಕಾಶ = ಯಾವ ವೃತ್ತಿಜ್ಞಾನಕ್ಕೂ ವಿಷಯವಲ್ಲ ಎಂದು ಅಂಗೀಕರಿಸುವುದಾದರೆ) ಆತ್ಮನಿಗೆ ಜ್ಞಾನವಿಷಯತ್ವವನ್ನೇ ನಿಷೇಧಿಸಿದಂತಾಗುತ್ತದೆ. (ಆತ್ಮನು ಯಾವ ಜ್ಞಾನಕ್ಕೂ ವಿಷಯನಾಗುವುದಿಲ್ಲ ಎಂದು ಹೇಳಿದಂತಾಗುತ್ತದೆ.) ಆಗಲಿ, ಆತ್ಮನಿಗೆ ಜ್ಞಾನವಿಷಯತ್ವವನ್ನೇ ನಿಷೇಧಿಸೋಣ, ಏನು ದೋಷ ? ಎಂದರೆ,

**ಸರ್ವಪ್ರತ್ಯಯವೇದ್ಯೇ ಚ ಬ್ರಹ್ಮರೂಪೇ ವ್ಯವಸ್ಥಿತೇ ।**
**ಪ್ರಪಂಚಸ್ಯ ಪ್ರವಿಲಯಃ ಶಬ್ದೇನ ಪ್ರತಿಪಾದ್ಯತೇ ॥**

ಎಂಬುದಾಗಿ ನಿಮ್ಮ ಪೂರ್ವಾಚಾರ್ಯರಾದ ಮಂಡನಮಿಶ್ರರು ಆತ್ಮನಿಗೆ ವೇದ್ಯತ್ವವನ್ನು ಹೇಳಿದ್ದರಿಂದ ಪ್ರಕೃತ ನೀವು ಆತ್ಮನಿಗೆ ವೇದ್ಯತ್ವವನ್ನು ಒಪ್ಪದೇ ಹೋದರೆ (ಜ್ಞಾನವಿಷಯತ್ವವನ್ನು ನಿಷೇಧಿಸುವುದಾದರೆ) ಅಪಸಿದ್ಧಾಂತ ಬರಬೇಕಾಗುತ್ತದೆ.

ಮತ್ತು , ಆತ್ಮನು ''ಆತ್ಮಾ ನ ಪರಾಧೀನಪ್ರಕಾಶಃ'' ಎಂಬ ವೃತ್ತಿಜ್ಞಾನದಲ್ಲಿ ವಿಷಯನಾಗಿದ್ದಾನೆಯೋ ? ಇಲ್ಲವೋ ?

''ಆತ್ಮಾ ನ ಪರಾಧೀನಪ್ರಕಾಶಃ'' ಎಂಬ ವೃತ್ತಿಜ್ಞಾನದಲ್ಲಿ ವಿಷಯನಾಗಿದ್ದಾನೆ ಎಂದರೆ ಹಾಗಾದರೆ ಆತ್ಮನಿಗೆ ದೃಶ್ಯತ್ವವನ್ನು ಒಪ್ಪಿದಂತಾಯಿತು. (ಮಿಥ್ಯಾತ್ವ ಸಾಧ್ಯ ಇಲ್ಲದ ಆತ್ಮನಲ್ಲಿ ದೃಶ್ಯತ್ವ ಬರುವುದರಿಂದ ವ್ಯಭಿಚಾರ ಬರುತ್ತದೆ.) ಹಾಗೂ 'ಮೂಕೋಽಹಂ' ಎನ್ನುವಂತೆ ಸ್ವಕ್ರಿಯಾವಿರೋಧವೂ ಬರುತ್ತದೆ. ಮೂಕ ಎನ್ನುವುದು ವಚನಕ್ರಿಯಾಭಾವವನ್ನು ಹೇಳುತ್ತದೆ. ಪುನಃ ಮೂಕೋಽಹಂ ಎಂಬುದಾಗಿ ವಚನಕ್ರಿಯಾವನ್ನು ಮಾಡುತ್ತಾನೆ. ಹಾಗಾದರೆ ಯಾವ ರೀತಿಯಾಗಿ ಮೂಕೋಽಹಂ ಎಂಬ ವಚನಕ್ರಿಯೆಯಿಂದ ಮೂಕಪದೋಕ್ತವಚನನಿಷೇಧವು ವಿರುದ್ಧವಾಗುತ್ತದೆಯೋ ಅದೇ ರೀತಿಯಾಗಿ 'ಆತ್ಮಾ ನ ಪರಾಧೀನಪ್ರಕಾಶಃ' ಎಂಬ ಆತ್ಮಸಂಬಂಧಿತ್ವೇನ ಪರಾಧೀನಪ್ರಕಾಶತ್ವ ನಿಷೇಧಕ ಆತ್ಮವಿಷಯಜ್ಞಾನಕ್ರಿಯೆಯಿಂದ 'ನ' ಎಂಬ ಪದದಿಂದ ಹೇಳುವ ನಿಷೇಧವು ವಿರುದ್ಧವಾಗುತ್ತದೆ ಎಂದು ಭಾವ. ಆದ್ದರಿಂದ ಆತ್ಮನು ''ಆತ್ಮಾ ನ ಪರಾಧೀನಪ್ರಕಾಶಃ'' ಎಂಬ ವೃತ್ತಿಜ್ಞಾನದಲ್ಲಿ ವಿಷಯನಾಗಿದ್ದಾನೆ ಎಂಬ ಮೊದಲನೇ ಪಕ್ಷ ಸರಿಯಲ್ಲ.

ಇನ್ನು ''ಆತ್ಮಾ ನ ಪರಾಧೀನಪ್ರಕಾಶಃ'' ಎಂಬ ವೃತ್ತಿಜ್ಞಾನದಲ್ಲಿ ಆತ್ಮನು ವಿಷಯನಲ್ಲ ಎಂದು ಹೇಳುವುದಾದರೆ, ವ್ಯತಿರೇಕವ್ಯಾಪ್ತಿಯು ಸಿದ್ಧವಾಗದ ಕಾರಣ ಸಂದಿಗ್ಧಾನೈಕಾಂತಿಕತಾ ಬರುತ್ತದೆ.

**ಅದರ ಅಭಿಪ್ರಾಯ :-** ದೃಶ್ಯತ್ವಾನುಮಾನದಲ್ಲಿ ''ಯತ್ರ ಮಿಥ್ಯಾತ್ವಾಭಾವಃ ತತ್ರ ದೃಶ್ಯತ್ವಾಭಾವಃ'' ಎಂಬ ವ್ಯತಿರೇಕವ್ಯಾಪ್ತಿಯು ಇದೆಯೋ ? ಇಲ್ಲವೋ ?

ವ್ಯತಿರೇಕವ್ಯಾಪ್ತಿ ಇದೆ ಎನ್ನುವುದಾದರೆ, ಅತ್ಯಂತಾಸತ್ ಆದ ಶಶವಿಷಾಣಾದಿಗಳಲ್ಲಿ ಆ ವ್ಯತಿರೇಕವ್ಯಾಪ್ತಿಯನ್ನು ತೋರಿಸಲು ಬರುವುದಿಲ್ಲ. ಕಾರಣ- ಶಶವಿಷಾಣಾದಿಗಳಲ್ಲಿ ಸದ್ವಿವಿಕ್ತತ್ವರೂಪ ಮಿಥ್ಯಾತ್ವವೇ ಇದೆ, ಪರಾಧೀನಪ್ರಕಾಶತ್ವರೂಪ ದೃಶ್ಯತ್ವವೇ ಇದೆ. ಹೊರತು ಮಿಥ್ಯಾತ್ವಾಭಾವ-ದೃಶ್ಯತ್ವಾಭಾವಗಳು ಇಲ್ಲ. ಆದ್ದರಿಂದ ವ್ಯತಿರೇಕವ್ಯಾಪ್ತಿಯನ್ನು ಆತ್ಮನಲ್ಲಿಯೇ ತೋರಿಸಬೇಕು. ಆದರೆ ಆತ್ಮನಲ್ಲಿಯೂ ತೋರಿಸಲು ಬರುವುದಿಲ್ಲ. ಕಾರಣ- ''ಆತ್ಮಾ ನ ಪರಾಧೀನಪ್ರಕಾಶಃ'' ಎಂಬ ದೃಶ್ಯತ್ವಾಭಾವವಿಷಯಕವಾದ ಜ್ಞಾನದಲ್ಲಿ ಆತ್ಮನಿಗೆ ವಿಷಯತ್ವವನ್ನು ಒಪ್ಪದ ಕಾರಣ ಅಧಿಕರಣ(ಆತ್ಮ)ಜ್ಞಾನವೇ ಇಲ್ಲವಾದ್ದರಿಂದ ಆತ್ಮನಲ್ಲಿ ದೃಶ್ಯತ್ವಾಭಾವವನ್ನು ತಿಳಿಯಲು ಶಕ್ಯವಿಲ್ಲ. ಹಾಗಾಗಿ ಆತ್ಮನಲ್ಲಿಯೂ ವ್ಯತಿರೇಕವ್ಯಾಪ್ತಿಯನ್ನು ತೋರಿಸಲು ಬರುವುದಿಲ್ಲ. ಆದ್ದರಿಂದ ವ್ಯತಿರೇಕವ್ಯಾಪ್ತಿ ಇದೆ ಎನ್ನಲು ಬರುವುದಿಲ್ಲ.

ಇನ್ನು ವ್ಯತಿರೇಕವ್ಯಾಪ್ತಿ ಇಲ್ಲ ಎನ್ನುವುದಾದರೆ, ಸಂದಿಗ್ಧಾನೈಕಾಂತಿಕತಾ ಬರುತ್ತದೆ. ಮಿಥ್ಯಾತ್ವಾಭಾವ ಉಳ್ಳ (ವಿಪಕ್ಷನಾದ) ಆತ್ಮನಲ್ಲಿ ದೃಶ್ಯತ್ವ ಇದೆಯೋ ಇಲ್ಲವೋ ಎಂದು ಸಂದೇಹ ಬರುವ ಕಾರಣ ಹೇತು ಸಂದಿಗ್ಧವಾಗುವುದರಿಂದ ಸಂದಿಗ್ಧಾನೈಕಾಂತಿಕತಾ ಬರುತ್ತದೆ ಎಂದು ಅಭಿಪ್ರಾಯ.

**ಟೀಕಾ :- ನನ್ವಾತ್ಮನೋ ನಿರುಪಾಧಿಕಂ ರೂಪಮೇವಾಪರಾಧೀನ-ಪ್ರಕಾಶಮ್ । ಸೋಪಾಧಿಕಂ ತು ಪರಾಧೀನಪ್ರಕಾಶಮಪಿ । ತೇನ ಸ್ವಪ್ರಕಾಶತ್ವೇಽಪಿ ವ್ಯತಿರೇಕಾವಚ್ಛಿನ್ನಸ್ಯ ಸ್ಯಾದೇವ ದೃಶ್ಯತೇತಿ ಚೇನ್ನ । ವ್ಯತಿರೇಕಾವಚ್ಛಿನ್ನಸ್ಯ ಸತ್ಯತ್ವೇ ಅನೈಕಾಂತ್ಯತಾದವಸ್ಥ್ಯಾತ್ । ಮಿಥ್ಯಾತ್ವೇ ಕಿಮನೇನ ಸಿದ್ಧೇನಾಪಿ ವ್ಯತಿರೇಕೇಣ । ಪ್ರತ್ಯುತ ತಸ್ಯ ಪಕ್ಷತಯಾ ಭಾಗಾಸಿದ್ಧಿಶ್ಚ ಸ್ಯಾತ್ ।**




**ದೃಶ್ಯತ್ವವ್ಯತಿರೇಕಾವಚ್ಛಿನ್ನಂ ದೃಶ್ಯಮಿತಿ ವಿಪ್ರತಿಷಿದ್ಧಂ ಚ । ಅತ ಏವ 'ಯತೋ ವಾಚಃ' ಇತ್ಯಾದಿಶ್ರುತಯೋಽಪ್ಯನ್ಯಥಾ ಯೋಜನೀಯಾಃ । ನಿರುಪಾಧಿಕರೂಪೇ ಪುನಸ್ತದವಸ್ಥೋ ವ್ಯತಿರೇಕಾನಿಶ್ಚಯಃ ।**

**ಅನುವಾದ :-** ಇದರ ಮೇಲೆ ಮಾಯಾವಾದಿಗಳು ಶಂಕಿಸುತ್ತಾರೆ- ಆತ್ಮನ ನಿರುಪಾಧಿಕವಾದ ಸ್ವರೂಪವೇ ಸ್ವಪ್ರಕಾಶವಾಗಿರುವುದು. ಅದೇ ಆತ್ಮಸ್ವರೂಪವೇ ಸೋಪಾಧಿಕವಾದಾಗ ಪರಾಧೀನಪ್ರಕಾಶವೂ ಆಗುತ್ತದೆ. ಹಾಗಾಗಿ ಆತ್ಮನ ನಿರುಪಾಧಿಕವಾದ ಸ್ವರೂಪವು ಸ್ವಪ್ರಕಾಶವಾದರೂ ಸಹ ದೃಶ್ಯತ್ವಾಭಾವಾವಚ್ಛಿನ್ನವಾದ ಸ್ವರೂಪಕ್ಕೆ ದೃಶ್ಯತ್ವವು ಉಪಪನ್ನವಾಗುತ್ತದೆ.

**ಅದರ ಅಭಿಪ್ರಾಯ :-** ಯಾವ ರೀತಿಯಾಗಿ ಆಕಾಶವು ಸ್ವರೂಪೇಣ ಅಪರಿಚ್ಛಿನ್ನವಾಗಿದ್ದರೂ ಸಹ ಅದೇ ಅಪರಿಚ್ಛಿನ್ನವಾದ ಆಕಾಶವೇ ಘಟಾದ್ಯವಚ್ಛೇದೇನ (ಘಟಾದಿಗಳ ಸಂಬಂಧವಾದಾಗ) ಪರಿಚ್ಛಿನ್ನ ಎನಿಸುತ್ತದೆಯೋ ಅದೇ ರೀತಿಯಾಗಿ ಯಾವ ಆತ್ಮನ ನಿರುಪಾಧಿಕವಾದ ಸ್ವರೂಪವು ಸ್ವರೂಪೇಣ ಸ್ವಪ್ರಕಾಶವಾಗಿದೆಯೋ ಅದೇ ಸ್ವರೂಪವೇ ದೃಶ್ಯತ್ವವ್ಯತಿರೇಕಾವಚ್ಛೇದೇನ (ದೃಶ್ಯತ್ವಾಭಾವಸಂಬಂಧವಾದಾಗ) ದೃಶ್ಯವಾಗುವುದರಿಂದ, ಅಧಿಕರಣಜ್ಞಾನ ಸಂಭಾವಿತವಾದ್ದರಿಂದ ಅಲ್ಲಿ ವ್ಯತಿರೇಕವ್ಯಾಪ್ತಿ ತೋರಿಸಬಹುದು ಎಂದು ಶಂಕೆಯ ಭಾವ.

ಅಲ್ಲಿ ನಾವು ವಿಕಲ್ಪಿಸುತ್ತೇವೆ. ''ಯತ್ರ ಮಿಥ್ಯಾತ್ವಾಭಾವಃ ತತ್ರ ದೃಶ್ಯತ್ವಾಭಾವಃ'' ಎಂಬುದಾಗಿ ವ್ಯತಿರೇಕವ್ಯಾಪ್ತಿಯನ್ನು ಸೋಪಾಧಿಕ ಆತ್ಮನಲ್ಲಿ ತೋರಿಸುತ್ತೀರೋ ? ಅಥವಾ ನಿರುಪಾಧಿಕ ಆತ್ಮನಲ್ಲಿ ತೋರಿಸುತ್ತೀರೋ ?

ಸೋಪಾಧಿಕ ಆತ್ಮನಲ್ಲಿ ತೋರಿಸುವುದಾದರೆ, ಆ ಸೋಪಾಧಿಕ ಆತ್ಮನು ಸತ್ಯನೋ? ಮಿಥ್ಯಾನೋ ?

ಸೋಪಾಧಿಕ ಆತ್ಮನಲ್ಲಿ ವ್ಯತಿರೇಕವ್ಯಾಪ್ತಿ ತೋರಿಸುತ್ತೇವೆ. ಅವನು ಸತ್ಯ ಎನ್ನುವುದಾದರೆ ವ್ಯಭಿಚಾರ ಬರುತ್ತದೆ. ಅಂದರೆ - ವ್ಯತಿರೇಕಾವಚ್ಛಿನ್ನನಾದ ಆ ಆತ್ಮನು ದೃಶ್ಯನಲ್ಲ ಎಂದಾದರೆ ಅಧಿಕರಣಜ್ಞಾನವಿಲ್ಲದ ಕಾರಣ ಅವನಲ್ಲಿ ದೃಶ್ಯತ್ವಾಭಾವ (ಹೇತ್ವಭಾವ)ವನ್ನು ತಿಳಿಯಲು ಸಾಧ್ಯವಿಲ್ಲವಾದ್ದರಿಂದ, ಅನಿವಾರ್ಯವಾಗಿ ಅವನಿಗೆ ದೃಶ್ಯತ್ವವನ್ನು ಒಪ್ಪಲೇಬೇಕು. ಸತ್ಯನೆಂದು ಹೇಳಿದ್ದರಿಂದ ಅವನಲ್ಲಿ ಮಿಥ್ಯಾತ್ವರೂಪಸಾಧ್ಯ ಇಲ್ಲ. ಆದರೆ ದೃಶ್ಯತ್ವಹೇತು ಬರುವುದರಿಂದ ವ್ಯಭಿಚಾರ ಬರುತ್ತದೆ.

ಆ ಸೋಪಾಧಿಕ ಆತ್ಮನು ಮಿಥ್ಯಾ ಎನ್ನುವುದಾದರೆ, ಅವನಲ್ಲಿ ದೃಶ್ಯತ್ವಾಭಾವ-ರೂಪಹೇತ್ವಭಾವ ಸಿದ್ಧವಾಗಿದ್ದರೂ ಅದರಿಂದ ಏನು ಪ್ರಯೋಜನ ? ಕಾರಣ ಅಲ್ಲಿ ಹೇತ್ವಭಾವ ಬಂದರೂ ಮಿಥ್ಯಾತ್ವರೂಪಸಾಧ್ಯವೇ ಇರುವ ಕಾರಣ ಮಿಥ್ಯಾತ್ವಾಭಾವ ರೂಪ ಸಾಧ್ಯಾಭಾವ ಬಾರದಿರುವುದರಿಂದ ಅಲ್ಲಿ ''ಯತ್ರ ಮಿಥ್ಯಾತ್ವಾಭಾವಃ ತತ್ರ ದೃಶ್ಯತ್ವಾಭಾವಃ'' ಎಂಬ ವ್ಯತಿರೇಕವ್ಯಾಪ್ತಿಯನ್ನು ತೋರಿಸಲು ಬರುವುದಿಲ್ಲ.

ಮತ್ತು , ವ್ಯತಿರೇಕಾವಚ್ಛಿನ್ನನಾದ ಆ ಆತ್ಮನು ಮಿಥ್ಯಾ ಆಗುವುದಾದರೆ ಮಿಥ್ಯಾಭೂತಘಟಪಟಾದಿಪಕ್ಷಕೋಟಿಯಲ್ಲಿ ಸೇರುವುದರಿಂದ ಅಂತಹ ಪಕ್ಷೈಕದೇಶನಾದ ಸೋಪಾಧಿಕ ಆತ್ಮನಲ್ಲಿ (ದೃಶ್ಯಾತ್ವಾಭಾವವನ್ನೇ ಒಪ್ಪಿದ್ದರಿಂದ) ದೃಶ್ಯತ್ವಹೇತು ಬಾರದ ಕಾರಣ ಭಾಗಾಸಿದ್ಧಿದೋಷವೂ ಬರುತ್ತದೆ.

ಹಾಗೂ ದೃಶ್ಯತ್ವವ್ಯತಿರೇಕಾವಚ್ಛಿನ್ನವಾದದ್ದು ದೃಶ್ಯ ಎಂದು ಹೇಳಿದರೆ ದೃಶ್ಯತ್ವಾಭಾವವಿದ್ದಲ್ಲಿ ದೃಶ್ಯತ್ವವಿದೆ ಎಂದು ಹೇಳಿದಂತಾಗುವುದರಿಂದ ಅದು ವ್ಯಾಹತವೂ ಆಗುತ್ತದೆ.

ಹೌದು, ಆತ್ಮನಿಗೆ ದೃಶ್ಯತ್ವವನ್ನು ಅಂಗೀಕರಿಸಿದರೆ -

''**ಯತೋ ವಾಚೋ ನಿವರ್ತಂತೇ**'' ''**ಯತ್ತದದ್ರೇಶ್ಯಂ**''

ಇತ್ಯಾದಿ ವೇದಾದ್ಯಜ್ಞೇಯತ್ವಪ್ರತಿಪಾದಕಶ್ರುತಿವಿರೋಧ ಬರುತ್ತದೆಯಲ್ಲವೇ ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ ಆ ಶ್ರುತಿಗಳನ್ನು ಅನ್ಯಥಾ ಯೋಜಿಸಿಕೊಳ್ಳಬೇಕು. ಅಂದರೆ, ಶ್ರುತಿಗಳೂ ಸಹ ಬ್ರಹ್ಮನಲ್ಲಿ ದೃಶ್ಯತ್ವವನ್ನು ನಿಷೇಧಿಸಬೇಕು. ಆದರೆ -

'ಅಜ್ಞಾತೇ ಧರ್ಮಿಣಿ ಧರ್ಮನಿಷೇಧಾಯೋಗಾತ್' 'ಸದ್ಭ್ಯಾಂ ಅಧಿಕರಣ-ಪ್ರತಿಯೋಗಿಭ್ಯಾಂ ಅಭಾವೋ ನಿರೂಪ್ಯತೇ' ಎಂಬುದಾಗಿ ಹೇಳಿದ್ದರಿಂದ ಅಧಿಕರಣ-ನಾದ ಬ್ರಹ್ಮನ ಜ್ಞಾನವಿಲ್ಲದಿದ್ದರೆ ಅವನಲ್ಲಿ ದೃಶ್ಯತ್ವವನ್ನು ನಿಷೇಧಿಸಲು ಬರುವುದಿಲ್ಲ. ಆದ್ದರಿಂದ ಬ್ರಹ್ಮನಲ್ಲಿ ದೃಶ್ಯತ್ವವನ್ನು ಸರ್ವಥಾ ನಿಷೇಧಿಸುವುದಾದರೆ ವ್ಯಾಘಾತ ಬರುವುದರಿಂದ, ಯತೋ ವಾಚಃ ಇತ್ಯಾದಿ ಶ್ರುತಿಗಳು ಬ್ರಹ್ಮನಿಗೆ ಸಾಕಲ್ಯೇನ ಅಜ್ಞೇಯತ್ವವನ್ನು ಪ್ರತಿಪಾದಿಸುತ್ತಿವೆ ಎಂದೇ ಅನ್ಯಥಾ ಯೋಜನೆ ಮಾಡಿಕೊಳ್ಳಬೇಕು ಎಂದು ಭಾವ.




ಈವರೆಗೆ 'ಯತ್ರ ಮಿಥ್ಯಾತ್ವಾಭಾವಃ ತತ್ರ ದೃಶ್ಯತ್ವಾಭಾವಃ' ಎಂಬ ವ್ಯತಿರೇಕವ್ಯಾಪ್ತಿಯನ್ನು ಸೋಪಾಧಿಕನಾದ ಆತ್ಮನಲ್ಲಿ ತೋರಿಸುತ್ತೇವೆ ಎಂಬ ಮೊದಲನೇ ಪಕ್ಷವನ್ನು ನಿರಾಕರಿಸಿದರು. ಪ್ರಕೃತ ನಿರುಪಾಧಿಕನಾದ ಆತ್ಮನಲ್ಲಿ ವ್ಯತಿರೇಕವ್ಯಾಪ್ತಿಯನ್ನು ತೋರಿಸುತ್ತೇವೆ ಎಂಬ ಎರಡನೇ ಪಕ್ಷವನ್ನು ನಿರಾಕರಿಸುತ್ತಾರೆ- 'ನಿರುಪಾಧಿಕರೂಪೇ ಪುನಃ' ಎಂಬುದಾಗಿ.

ನಿರುಪಾಧಿಕನಾದ ಆತ್ಮನು ಸತ್ಯನಾದ್ದರಿಂದ ಅವನಲ್ಲಿ ಸಾಧ್ಯಾಭಾವ (ಮಿಥ್ಯಾತ್ವಾಭಾವ) ಬಂದರೂ ಸಹ ಸಾಧನಾಭಾವವು (ದೃಶ್ಯತ್ವಾಭಾವವು) ಸ್ವರೂಪತಃ ಇದ್ದರೂ,ಆತ್ಮನ ಜ್ಞಾನವೇ ಇಲ್ಲದಿದ್ದರೆ ಆತ್ಮನಲ್ಲಿ ದೃಶ್ಯತ್ವವನ್ನು ನಿಷೇಧಿಸಲು ಬರುವುದಿಲ್ಲವಾದ್ದರಿಂದ ದೃಶ್ಯತ್ವಾಭಾವವನ್ನು ಹೇಳುವುದಕ್ಕಾಗಿ ಆತ್ಮನಿಗೆ ದೃಶ್ಯತ್ವವನ್ನು ಅನಿವಾರ್ಯವಾಗಿ ಒಪ್ಪಬೇಕಾದ್ದರಿಂದ ಮಿಥ್ಯಾತ್ವಾಭಾವ ಉಳ್ಳ ನಿರುಪಾಧಿಕ ಆತ್ಮನಲ್ಲಿ ದೃಶ್ಯತ್ವಹೇತು ಇರುವುದರಿಂದ ವ್ಯಭಿಚಾರ ಬರುತ್ತದೆ. ಆದ್ದರಿಂದ 'ನಿರುಪಾಧಿಕ ಆತ್ಮನಲ್ಲಿ ವ್ಯತಿರೇಕವ್ಯಾಪ್ತಿಯನ್ನು ತೋರಿಸುತ್ತೇವೆ' ಎಂಬ ಎರಡನೇ ಪಕ್ಷವೂ ಸರಿಯಲ್ಲ ಎಂದು ಭಾವ.

**ಅವತಾರಿಕೆ :-** ಮತ್ತೊಂದು ಪ್ರಕಾರದಿಂದಲೂ ಆತ್ಮನಿಗೆ ದೃಶ್ಯತ್ವವನ್ನು ಸಮರ್ಥಿಸುತ್ತಾರೆ 'ಏವಂ' ಇತ್ಯಾದಿಯಾಗಿ.

**ಟೀಕಾ :- ಏವಮಾತ್ಮೈಕತ್ವಜ್ಞಾನಮಪಿ ಸೋಪಾಧಿಕವಿಷಯಂ ಚೇತ್ ನ ಮೋಕ್ಷಸಾಧನಂ ಸ್ಯಾತ್ । ನಿರುಪಾಧಿಕವಿಷಯತ್ವೇ ದೃಶ್ಯತ್ವಾಪತ್ತಿಃ ।**

**ಕಿಂ ಚ ಯಥಾ ದಂಡಿನೋ ದರ್ಶನೇ ದೇವದತ್ತೋಽಪಿ ದೃಷ್ಟ ಏವ, ಏವಮವಚ್ಛಿನ್ನಾತ್ಮನೋ ದೃಶ್ಯತ್ವೇಽಪ್ಯಾತ್ಮಾ ದೃಷ್ಟ ಏವೇತಿ ಕಿಮನೇನ ? ತಥಾಪಿ ಶುದ್ಧೇನ ರೂಪೇಣ ನ ದೃಶ್ಯತ ಇತಿ ಚೇತ್, ಮಾ ದರ್ಶಿ । ಸತ್ಯೇಽಪ್ಯಾತ್ಮನಿ ಗತಂ ದೃಶ್ಯತ್ವಮ್ । ಅನೈಕಾಂತಿಕಂ ಸ್ಥಿತಮೇವ । ಸೋಽಪಿ ಮಿಥ್ಯೇತಿ ಚೇತ್ ತರ್ಹಿ ಕಿಮತ್ರ ವ್ಯತಿರೇಕಗ್ರಹಣೇನ ? ಇತ್ಯುಕ್ತಮ್ । ಅಪಿ ಚೈವಂ ಘಟೋಽಪ್ಯಪರಾಧೀನಪ್ರಕಾಶ ಇತಿ ಭಾಗಾಸಿದ್ಧತ್ವಂ ಸ್ಯಾತ್ ।**

**ಅನುವಾದ :-** ಆತ್ಮೈಕತ್ವಜ್ಞಾನದಿಂದ (ಐಕ್ಯಜ್ಞಾನದಿಂದ) ಮೋಕ್ಷ ಎಂದು ಹೇಳುವ ನೀವು ಆ ಆತ್ಮೈಕತ್ವಜ್ಞಾನವು ಸೋಪಾಧಿಕವಿಷಯಕ ಎಂದು ಹೇಳುತ್ತೀರೋ ? ನಿರುಪಾಧಿಕವಿಷಯಕ ಎಂದು ಹೇಳುತ್ತೀರೋ ?

ಸೋಪಾಧಿಕವಿಷಯಕ ಎನ್ನುವುದಾದರೆ, ಸೋಪಾಧಿಕವಾದದ್ದು ಮಿಥ್ಯಾಭೂತವಾಗಿರುವುದರಿಂದ ಮಿಥ್ಯಾಭೂತಸೋಪಾಧಿಕವಿಷಯಕಜ್ಞಾನವು ಭ್ರಮ ಆಗುವುದರಿಂದ ಅಂತಹ ಭ್ರಮಾತ್ಮಕಐಕ್ಯಜ್ಞಾನದಿಂದ ಅವಿದ್ಯಾನಿವೃತ್ತಿ ಆಗದ ಕಾರಣ ಆ ಸೋಪಾಧಿಕವಿಷಯಕಆತ್ಮೈಕತ್ವಜ್ಞಾನವು ಮೋಕ್ಷಸಾಧನವಾಗದೇ ಹೋಗಬೇಕಾಗುತ್ತದೆ. ಇನ್ನು ಆತ್ಮೈಕತ್ವಜ್ಞಾನವು ನಿರುಪಾಧಿಕವಿಷಯಕ ಎಂದು ಹೇಳುವುದಾದರೆ, ಆತ್ಮನಿಗೆ ದೃಶ್ಯತ್ವವನ್ನು ಒಪ್ಪಿದಂತಾಯಿತು. ಆ ನಿರುಪಾಧಿಕ ಆತ್ಮನು ಸತ್ಯನಾದ್ದರಿಂದ ಮಿಥ್ಯಾತ್ವರೂಪ ಸಾಧ್ಯ ಇಲ್ಲ . ಆದರೆ ದೃಶ್ಯತ್ವಹೇತು ಬರುವುದರಿಂದ ವ್ಯಭಿಚಾರ ಬಂದೇ ಬರುತ್ತದೆ ಎಂದು ಭಾವ.

**'ವ್ಯತಿರೇಕಾವಚ್ಛಿನ್ನಸ್ಯ ಸ್ಯಾದೇವ ದೃಶ್ಯತಾ'**

ಎಂಬ ಪರೋಕ್ತಿಯಿಂದಲೇ ವಿಶೇಷ್ಯನಾದ ಆತ್ಮನಿಗೆ ದೃಶ್ಯತ್ವವು ಪ್ರಾಪ್ತವಾಗುತ್ತದೆ ಎನ್ನುವುದನ್ನು ದೃಷ್ಟಾಂತಸಹಿತವಾಗಿ ಉಪಪಾದನೆ ಮಾಡುತ್ತಾರೆ - 'ಕಿಂಚ' ಎಂದು.

ಯಾವ ರೀತಿಯಾಗಿ ದಂಡವಿಶಿಷ್ಟದೇವದತ್ತನು ಕಂಡಾಗ ವಿಶೇಷ್ಯನಾದ ದೇವದತ್ತನೂ ದೃಷ್ಟನಾಗುವನೋ ಅದೇ ರೀತಿಯಾಗಿ ಅವಚ್ಛಿನ್ನನಾದ ಆತ್ಮನಿಗೆ (ದೃಶ್ಯತ್ವಾಭಾವವಿಶಿಷ್ಟನಾದ ಆತ್ಮನಿಗೆ) ದೃಶ್ಯತ್ವ ಹೇಳಿದರೆ ವಿಶೇಷ್ಯನಾದ ಶುದ್ಧ ಆತ್ಮನೂ ದೃಶ್ಯನೇ ಆಗುವುದರಿಂದ,

**''ವ್ಯತಿರೇಕಾವಚ್ಛಿನ್ನಸ್ಯ ಸ್ಯಾದೇವ ದೃಶ್ಯತಾ''**

(ನಿರುಪಾಧಿಕನಾದ (ಶುದ್ಧ) ಆತ್ಮನಿಗೆ ದೃಶ್ಯತ್ವ ಇಲ್ಲ, ವ್ಯತಿರೇಕಾವಚ್ಛಿನ್ನನಾದ ಆತ್ಮನಿಗೆ ದೃಶ್ಯತ್ವ ಇದೆ)

ಎಂಬುದಾಗಿ ಸೋಪಾಧಿಕಆತ್ಮನನಿಗೆ ಮಾತ್ರ ದೃಶ್ಯತ್ವವನ್ನು ಉಪಪಾದನೆ ಮಾಡಲು ಹೊರಡುವುದರಿಂದ ಏನು ಪ್ರಯೋಜನ ?

ವಿಶಿಷ್ಟನಿಗೆ ದೃಶ್ಯತ್ವ ಹೇಳಿದ ಮೇಲೆ ವಿಶೇಷ್ಯನಿಗೂ ದೃಶ್ಯತ್ವ ಬರುತ್ತದೆ ಎನ್ನುವುದು ಸರಿ. ಆದರೂ ಆತ್ಮನು ವಿಶೇಷಣಾನವಚ್ಛಿನ್ನಸ್ವರೂಪದಿಂದ ದೃಶ್ಯನಾಗುವುದಿಲ್ಲ. ಪ್ರಕೃತ ನಾವು ಸ್ವರೂಪೇಣ ದೃಶ್ಯತ್ವವನ್ನೇ ಹೇತುವನ್ನಾಗಿ ವಿವಕ್ಷಿಸುತ್ತೇವೆ ಎಂಬುದಾಗಿ ಶಂಕೆ ಬಂದರೆ, ಹಾಗಾದರೆ ಇಲ್ಲಿ ನಾವು ಪ್ರಶ್ನೆ




ಮಾಡುತ್ತೇವೆ - ದೃಶ್ಯತ್ವ ಎಂದರೆ ಕೇವಲ ಜ್ಞಾನವಿಷಯತ್ವ ಎಂದು ಹೇಳುತ್ತೀರೋ ? ಅಥವಾ ಶುದ್ಧೇನ ರೂಪೇಣ ಜ್ಞಾನವಿಷಯತ್ವ ಎಂದು ಹೇಳುತ್ತೀರೋ ?

ದೃಶ್ಯತ್ವ ಎಂದರೆ ಕೇವಲ ಜ್ಞಾನವಿಷಯತ್ವ ಎನ್ನುವುದಾದರೆ, ಶುದ್ಧನಾದ (ವಿಶೇಷಣಾನವಚ್ಛಿನ್ನಾದ) ಆತ್ಮನು ಸತ್ಯನಾಗಿದ್ದರಿಂದ ಅವನಲ್ಲಿ ಮಿಥ್ಯಾತ್ವರೂಪಸಾಧ್ಯ ಇಲ್ಲದೇ ಹೋದರೂ ವಿಶೇಷಣಾವಚ್ಛಿನ್ನಸ್ವರೂಪದಿಂದ ಅವನು ದೃಶ್ಯನೇ ಆಗುವುದರಿಂದ, ಆತ್ಮನಲ್ಲಿ ದೃಶ್ಯತ್ವಹೇತು ಬರುವುದರಿಂದ ವ್ಯಭಿಚಾರ ಬರುತ್ತದೆ.

ವಿಶೇಷಣಾವಚ್ಛಿನ್ನನಾದ ಯಾವ ಆತ್ಮನು ದೃಶ್ಯನಾಗಿದ್ದಾನೆಯೋ ಆ ಅವಚ್ಛಿನ್ನಾತ್ಮನು ಮಿಥ್ಯಾ ಆಗಿದ್ದಾನೆ. ಹಾಗಾಗಿ ''ಸತ್ಯನಾದ ಆತ್ಮನಲ್ಲಿ ದೃಶ್ಯತ್ವ ಬಂತು ವ್ಯಭಿಚಾರ'' ಎಂದು ಹೇಳುವುದು ಸರಿಯಲ್ಲ ಎಂದು ಶಂಕೆ ಬಂದರೆ, ಹಾಗಾದರೆ ಆ ಅವಚ್ಛಿನ್ನ ಆತ್ಮನು ಮಿಥ್ಯಾ ಆದರೆ ಅವನಲ್ಲಿ ಸಾಧ್ಯಾಭಾವ (ಮಿಥ್ಯಾತ್ವಾಭಾವ) ಬಾರದ ಕಾರಣ

**'ಶುದ್ಧೇನ ರೂಪೇಣ ನ ದೃಶ್ಯತೇ'**

ಎಂಬುದಾಗಿ ದೃಶ್ಯತ್ವಾಭಾವ(ಹೇತ್ವಭಾವ)ವನ್ನು ನಿಶ್ಚಯ ಮಾಡುವುದು ವ್ಯರ್ಥವಾಗುತ್ತದೆ. ಸಾಧ್ಯಾಭಾವ ಇಲ್ಲದೇ ಕೇವಲ ಹೇತ್ವಭಾವದಿಂದ ವ್ಯತಿರೇಕವ್ಯಾಪ್ತಿಯು ಸಿದ್ಧವಾಗುವುದಿಲ್ಲ ಎಂದು ಭಾವ.

ಇನ್ನು ದೃಶ್ಯತ್ವ ಎಂದರೆ ಶುದ್ಧೇನ ರೂಪೇಣ ಜ್ಞಾನವಿಷಯತ್ವ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಏಕೆಂದರೆ - ಪಕ್ಷಕೋಟಿಪ್ರವಿಷ್ಟವಾದ ಘಟವೂ ಸಹ ಘಟತ್ವಾವಚ್ಛೇದೇನ ವಿಶಿಷ್ಟರೂಪದಿಂದಲೇ ದೃಶ್ಯವಾಗಿದೆಯೇ ಹೊರತು ಶುದ್ಧೇನ ರೂಪೇಣ ಜ್ಞಾನವಿಷಯವಾಗಿಲ್ಲ. ಪ್ರಕೃತ ಶುದ್ಧೇನ ರೂಪೇಣ ಜ್ಞಾನವಿಷಯತ್ವವೇ ದೃಶ್ಯತ್ವ ಎಂದು ಹೇಳುವುದಾದರೆ ಘಟಾದಿಗಳಲ್ಲಿ ಬಾರದ ಕಾರಣ ಭಾಗಾಸಿದ್ಧಿ ಬರುತ್ತದೆ. ಆದ್ದರಿಂದ ಶುದ್ಧೇನ ರೂಪೇಣ ದೃಶ್ಯತ್ವವನ್ನು ವಿವಕ್ಷಿಸಿದರೆ ಭಾಗಾಸಿದ್ಧಿ, ದೃಶ್ಯತ್ವವ್ಯತಿರೇಕಾವಚ್ಛಿನ್ನ ಆತ್ಮನಿಗೆ ದೃಶ್ಯತ್ವವನ್ನು ಹೇಳಲು ಹೊರಟರೆ ವಿಶೇಷ್ಯನಾದ ಆತ್ಮನಿಗೂ ದೃಶ್ಯತ್ವ ಬಂದೇ ಬರುವುದರಿಂದ ವ್ಯಭಿಚಾರ ಅಪರಿಹಾರ್ಯ ಎಂದು ಭಾವ.

**ಟೀಕಾ :- ಅಪರ ಆಹ- ಆತ್ಮನೋ ವೃತ್ತಿವಿಷಯತ್ವೇಽಪಿ ನ ದೃಶ್ಯತ್ವಮನೈಕಾಂತಿಕಮ್ । ನ ಹಿ ದರ್ಶನಪ್ರತಿಯೋಗಿತಾಮಾತ್ರಂ ದೃಶ್ಯತ್ವಂ**

**ಹೇತುಃ । ಅಪಿ ತು ಸ್ವವ್ಯವಹಾರೇ ಸ್ವಾತಿರೇಕಿದರ್ಶನಾಪೇಕ್ಷಾನಿಯತಿಃ । ನ ಚಾತ್ಮನಿ ಸ್ವಪ್ರಕಾಶೇ ಸಾऽಸ್ತೀತಿ ।**

**ತದಪ್ಯಸತ್ । ಸ್ವಪ್ರಕಾಶತ್ವಾದ್ವಿತೀಯತ್ವಾದಿರೂಪೇಣ ಆತ್ಮವ್ಯವಹಾರಸ್ಯ ಸ್ವಾತಿರೇಕಿಸಂವಿತ್ಸಾಪೇಕ್ಷತಾನಿಯಮಾತ್ । ಔಪಾಧಿಕಾತ್ಮವಿಕಲ್ಪೇ ತದುಪನಾಯಕಪ್ರಮಾಣಾಪೇಕ್ಷಾನಿಯಮೇऽಪಿ ನ ಸ್ವರೂಪಮಾತ್ರವ್ಯವಹೃತೌ ತದಪೇಕ್ಷೇತಿ ಚೇತ್ತರ್ಹಿ ಸಮಮೇತದ್ಘಟಾದಾವಿತಿ ಭಾಗಾಸಿದ್ಧಿಃ ಸ್ಯಾದಿತ್ಯುಕ್ತಮ್।**

**ಅಥ ಘಟೇ ವಿಶಿಷ್ಟವ್ಯವಹಾರಾತಿರಿಕ್ತೋ ವ್ಯವಹಾರ ಏವ ನಾಸ್ತೀತಿ ಚೇತ್ ತುಲ್ಯಮಾತ್ಮನಿ । ಸುಷುಪ್ತ್ಯಾದಾವಸ್ತೀತಿ ಚೇತ್, ಕುತಃ ಸಿದ್ಧಿಃ ? ''ಏತಾವಂತಂ ಕಾಲಂ ಸುಖಮಹಂ ಸುಪ್ತೋऽಸ್ಮಿ'' ಇತ್ಯುತ್ತರಕಾಲಪರಾಮರ್ಶಾತ್ ಇತಿ ಚೇತ್ ತರ್ಹಿ ತತ ಏವ ವಿಶಿಷ್ಟವ್ಯವಹಾರಸಿದ್ಧಿರಿತಿ ತೂಷ್ಣೀಮಾಸ್ವ ॥**

**ಅನುವಾದ :-** ಕೆಲವರು ಆಕ್ಷೇಪಿಸುತ್ತಾರೆ - ಆತ್ಮನು ವೃತ್ತಿಜ್ಞಾನದಲ್ಲಿ ವಿಷಯನಾದರೂ ಸಹ ದೃಶ್ಯತ್ವವು ವ್ಯಭಿಚರಿತವಾಗುವುದಿಲ್ಲ. ಏಕೆಂದರೆ, ಹೇತುವಾದ ದೃಶ್ಯತ್ವ ಎಂದರೆ ಕೇವಲ ದರ್ಶನಪ್ರತಿಯೋಗಿತ್ವ (ವೃತ್ತಿಜ್ಞಾನವನ್ನು ಕುರಿತು ವಿಷಯತ್ವೇನ ಸಂಬಂಧಿಯಾಗುವುದು) ಎಂದು ಹೇಳುವುದಿಲ್ಲ. ಹಾಗೆ ಹೇಳುತ್ತಿದ್ದರೆ ಆತ್ಮನಲ್ಲಿ ವ್ಯಭಿಚಾರ ಬರುತ್ತಿತ್ತು . ಕಿಂತು -

**ಸ್ವವ್ಯವಹಾರೇ [1]ಸ್ವಾತಿರೇಕಿದರ್ಶನಾಪೇಕ್ಷಾನಿಯತಿಃ ದೃಶ್ಯತ್ವಮ್ ।**

---

1 ಇಲ್ಲಿ ಸ್ವಾತಿರಿಕ್ತ ಎಂದು ಹೇಳದೇ ಕೇವಲ ಸ್ವವ್ಯವಹಾರೇ 'ದರ್ಶನಾಪೇಕ್ಷಾನಿಯತಿಃ ದೃಶ್ಯತ್ವಂ' ಎಂದು ಹೇಳಿದರೆ ಲಕ್ಷಣಕ್ಕೆ ಆತ್ಮನಲ್ಲಿ ಅತಿವ್ಯಾಪ್ತಿ ಬರುತ್ತದೆ. ಕಾರಣ ಆತ್ಮನೂ ಸಹ ಸ್ವಸ್ವರೂಪವ್ವಹಾರದಲ್ಲಿ ನಿಯಮೇನ ಸ್ವಾತ್ಮಕದರ್ಶನಾಪೇಕ್ಷಾ ಉಳ್ಳವನಾದ್ದರಿಂದ ಅತಿವ್ಯಾಪ್ತಿ . ಅದಕ್ಕಾಗಿ ಸ್ವಾತಿರಿಕ್ತತ್ವ ಎಂಬ ವಿಶೇಷಣವನ್ನು ದರ್ಶನಕ್ಕೆ ಕೊಡಬೇಕು. ಆತ್ಮನು ಸ್ವಸ್ವರೂಪವ್ಯವಹಾರದಲ್ಲಿ ಸ್ವಾತ್ಮಕದರ್ಶನಾಪೇಕ್ಷಾ ಉಳ್ಳವನಾದರೂ ಸ್ವಾತಿರಿಕ್ತದರ್ಶನಾಪೇಕ್ಷಾ ಉಳ್ಳವನಾಗಿಲ್ಲ. ಆದ್ದರಿಂದ ಅತಿವ್ಯಾಪ್ತಿ ಇಲ್ಲ.

ಇನ್ನು ನಿಯತಿಪದವನ್ನು ಇಡದೇ ಕೇವಲ 'ಸ್ವವ್ಯವಹಾರೇ ಸ್ವಾತಿರಿಕ್ತ ದರ್ಶನಾಪೇಕ್ಷಾ ದೃಶ್ಯತ್ವಂ' ಎಂದು ಹೇಳಿದರೆ ಪುನಃ ಆತ್ಮನಲ್ಲಿಯೇ ಅತಿವ್ಯಾಪ್ತಿ ಬರುತ್ತದೆ. ಕಾರಣ ಆತ್ಮನಿಗೇನೇ ಕೆಲವೊಮ್ಮೆ ಅದ್ವಿತೀಯತ್ವಾದಿವಿಶಿಷ್ಟವ್ಯವಹಾರದಲ್ಲಿ ಸ್ವಾತಿರಿಕ್ತ ವಿಶೇಷಣೋಪನಾಯಕ ಮಾನದ ಅಪೇಕ್ಷೆ ಇರುವುದರದಿಂದ ಅತಿವ್ಯಾಪ್ತಿ. ಅದಕ್ಕಾಗಿ ನಿಯತಿಪದ ಬೇಕು. ಆತ್ಮನಿಗಾದರೂ ಅದ್ವಿತೀಯತ್ವಾದಿವಿಶಿಷ್ಟವ್ಯವಹಾರದಲ್ಲಿ ಸ್ವಾತಿರಿಕ್ತ ವಿಶೇಷಣೋಪ-

ಅಂದರೆ - ತನ್ನ ವ್ಯವಹಾರದಲ್ಲಿ ತನ್ನಿಂದ ಭಿನ್ನವಾದ ಜ್ಞಾನದ ಅಪೇಕ್ಷೆ ನಿಯಮೇನ ಇರುವುದು. ಇದೇ ದೃಶ್ಯತ್ವ. ಪಕ್ಷವಾದ ಘಟಾದಿಗಳಲ್ಲಿ ಈ ವಿಧವಾದ ದೃಶ್ಯತ್ವ ಇದೆ. ಘಟಾದಿಗಳು ಸ್ವಪ್ರಕಾಶ (ಜ್ಞಾನಸ್ವರೂಪ) ಅಲ್ಲ. ಘಟಾದಿಗಳೇ ಬೇರೆ. ಘಟಾದಿಗಳ ಜ್ಞಾನವೇ ಬೇರೆ. ವ್ಯವಹಾರ ಮಾಡಬೇಕಾದರೆ ವ್ಯವಹಾರ್ಯವಾದ (ವ್ಯವಹರಿಸಲ್ಪಡುವ) ವಸ್ತುವಿನ ಜ್ಞಾನ ಅತ್ಯಂತ ಆವಶ್ಯಕ. ಹಾಗಾಗಿ ಘಟಾದಿಗಳ ವ್ಯವಹಾರದಲ್ಲಿ ಘಟಾದಿಗಳಿಂದ ಭಿನ್ನವಾದ ಜ್ಞಾನದ (ಘಟಾದಿಜ್ಞಾನದ) ಅಪೇಕ್ಷೆ ನಿಯಮೇನ ಇದೆ. ಆದ್ದರಿಂದ ಘಟಾದಿಗಳಲ್ಲಿ ದೃಶ್ಯತ್ವವಿದೆ. ಆದರೆ ಈ ವಿಧವಾದ ದೃಶ್ಯತ್ವವು ಆತ್ಮನಲ್ಲಿ ಇಲ್ಲ. ಏಕೆಂದರೆ - ಆತ್ಮನು ಸ್ವಪ್ರಕಾಶ (ಜ್ಞಾನಸ್ವರೂಪ) ಆಗಿದ್ದಾನೆ. ಆತ್ಮ-ಆತ್ಮಜ್ಞಾನ ಭಿನ್ನ ಅಲ್ಲ. ಹಾಗಾಗಿ ಆತ್ಮನ ವ್ಯವಹಾರದಲ್ಲಿ ಆತ್ಮನಿಂದ ಭಿನ್ನವಾದ ಜ್ಞಾನದ (ಆತ್ಮಜ್ಞಾನದ) ಅಪೇಕ್ಷೆ ಇಲ್ಲ. ಆದ್ದರಿಂದ ಆತ್ಮನಲ್ಲಿ ದೃಶ್ಯತ್ವ ಇಲ್ಲ. ಅಂತೆಯೇ ಆತ್ಮನಲ್ಲಿ ವ್ಯಭಿಚಾರ ಬರುವುದಿಲ್ಲ.

ಇದು ಕೆಲವರ ಆಕ್ಷೇಪ.

ಅದು ಸರಿಯಲ್ಲ. ಇಲ್ಲಿ ವ್ಯವಹಾರಶಬ್ದದಿಂದ ವಿಶಿಷ್ಟವ್ಯವಹಾರವನ್ನು ವಿವಕ್ಷಿಸುತ್ತೀರೋ ? ಅಥವಾ ಸ್ವರೂಪಮಾತ್ರವ್ಯವಹಾರವನ್ನು ವಿವಕ್ಷಿಸುತ್ತೀರೋ ?

ವ್ಯವಹಾರಶಬ್ದದಿಂದ ವಿಶಿಷ್ಟವ್ಯವಹಾರವನ್ನು ವಿವಕ್ಷಿಸುವುದಾದರೆ, ಆತ್ಮನ ಸ್ವಪ್ರಕಾಶತ್ವಾದಿವಿಶಿಷ್ಟವ್ಯವಹಾರದಲ್ಲಿ ಸ್ವಪ್ರಕಾಶತ್ವಾದಿವಿಶೇಷಣೋಪನಾಯಕವಾದ

**''ಅತ್ರಾಯಂ ಪುರುಷಃ ಸ್ವಯಂಜ್ಯೋತಿಃ''**

ಇತ್ಯಾದಿವೇದಾಂತವಾಕ್ಯಜನ್ಯವೃತ್ತಿಸಾಪೇಕ್ಷತ್ವವು ನಿಯಮೇನ ಇರುವುದರಿಂದ ಆತ್ಮನಲ್ಲಿ (ಈ ವಿಧವಾದ ದೃಶ್ಯತ್ವ ಬರುವುದರಿಂದ) ವ್ಯಭಿಚಾರ ಬರುತ್ತದೆ.

ವ್ಯವಹಾರಶಬ್ದದಿಂದ ಸ್ವರೂಪಮಾತ್ರವ್ಯವಹಾರವನ್ನು ವಿವಕ್ಷಿಸುತ್ತೇವೆ. ಸೋಪಾಧಿಕ ಆತ್ಮವಿಷಯಕ ವಿಶಿಷ್ಟವ್ಯವಹಾರದಲ್ಲಿ ಉಪಾಧ್ಯುನ್ನಾಯಕಪ್ರಮಾಣಾ-ಪೇಕ್ಷೆ ನಿಯಮೇನ ಇದ್ದರೂ ಸಹ ಆತ್ಮನ ಸ್ವರೂಪಮಾತ್ರವ್ಯವಹಾರದಲ್ಲಿ

---

-ನಾಯಕ ಮಾನದ ಅಪೇಕ್ಷೆ ಇದ್ದರೂ ಸಹ, ಸ್ವರೂಪವ್ಯವಹಾರದಲ್ಲಿ ಸ್ವಾತಿರಿಕ್ತ ವಿಶೇಷಣೋಪನಾಯಕ ಮಾನದ ಅಪೇಕ್ಷೆ ಇಲ್ಲವಾದ್ದರಿಂದ ನಿಯತಿ ಇಲ್ಲದ ಕಾರಣ ಅತಿವ್ಯಾಪ್ತಿ ಬರುವುದಿಲ್ಲ. ಈ ರೀತಿಯಾಗಿ ದಳಕೃತ್ಯ ತಿಳಿಯಬೇಕು.

ಹೇತುಃ । ಅಪಿ ತು ಸ್ವವ್ಯವಹಾರೇ ಸ್ವಾತಿರೇಕಿದರ್ಶನಾಪೇಕ್ಷಾನಿಯತಿಃ । ನ ಚಾತ್ಮನಿ ಸ್ವಪ್ರಕಾಶೇ ಸಾಽಸ್ತೀತಿ ।

ತದಪ್ಯಸತ್ । ಸ್ವಪ್ರಕಾಶತ್ವಾದ್ವಿತೀಯತ್ವಾದಿರೂಪೇಣ ಆತ್ಮವ್ಯವಹಾರಸ್ಯ ಸ್ವಾತಿರೇಕಿಸಂವಿತ್ಸಾಪೇಕ್ಷತಾನಿಯಮಾತ್ । ಔಪಾಧಿಕಾತ್ಮವಿಕಲ್ಪೇ ತದುಪನಾಯಕಪ್ರಮಾಣಾಪೇಕ್ಷಾನಿಯಮೇಽಪಿ ನ ಸ್ವರೂಪಮಾತ್ರವ್ಯವಹೃತೌ ತದಪೇಕ್ಷೇತಿ ಚೇತ್ತರ್ಹಿ ಸಮಮೇತದ್ಘಟಾದಾವಿತಿ ಭಾಗಾಸಿದ್ಧಿಃ ಸ್ಯಾದಿತ್ಯುಕ್ತಮ್।

ಅಥ ಘಟೇ ವಿಶಿಷ್ಟವ್ಯವಹಾರಾತಿರಿಕ್ತೋ ವ್ಯವಹಾರ ಏವ ನಾಸ್ತೀತಿ ಚೇತ್ ತುಲ್ಯಮಾತ್ಮನಿ । ಸುಷುಪ್ತ್ಯಾದಾವಸ್ತೀತಿ ಚೇತ್, ಕುತಃ ಸಿದ್ಧಃ ? ''ಏತಾವಂತಂ ಕಾಲಂ ಸುಖಮಹಂ ಸುಪ್ತೋಽಸ್ಮಿ'' ಇತ್ಯುತ್ತರಕಾಲಪರಾಮರ್ಶಾತ್ ಇತಿ ಚೇತ್ ತರ್ಹಿ ತತ ಏವ ವಿಶಿಷ್ಟವ್ಯವಹಾರಸಿದ್ಧಿರಿತಿ ತೂಷ್ಣೀಮಾಸ್ವ ॥

**ಅನುವಾದ :-** ಕೆಲವರು ಆಕ್ಷೇಪಿಸುತ್ತಾರೆ - ಆತ್ಮನು ವೃತ್ತಿಜ್ಞಾನದಲ್ಲಿ ವಿಷಯನಾದರೂ ಸಹ ದೃಶ್ಯತ್ವವು ವ್ಯಭಿಚರಿತವಾಗುವುದಿಲ್ಲ. ಏಕೆಂದರೆ, ಹೇತುವಾದ ದೃಶ್ಯತ್ವ ಎಂದರೆ ಕೇವಲ ದರ್ಶನಪ್ರತಿಯೋಗಿತ್ವ (ವೃತ್ತಿಜ್ಞಾನವನ್ನು ಕುರಿತು ವಿಷಯತ್ವೇನ ಸಂಬಂಧಿಯಾಗುವುದು) ಎಂದು ಹೇಳುವುದಿಲ್ಲ. ಹಾಗೆ ಹೇಳುತ್ತಿದ್ದರೆ ಆತ್ಮನಲ್ಲಿ ವ್ಯಭಿಚಾರ ಬರುತ್ತಿತ್ತು . ಕಿಂತು -

ಸ್ವವ್ಯವಹಾರೇ [1]ಸ್ವಾತಿರೇಕಿದರ್ಶನಾಪೇಕ್ಷಾನಿಯತಿಃ ದೃಶ್ಯತ್ವಮ್ ।

---

1 ಇಲ್ಲಿ ಸ್ವಾತಿರಿಕ್ತ ಎಂದು ಹೇಳದೇ ಕೇವಲ ಸ್ವವ್ಯವಹಾರೇ 'ದರ್ಶನಾಪೇಕ್ಷಾನಿಯತಿಃ ದೃಶ್ಯತ್ವಂ' ಎಂದು ಹೇಳಿದರೆ ಲಕ್ಷಣಕ್ಕೆ ಆತ್ಮನಲ್ಲಿ ಅತಿವ್ಯಾಪ್ತಿ ಬರುತ್ತದೆ. ಕಾರಣ ಆತ್ಮನೂ ಸಹ ಸ್ವಸ್ವರೂಪವ್ವಹಾರದಲ್ಲಿ ನಿಯಮೇನ ಸ್ವಾತ್ಮಕದರ್ಶನಾಪೇಕ್ಷಾ ಉಳ್ಳವನಾದ್ದರಿಂದ ಅತಿವ್ಯಾಪ್ತಿ . ಅದಕ್ಕಾಗಿ ಸ್ವಾತಿರಿಕ್ತತ್ವ ಎಂಬ ವಿಶೇಷಣವನ್ನು ದರ್ಶನಕ್ಕೆ ಕೊಡಬೇಕು. ಆತ್ಮನು ಸ್ವಸ್ವರೂಪವ್ಯವಹಾರದಲ್ಲಿ ಸ್ವಾತ್ಮಕದರ್ಶನಾಪೇಕ್ಷಾ ಉಳ್ಳವನಾದರೂ ಸ್ವಾತಿರಿಕ್ತದರ್ಶನಾಪೇಕ್ಷಾ ಉಳ್ಳವನಾಗಿಲ್ಲ. ಆದ್ದರಿಂದ ಅತಿವ್ಯಾಪ್ತಿ ಇಲ್ಲ.

ಇನ್ನು ನಿಯತಿಪದವನ್ನು ಇಡದೇ ಕೇವಲ 'ಸ್ವವ್ಯವಹಾರೇ ಸ್ವಾತಿರಿಕ್ತ ದರ್ಶನಾಪೇಕ್ಷಾ ದೃಶ್ಯತ್ವಂ' ಎಂದು ಹೇಳಿದರೆ ಪುನಃ ಆತ್ಮನಲ್ಲಿಯೇ ಅತಿವ್ಯಾಪ್ತಿ ಬರುತ್ತದೆ. ಕಾರಣ ಆತ್ಮನಿಗೇನೇ ಕೆಲವೊಮ್ಮೆ ಅದ್ವಿತೀಯತ್ವಾದಿವಿಶಿಷ್ಟವ್ಯವಹಾರದಲ್ಲಿ ಸ್ವಾತಿರಿಕ್ತ ವಿಶೇಷಣೋಪನಾಯಕ ಮಾನದ ಅಪೇಕ್ಷೆ ಇರುವುದರದಿಂದ ಅತಿವ್ಯಾಪ್ತಿ. ಅದಕ್ಕಾಗಿ ನಿಯತಿಪದ ಬೇಕು. ಆತ್ಮನಿಗಾದರೂ ಅದ್ವಿತೀಯತ್ವಾದಿವಿಶಿಷ್ಟವ್ಯವಹಾರದಲ್ಲಿ ಸ್ವಾತಿರಿಕ್ತ ವಿಶೇಷಣೋಪ-

ಅಂದರೆ - ತನ್ನ ವ್ಯವಹಾರದಲ್ಲಿ ತನ್ನಿಂದ ಭಿನ್ನವಾದ ಜ್ಞಾನದ ಅಪೇಕ್ಷೆ ನಿಯಮೇನ ಇರುವುದು. ಇದೇ ದೃಶ್ಯತ್ವ. ಪಕ್ಷವಾದ ಘಟಾದಿಗಳಲ್ಲಿ ಈ ವಿಧವಾದ ದೃಶ್ಯತ್ವ ಇದೆ. ಘಟಾದಿಗಳು ಸ್ವಪ್ರಕಾಶ (ಜ್ಞಾನಸ್ವರೂಪ) ಅಲ್ಲ. ಘಟಾದಿಗಳೇ ಬೇರೆ. ಘಟಾದಿಗಳ ಜ್ಞಾನವೇ ಬೇರೆ. ವ್ಯವಹಾರ ಮಾಡಬೇಕಾದರೆ ವ್ಯವಹಾರ್ಯವಾದ (ವ್ಯವಹರಿಸಲ್ಪಡುವ) ವಸ್ತುವಿನ ಜ್ಞಾನ ಅತ್ಯಂತ ಆವಶ್ಯಕ. ಹಾಗಾಗಿ ಘಟಾದಿಗಳ ವ್ಯವಹಾರದಲ್ಲಿ ಘಟಾದಿಗಳಿಂದ ಭಿನ್ನವಾದ ಜ್ಞಾನದ (ಘಟಾದಿಜ್ಞಾನದ) ಅಪೇಕ್ಷೆ ನಿಯಮೇನ ಇದೆ. ಆದ್ದರಿಂದ ಘಟಾದಿಗಳಲ್ಲಿ ದೃಶ್ಯತ್ವವಿದೆ. ಆದರೆ ಈ ವಿಧವಾದ ದೃಶ್ಯತ್ವವು ಆತ್ಮನಲ್ಲಿ ಇಲ್ಲ. ಏಕೆಂದರೆ - ಆತ್ಮನು ಸ್ವಪ್ರಕಾಶ (ಜ್ಞಾನಸ್ವರೂಪ) ಆಗಿದ್ದಾನೆ. ಆತ್ಮ-ಆತ್ಮಜ್ಞಾನ ಭಿನ್ನ ಅಲ್ಲ. ಹಾಗಾಗಿ ಆತ್ಮನ ವ್ಯವಹಾರದಲ್ಲಿ ಆತ್ಮನಿಂದ ಭಿನ್ನವಾದ ಜ್ಞಾನದ (ಆತ್ಮಜ್ಞಾನದ) ಅಪೇಕ್ಷೆ ಇಲ್ಲ. ಆದ್ದರಿಂದ ಆತ್ಮನಲ್ಲಿ ದೃಶ್ಯತ್ವ ಇಲ್ಲ. ಅಂತೆಯೇ ಆತ್ಮನಲ್ಲಿ ವ್ಯಭಿಚಾರ ಬರುವುದಿಲ್ಲ.

ಇದು ಕೆಲವರ ಆಕ್ಷೇಪ.

ಅದು ಸರಿಯಲ್ಲ. ಇಲ್ಲಿ ವ್ಯವಹಾರಶಬ್ದದಿಂದ ವಿಶಿಷ್ಟವ್ಯವಹಾರವನ್ನು ವಿವಕ್ಷಿಸುತ್ತೀರೋ ? ಅಥವಾ ಸ್ವರೂಪಮಾತ್ರವ್ಯವಹಾರವನ್ನು ವಿವಕ್ಷಿಸುತ್ತೀರೋ ?

ವ್ಯವಹಾರಶಬ್ದದಿಂದ ವಿಶಿಷ್ಟವ್ಯವಹಾರವನ್ನು ವಿವಕ್ಷಿಸುವುದಾದರೆ, ಆತ್ಮನ ಸ್ವಪ್ರಕಾಶತ್ವಾದಿವಿಶಿಷ್ಟವ್ಯವಹಾರದಲ್ಲಿ ಸ್ವಪ್ರಕಾಶತ್ವಾದಿವಿಶೇಷಣೋಪನಾಯಕವಾದ

**''ಅತ್ರಾಯಂ ಪುರುಷಃ ಸ್ವಯಂಜ್ಯೋತಿಃ''**

ಇತ್ಯಾದಿವೇದಾಂತವಾಕ್ಯಜನ್ಯವೃತ್ತಿಸಾಪೇಕ್ಷತ್ವವು ನಿಯಮೇನ ಇರುವುದರಿಂದ ಆತ್ಮನಲ್ಲಿ (ಈ ವಿಧವಾದ ದೃಶ್ಯತ್ವ ಬರುವುದರಿಂದ) ವ್ಯಭಿಚಾರ ಬರುತ್ತದೆ.

ವ್ಯವಹಾರಶಬ್ದದಿಂದ ಸ್ವರೂಪಮಾತ್ರವ್ಯವಹಾರವನ್ನು ವಿವಕ್ಷಿಸುತ್ತೇವೆ. ಸೋಪಾಧಿಕ ಆತ್ಮವಿಷಯಕ ವಿಶಿಷ್ಟವ್ಯವಹಾರದಲ್ಲಿ ಉಪಾಧ್ಯುನ್ನಾಯಕಪ್ರಮಾಣಾಪೇಕ್ಷೆ ನಿಯಮೇನ ಇದ್ದರೂ ಸಹ ಆತ್ಮನ ಸ್ವರೂಪಮಾತ್ರವ್ಯವಹಾರದಲ್ಲಿ

---

-ನಾಯಕ ಮಾನದ ಅಪೇಕ್ಷೆ ಇದ್ದರೂ ಸಹ, ಸ್ವರೂಪವ್ಯವಹಾರದಲ್ಲಿ ಸ್ವಾತಿರಿಕ್ತ ವಿಶೇಷಣೋಪನಾಯಕ ಮಾನದ ಅಪೇಕ್ಷೆ ಇಲ್ಲವಾದ್ದರಿಂದ ನಿಯತಿ ಇಲ್ಲದ ಕಾರಣ ಅತಿವ್ಯಾಪ್ತಿ ಬರುವುದಿಲ್ಲ. ಈ ರೀತಿಯಾಗಿ ದಳಕೃತ್ಯ ತಿಳಿಯಬೇಕು.

ಉಪಾಧ್ಯುನ್ನಾಯಕಪ್ರಮಾಣಾಪೇಕ್ಷೆ ಇಲ್ಲವಾದ್ದರಿಂದ ವ್ಯಭಿಚಾರ ಬರುವುದಿಲ್ಲ ಎಂಬುದಾಗಿ ಎರಡನೇ ಪಕ್ಷವನ್ನು ಆಶ್ರಯಿಸುವುದೂ ಸರಿಯಲ್ಲ. ಕಾರಣ ಇದು ಘಟಾದಿವಿಷಯದಲ್ಲಿಯೂ ಸಮಾನವಾಗಿದೆ. ಘಟಾದಿಪ್ರಪಂಚದಲ್ಲಿಯೂ ಸಹ ಘಟತ್ವಾದಿವಿಶಿಷ್ಟವ್ಯವಹಾರದಲ್ಲಿ ಮಾತ್ರ ವಿಶೇಷಣೋಪನಾಯಕಪ್ರಮಾಣಾ-ಪೇಕ್ಷಾನಿಯಮ ಇದ್ದರೂ ಸಹ ಘಟಾದಿಸ್ವರೂಪಮಾತ್ರವ್ಯವಹಾರದಲ್ಲಿ ವಿಶೇಷಣೋಪನಾಯಕಪ್ರಮಾಣಾಪೇಕ್ಷೆ ಇಲ್ಲ ಎಂಬುದಾಗಿ ಹೇಳಲು ಬರುತ್ತದೆಯಾದ್ದರಿಂದ (ಪಕ್ಷೈಕದೇಶವಾದ ಘಟಾದಿಗಳಲ್ಲಿ ಸ್ವಸ್ವರೂಪಮಾತ್ರ-ವ್ಯವಹಾರೇ ಸ್ವಾತಿರಿಕ್ತಸಂವಿದಪೇಕ್ಷಾನಿಯತಿ ರೂಪ ದೃಶ್ಯತ್ವ ಬಾರದ ಕಾರಣ) ಭಾಗಾಸಿದ್ಧಿ ಬರುತ್ತದೆ ಎಂದು

**''ಅಪಿ ಚೈವಂ ಘಟೋಽಪ್ಯಪರಾಧೀನಪ್ರಕಾಶ ಇತಿ ಭಾಗಾಸಿದ್ಧತ್ವಂ ಸ್ಯಾತ್''**

ಇತ್ಯಾದಿಯಾಗಿ ಹಿಂದಿನ ವಾಕ್ಯದಲ್ಲಿ ದೋಷ ಹೇಳಿದ್ದೇವೆ.

ಘಟದ ವಿಷಯದಲ್ಲಿ ವಿಶಿಷ್ಟವ್ಯವಹಾರದಿಂದ ಅತಿರಿಕ್ತವಾದ ಸ್ವರೂಪಮಾತ್ರವ್ಯವಹಾರ ಎನ್ನುವುದೇ ಇಲ್ಲವಲ್ಲ ? (ಹಾಗಾದರೆ ವಿಶಿಷ್ಟವ್ಯವಹಾರದಲ್ಲಿ ಸ್ವಾತಿರಿಕ್ತಸಂವಿತ್ಸಾಪೇಕ್ಷತ್ವನಿಯತಿ ಇರುವುದರಿಂದ ಭಾಗಾಸಿದ್ಧಿ ಬರುವುದಿಲ್ಲವಲ್ಲ ?) ಎಂದು ಶಂಕಿಸುವುದಾದರೆ ಅದು ಆತ್ಮನ ವಿಷಯದಲ್ಲಿಯೂ ಸಮಾನವೇ ಆಗಿದೆ. ಆತ್ಮನ ವಿಷಯದಲ್ಲಿಯೂ ಸಹ ವಿಶಿಷ್ಟವ್ಯವಹಾರದಿಂದ ಅತಿರಿಕ್ತವಾದ ಸ್ವರೂಪಮಾತ್ರವ್ಯವಹಾರ ಎನ್ನುವುದು ಇಲ್ಲವೇ ಇಲ್ಲವಾದ್ದರಿಂದ, ವಿಶಿಷ್ಟವ್ಯವಹಾರೇ ಸ್ವಾತಿರಿಕ್ತಸಂವಿತ್ಸಾಪೇಕ್ಷತಾನಿಯತಿ ರೂಪ ದೃಶ್ಯತ್ವ ಹೇತು ಆತ್ಮನಲ್ಲಿ ಬರುವುದರಿಂದ ವ್ಯಭಿಚಾರ ಬಂದೇ ಬರುತ್ತದೆ.

ಆತ್ಮನ ವಿಷಯದಲ್ಲಿ ವಿಶಿಷ್ಟವ್ಯವಹಾರದಿಂದ ಅತಿರಿಕ್ತವಾದ ಸ್ವರೂಪಮಾತ್ರವ್ಯವಹಾರ ಎನ್ನುವುದೇ ಇಲ್ಲ ಎಂಬುದಾಗಿ ಏಕೆ ಹೇಳುತ್ತೀರಿ ? ಸುಷುಪ್ತಿ-ಮೂರ್ಛಾದಿಗಳಲ್ಲಿ ಆತ್ಮವಿಷಯಕಸ್ವರೂಪಮಾತ್ರವ್ಯವಹಾರ ಇದೆಯಲ್ಲವೇ ? ಎಂದು ಶಂಕೆ ಬಂದರೆ, ''ಸುಷುಪ್ತ್ಯಾದಿಗಳಲ್ಲಿ ಆತ್ಮವಿಷಯಕಸ್ವರೂಪಮಾತ್ರವ್ಯವಹಾರ ಇದೆ'' ಎನ್ನುವುದೇ ಯಾವ ಪ್ರಮಾಣದಿಂದ ಸಿದ್ಧವಾಗಿದೆ ?

**''ಏತಾವಂತಂ ಕಾಲಂ ಸುಖಮಹಂ ಸುಪ್ತೋಽಸ್ಮಿ''**

ಎಂಬ ಉತ್ತರಕಾಲದಲ್ಲಿ ಬರುವ (ಸ್ಮರಣದಿಂದಾಗಿ) ಪರಾಮರ್ಶದಿಂದಾಗಿ ಸಿದ್ಧವಾಗುತ್ತದೆ ಎನ್ನುವುದಾದರೆ, ಆ ಪರಾಮರ್ಶಬಲದಿಂದಲೇನೇ ''ಸುಷುಪ್ತಿಯಲ್ಲಿ ಸ್ವರೂಪಮಾತ್ರವ್ಯವಹಾರ ಇಲ್ಲ. ವಿಶಿಷ್ಟವ್ಯವಹಾರವೇ ಇರುವುದು'' ಎಂದು ಸಿದ್ಧವಾಗುತ್ತದೆ.

**ಅದರ ಅಭಿಪ್ರಾಯ :-** ಸುಷುಪ್ತಿಯಿಂದ ಎಚ್ಚರಗೊಂಡ ಪುರುಷನಿಗೆ ''ಏತಾವಂತಂ ಕಾಲಂ ಸುಖಮಹಂ ಸುಪ್ತೋಽಸ್ಮಿ'' ( ಇಷ್ಟುಹೊತ್ತಿನವರೆಗೆ ನಾನು ಸುಖವಾಗಿ ಮಲಗಿದ್ದೆ ) ಎಂಬುದಾಗಿ ಸ್ಮರಣೆ ಉಂಟಾಗುತ್ತದೆ. ಉತ್ತರಕಾಲದಲ್ಲಿ ಸ್ಮೃತಿ ಬರಬೇಕಾದರೆ ತತ್ಪೂರ್ವದಲ್ಲಿ (ಸುಷುಪ್ತಿಯಲ್ಲಿ) ಸ್ಮೃತಿಕಾರಣವಾದ ಅನುಭವ ಇರಲೇಬೇಕು. ಅನುಭವ-ಸ್ಮೃತಿಗಳಲ್ಲಿ ಸಮಾನವಿಷಯಕತ್ವ ನಿಯಮ ಇರುವ ಕಾರಣ, ಉತ್ತರಕಾಲದಲ್ಲಿ ಬರುವ ಈ ಏತಾವಂತಂ ಕಾಲಂ ..... ಎಂಬ ಸ್ಮೃತಿಯು ಸುಖಕಾಲಾದಿವಿಶಿಷ್ಟವಿಷಯವಾಗಿದೆ ಎಂದಮೇಲೆ ತತ್ಪೂರ್ವದಲ್ಲಿಯೂ (ಸುಷುಪ್ತಿಯಲ್ಲಿಯೂ) ಸುಖಕಾಲಾದಿವಿಶಿಷ್ಟವಿಷಯಕ ಅನುಭವವೇ ಆಗಿರಬೇಕು. ಹಾಗಾಗಿ ಆತ್ಮನಿಗೆ ಸುಷುಪ್ತಿಯಲ್ಲಿಯೂ ವಿಶಿಷ್ಟವ್ಯವಹಾರವೇ ಇರುವುದು ಎಂದು ಸಿದ್ಧವಾಗುತ್ತದೆ.

ಹಾಗಾದರೆ - ಆತ್ಮನ ವಿಷಯದಲ್ಲಿಯೂ ವಿಶಿಷ್ಟವ್ಯವಹಾರದಿಂದ ಅತಿರಿಕ್ತವಾದ ಸ್ವರೂಪಮಾತ್ರವ್ಯವಹಾರ ಎನ್ನುವುದೇ ಇಲ್ಲವಾದ್ದರಿಂದ, ವಿಶಿಷ್ಟವ್ಯವಹಾರೇ ಸ್ವಾತಿರಿಕ್ತಸಂವಿತ್ಸಾಪೇಕ್ಷತಾನಿಯತಿ ರೂಪ ದೃಶ್ಯತ್ವಹೇತು ಆತ್ಮನಲ್ಲಿಯೂ ಬರುವುದರಿಂದ ವ್ಯಭಿಚಾರ ಬಂದೇ ಬರುತ್ತದೆ ಎಂದು ಭಾವ.

**ಟೀಕಾ :- ಅನ್ಯಸ್ತ್ವಾಹ - ವೃತ್ತಿವಿಷಯಸ್ಯಾಪ್ಯಾತ್ಮನೋಽನಾಧೇಯಾತಿಶಯತ್ವಾತ್ ಪ್ರಕಾಶರೂಪೇ ಪ್ರಕಾಶಾಂತರಾನುದಯಾತ್ ಫಲವ್ಯಾಪ್ಯತ್ವಾಭಾವೇನ ನ ದೃಶ್ಯತ್ವಮನೈಕಾಂತಿಕಮಿತಿ ।**

**ತದೇತದಸಿದ್ಧಿಪ್ರಸಂಗೇನ ಪ್ರಾಗೇವ ನಿರಸ್ತಮಿತ್ಯಲಮ್ ।**

**ಅನುವಾದ :-** ಮತ್ತೆ ಕೆಲವರು ಈ ರೀತಿ ಆಕ್ಷೇಪಿಸುತ್ತಾರೆ -

ದೃಶ್ಯತ್ವ ಎಂದರೆ ವೃತ್ತಿಜ್ಞಾನವಿಷಯತ್ವ ಎಂದು ನಾವು ಹೇಳುವುದಿಲ್ಲ. ಕಿಂತು ಫಲವ್ಯಾಪ್ಯತ್ವವೇ (ಚೈತನ್ಯಜ್ಞಾನವಿಷಯತ್ವವೇ) ದೃಶ್ಯತ್ವ ಎಂದು ಹೇಳುತ್ತೇವೆ. ಪ್ರಕೃತ

ಆತ್ಮನು ವೃತ್ತಿಜ್ಞಾನದಲ್ಲಿ ವಿಷಯನಾದರೂ ಸಹ, ಪ್ರಕಾಶರೂಪನಾದ ಆತ್ಮನಲ್ಲಿ ಮತ್ತೊಂದು ಪ್ರಕಾಶ ಹುಟ್ಟಲು ಸಾಧ್ಯವಿಲ್ಲದ ಕಾರಣ, ಆಧೇಯವಾದ ಒಂದು ಅತಿಶಯ ಆತ್ಮನಲ್ಲಿ ಇಲ್ಲವಾದ್ದರಿಂದ ಆತ್ಮನು ಫಲವ್ಯಾಪ್ಯನಾಗುವುದಿಲ್ಲ = ಚೈತನ್ಯಜ್ಞಾನದಲ್ಲಿ ವಿಷಯನಾಗುವುದಿಲ್ಲ. ಆದ್ದರಿಂದ ಫಲವ್ಯಾಪ್ಯತ್ವ ರೂಪವಾದ ದೃಶ್ಯತ್ವ ಆತ್ಮನಲ್ಲಿ ಇಲ್ಲದ ಕಾರಣ ವ್ಯಭಿಚಾರ ಬರುವುದಿಲ್ಲ ಎಂದು ಕೆಲವರು ಆಕ್ಷೇಪ.

ಅಸಿದ್ಧಿದೋಷ ಬರುವ ಕಾರಣ ಹಿಂದೆಯೇ ಈ ಆಕ್ಷೇಪವನ್ನು ನಿರಾಕರಿಸಲಾಗಿದೆಯಾದ್ದರಿಂದ ವ್ಯಭಿಚಾರದೋಷವು ವಜ್ರಲೇಪವಾಗುವ ಕಾರಣ ಈ ಒಂದು ಚರ್ಚೆ ಸಮಾಪಿತವಾಗಲಿ.

**ವಿಶೇಷ ವಿವರಣೆ :- (ಶ್ರೀನಿ ವ್ಯಾಖ್ಯಾ ವಿಚಾರಗಳು)**

ಇಲ್ಲಿ ''ಆತ್ಮನು ವೃತ್ತಿವಿಷಯನಾದರೂ ಸಹ ಫಲವ್ಯಾಪ್ಯನಲ್ಲ'' ಎಂಬ ವಿಚಾರ ಅರ್ಥವಾಗಬೇಕಾದರೆ

- ವೃತ್ತಿ
- ಫಲವ್ಯಾಪ್ಯತ್ವ
- ಆಧೇಯಾತಿಶಯಾಭಾವ

ಇತ್ಯಾದಿ ಅನೇಕ ಪಾರಿಭಾಷಿಕ ಪದಗಳ ಅರ್ಥ ಸರಿಯಾಗಿ ಆಗಬೇಕು. ಈ ವಿಷಯದಲ್ಲಿ ಪರಕೀಯರ ಪ್ರಕ್ರಿಯೆ ಏನು ? ಎನ್ನುವುದನ್ನೂ ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು. ಈ ಹಿನ್ನಲೆಯಲ್ಲಿ ಶ್ರೀಶ್ರೀನಿವಾಸತೀರ್ಥರು ತಮ್ಮ ಟಿಪ್ಪಣಿಯಲ್ಲಿ ಈ ಎಲ್ಲ ವಿಚಾರಗಳನ್ನೂ ಸುಂದರವಾಗಿ ಸಂಗ್ರಹಿಸಿ ನಿರೂಪಿಸಿದ್ದಾರೆ. ಅದನ್ನು ಸ್ವಲ್ಪ ತಿಳಿಯೋಣ.

**ಪರಕೀಯರ ಪ್ರಕ್ರಿಯೆ :-**

**ಸ್ವಚ್ಛೇಽಂತಃಕರಣೇಽಶನಿಪ್ರಸೃಮರೇ ನೇತ್ರಾದಿಮಾರ್ಗೋದ್ಗತೇ**
**ತತ್ತದ್ಬಾಹ್ಯಚಯಾತ್ಮನಾ ಪರಿಣತೇ ಬಿಂಬೀಭವಂತೀ ಚಿತಿಃ ।**
**ಏಕಾಽಪ್ಯರ್ಥಮನೋವಿಶೇಷಕವಶಾದ್ದ್ವೈತಂ ಪ್ರಪನ್ನಾ ಹರ-**
**ತ್ಯಜ್ಞಾನಂ ಪ್ರಕಟೀಕರೋತಿ ವಿಷಯಾನ್ ಜ್ಞಾತಂ ಮಯೇದಂ ತ್ವಿತಿ ॥**

 

ಎನ್ನುವುದು ಪರರ ಪ್ರಕ್ರಿಯೆಯನ್ನು ಪ್ರಕಟಿಸುವ ಪ್ರಮೇಯಕಾರಿಕೆ. ಈ ಕಾರಿಕೆಯ ಅರ್ಥ ಇಷ್ಟು:- ಸರೋವರದ ನೀರು ಕಾಲುವೆಯ ಮೂಲಕ ಹೊರಗೆ ಬಂದು ಹೊಲಗಳನ್ನು ಪ್ರವೇಶಿಸಿ ಹೊಲಗಳು ಯಾವ ಆಕಾರದಲ್ಲಿ ಇರುತ್ತವೆಯೋ ಅದೇ ಆಕಾರದಲ್ಲಿ ನಿಲ್ಲುತ್ತವೆ. ಹೇಗೋ ಅದರಂತೆಯೇ ಸಾವಯವ ತೈಜಸ ಅಂತಃಕರಣವು (ಮನಸ್ಸು) ಚಕ್ಷುರಾದಿ ಇಂದ್ರಿಯಗಳ ಮೂಲಕ ಹೊರಗೆ ಬಂದು ಘಟಾದಿ ವಿಷಯಗಳನ್ನು ವ್ಯಾಪಿಸಿ ಘಟಾದಿವಿಷಯಗಳು ಯಾವ ಆಕಾರದಲ್ಲಿ ಇರುತ್ತವೆಯೋ ಅದೇ ಆಕಾರದಲ್ಲಿ ಪರಿಣಮಿಸಿ ಇರುತ್ತದೆ. ಇದಕ್ಕೇ **ವೃತ್ತಿ** ಎಂದು ಹೆಸರು.

ಈ ವೃತ್ತಿಯಲ್ಲಿ ಜ್ಞಾತೃಚೈತನ್ಯವು ಪ್ರತಿಫಲಿತವಾಗುತ್ತದೆ. (ಕನ್ನಡಿಯಲ್ಲಿ ಪ್ರತಿಬಿಂಬವು ಪ್ರತಿಫಲನವಾಗುವಂತೆ ವೃತ್ತಿಯಲ್ಲಿ ಜ್ಞಾತೃಚೈತನ್ಯವು ಪ್ರತಿಫಲನವಾಗುತ್ತದೆ ಎಂದು ಭಾವ.) ವೃತ್ತಿಯಲ್ಲಿ ಚೈತನ್ಯಪ್ರತಿಫಲನ ಆಗದೇ ಹೋದರೆ, ಕೇವಲ ವೃತ್ತಿಯಿಂದ ವಿಷಯಾಧಿಷ್ಠಾನಚೈತನ್ಯಗತಅಜ್ಞಾನನಿವೃತ್ತಿ ಆಗುವುದಿಲ್ಲ. (ಘಟಾದಿವಿಷಯಗಳಲ್ಲಿ ಒಬ್ಬ ಚೈತನ್ಯ ಇದ್ದಾನೆ. ಅವನಲ್ಲಿ ಅಜ್ಞಾನ ಇದೆ. ಆ ಅಜ್ಞಾನದ ನಿವೃತ್ತಿ ಕೇವಲ ವೃತ್ತಿಯಿಂದ ಆಗುವುದಿಲ್ಲ.) ಕಾರಣ ಕಾಮಾಲೆ ರೋಗವಾದಾಗ ಕಾದ ಕಬ್ಬಿಣದಿಂದ ಬರೆ ಕೊಡುತ್ತಾರೆ. ಅದರಿಂದ ರೋಗನಿವೃತ್ತಿ ಆಗುತ್ತದೆ. ಅಲ್ಲಿ ಕೇವಲ ಕಬ್ಬಿಣವೂ ರೋಗನಿವರ್ತಕವಾಗುವುದಿಲ್ಲ. ಕೇವಲ ಅಗ್ನಿಯೂ ರೋಗನಿವರ್ತಕವಾಗುವುದಿಲ್ಲ. ಅಯಃಪಿಂಡಸಮಾರೂಢಅಗ್ನಿಯೇ ರೋಗನಿವರ್ತಕವಾಗುವುದು. ಅದರಂತೆಯೇ ಕೇವಲ ವೃತ್ತಿಯಾಗಲೀ ಕೇವಲ ಚೈತನ್ಯವಾಗಲೀ ಅಜ್ಞಾನನಿವರ್ತಕವಾಗುವುದಿಲ್ಲ. ಕಿಂತು ವೃತ್ತ್ಯುಪಾರೂಢಚೈತನ್ಯವೇ ಅಜ್ಞಾನನಿವರ್ತಕವಾಗುತ್ತದೆ. ಈ ವಿಚಾರವನ್ನು

**ತೃಣಾದೇರ್ಭಾಸಿಕಾಽಪ್ಯೇಷಾ ಸೂರ್ಯದೀಪ್ತಿಸ್ತೃಣಂ ದಹೇತ್ ।**
**ಸೂರ್ಯಕಾಂತಮುಪಾರುಹ್ಯ ತನ್ನ್ಯಾಯಂ ಚಿತಿ ಯೋಜಯೇತ್ ॥**

ಎಂಬುದಾಗಿ ಕಾರಿಕೆಯಲ್ಲಿ ಸಂಗ್ರಹಿಸಿ ನಿರೂಪಿಸುತ್ತಾರೆ.

ಹಾಗಾದರೆ ವೃತ್ತಿಪ್ರತಿಫಲಿತಚೈತನ್ಯವೇ ಅಜ್ಞಾನನಿವರ್ತಕವಾಗುವುದರಿಂದ, ವೃತ್ತಿಪ್ರತಿಬಿಂಬಿತಚೈತನ್ಯದಿಂದ ಘಟಾಧಿಷ್ಠಾನಚೈತನ್ಯಗತವಾದ ಅಜ್ಞಾನವು ನಿರಸ್ತವಾಗಲು, ಘಟಾದಿವಿಷಯಾಧಿಷ್ಠಾನಚೈತನ್ಯವು ಅಭಿವ್ಯಕ್ತವಾಗಿ, ಆ ವಿಷಯಾಧಿ

ಷ್ಠಾನಚೈತನ್ಯವು ವೃತ್ತಿಪ್ರತಿಫಲಿತಚೈತನ್ಯದಿಂದ ಐಕ್ಯ ಹೊಂದುತ್ತದೆ. ಅನಂತರ ''ಮಯಾ ಜ್ಞಾತೋಽಯಂ ಘಟಃ'' ಎಂಬ ಜ್ಞಾನ ಉಂಟಾಗುತ್ತದೆ.

ಇಲ್ಲಿ ವೃತ್ತಿಯು ಮುಖ್ಯವಾಗಿ ಜ್ಞಾನಶಬ್ದವಾಚ್ಯವಾಗಿಲ್ಲ. ಕಿಂತು 'ಜ್ಞಾಯತೇ ಅನಯಾ ಚೈತನ್ಯಂ' ಎಂಬ ಕರಣವ್ಯುತ್ಪತ್ತಿಯಿಂದ ಚೈತನ್ಯಜ್ಞಾನಕಾರಣವಾಗಿದ್ದರಿಂದ ಜ್ಞಾನ ಎಂದು ಔಪಚಾರಿಕವಾಗಿ ಕರೆಸಿಕೊಳ್ಳುತ್ತದೆ.

ಇನ್ನು ವೃತ್ತಿಪ್ರತಿಬಿಂಬಿತಚೈತನ್ಯದಿಂದ ಅಭಿವ್ಯಕ್ತವಾದ ಅಧಿಷ್ಠಾನಚೈತನ್ಯವೇ ''ಜ್ಞಪ್ತಿಃ ಜ್ಞಾನಂ'' ಎಂಬ ಭಾವವ್ಯುತ್ಪತ್ತಿಯಿಂದ ಮುಖ್ಯವಾಗಿ ಜ್ಞಾನಶಬ್ದವಾಚ್ಯ-ವಾಗುತ್ತದೆ. ಇಂತಹ ವೃತ್ತಿಪ್ರತಿಫಲಿತಚೈತನ್ಯಾಭಿವ್ಯಕ್ತಅಧಿಷ್ಠಾನಚೈತನ್ಯಕ್ಕೇ **ಫಲ** ಎಂದೂ ಕರೆಯುತ್ತಾರೆ. ಈ ಅಧಿಷ್ಠಾನಚೈತನ್ಯರೂಪ ಫಲಜ್ಞಾನದಲ್ಲಿ ವಿಷಯವಾದದ್ದನ್ನು **ಫಲವ್ಯಾಪ್ಯ** ಎನ್ನುತ್ತಾರೆ.

ಇದು ಪರಕೀಯರ ಪ್ರಕ್ರಿಯೆ.

ಪ್ರಕೃತದಲ್ಲಿ ಈ ವಿಧವಾದ ಫಲವ್ಯಾಪ್ಯತ್ವವು (ಅಧಿಷ್ಠಾನಚೈತನ್ಯರೂಪ ಜ್ಞಾನವಿಷಯತ್ವವು) ಆತ್ಮನಿಗೆ ಇಲ್ಲ. ಅಂದರೆ - ಘಟಾಕಾರವೃತ್ತಿಯಿಂದ (ಘಟದ ಆಕಾರದಲ್ಲಿ ವ್ಯಾಪಿಸಿದ ವೃತ್ತಿಯಿಂದ) ಆ ವೃತ್ತಿಪ್ರತಿಫಲಿತಚೈತನ್ಯದಿಂದ ಅಧಿಷ್ಠಾನಚೈತನ್ಯಗತಅಜ್ಞಾನವು ನಿರಸ್ತವಾಗಲು ಯಾವ ರೀತಿಯಾಗಿ ಘಟದಲ್ಲಿ ಚೈತನ್ಯವಿಷಯತ್ವರೂಪವಾದ ಆಧೇಯವಾದ (ಪಡೆಯಬಹುದಾದ) ಒಂದು ಅತಿಶಯವು ಉಂಟಾಗುವುದೋ ಹಾಗೆ ವೃತ್ತಿಯಿಂದ ಆತ್ಮನಲ್ಲಿ ಆಧೇಯವಾದ (ಪಡೆಯಬಹುದಾದ) ಅತಿಶಯವು ಉಂಟಾಗುವುದಿಲ್ಲ.

ಅದು ಏಕೆ ? ಘಟವು ಅಪ್ರಕಾಶರೂಪವಾದ್ದರಿಂದ ಅದರಲ್ಲಿ ಸ್ಫುರಣರೂಪ-ಚೈತನ್ಯವಿಷಯತ್ವವು ಉಂಟಾಗುತ್ತದೆ. ಆದರೆ ಆತ್ಮನು ಸ್ವಯಂ ತಾನೇ ಪ್ರಕಾಶರೂಪನಾಗಿದ್ದರಿಂದ ಅವನಲ್ಲಿ ಪ್ರಕಾಶ (ಸ್ಫುರಣ) ರೂಪಚೈತನ್ಯವಿಷಯತ್ವವು ಉಂಟಾಗಲು ಸಾಧ್ಯವಿಲ್ಲ. ಆದ್ದರಿಂದ ಆತ್ಮನಲ್ಲಿ ಸ್ಫುರಣರೂಪಚೈತನ್ಯಜ್ಞಾನವಿಷಯತ್ವ ಇಲ್ಲ.

ಹಾಗಾದರೆ ಆತ್ಮನಲ್ಲಿ ವೃತ್ತಿವಿಷಯತ್ವ ಇದ್ದರೂ ಸಹ ಫಲವ್ಯಾಪ್ಯತ್ವ (ಚೈತನ್ಯರೂಪಜ್ಞಾನವಿಷಯತ್ವ) ಇಲ್ಲವಾದ್ದರಿಂದ ದೃಶ್ಯತ್ವ ಬಾರದ ಕಾರಣ ಆತ್ಮನಲ್ಲಿ ವ್ಯಭಿಚಾರ ಬರುವುದಿಲ್ಲ ಎಂದು ಆಕ್ಷೇಪದ ಅಭಿಪ್ರಾಯ.




**ಸಿದ್ಧಾಂತ ಸಮಾಧಾನ :-**

ಈ ಆಕ್ಷೇಪ ಸರಿಯಲ್ಲ. ಏಕೆಂದರೆ - ದೃಶ್ಯತ್ವ ಎಂದರೆ ಫಲವ್ಯಾಪ್ಯತ್ವ ಎಂದು ಹೇಳುವುದಾದರೆ, ಫಲ ಎಂದರೆ ಯಾವುದು ? ಜ್ಞಾತತಾ ಎನ್ನುತ್ತೀರೋ ? ಅಥವಾ ಚೈತನ್ಯ ಎನ್ನುತ್ತೀರೋ ?

ಜ್ಞಾತತಾವೇ ಫಲ ಎಂಬ ಮೊದಲನೇ ಪಕ್ಷ ಸರಿಯಲ್ಲ. ಕಾರಣ -

**''ಜ್ಞಾನವ್ಯತಿರಿಕ್ತಜ್ಞಾತತಾಯಾಂ ಪ್ರಮಾಣಾಭಾವಾತ್''**

ಇತ್ಯಾದಿಯಾಗಿ ಪ್ರಮಾಣಲಕ್ಷಣಾದಿಗಳಲ್ಲಿ ಜ್ಞಾತತಾವನ್ನು ನಿರಾಕರಿಸಲಾಗಿದೆ. ಅಥವಾ ನಿಮ್ಮ ಪ್ರಕಾರ ಜ್ಞಾತತಾ ಇದೆ ಎಂದಾದರೂ ಸಹ ವರ್ತಮಾನಕಾಲೀನ-ಪದಾರ್ಥಗಳಲ್ಲಿ ಜ್ಞಾತತಾ ಬರಬಹುದೇ ಹೊರತು ಅತೀತ-ಅನಾಗತ ಪದಾರ್ಥಗಳಲ್ಲಿ ಜ್ಞಾತತಾವನ್ನು ನೀವೇ ಒಪ್ಪದ ಕಾರಣ, ಅತೀತ-ಅನಾಗತ ಪದಾರ್ಥರೂಪ ಪಕ್ಷೈಕದೇಶದಲ್ಲಿ ಜ್ಞಾತತಾಶ್ರಯತ್ವರೂಪ ದೃಶ್ಯತ್ವ ಬರುವುದಿಲ್ಲವಾದ್ದರಿಂದ ಭಾಗಸಿದ್ಧಿ ಬರುತ್ತದೆ. ಹೀಗೆ ನಮ್ಮ ಪ್ರಕಾರ ಸಂಪೂರ್ಣ ಅಸಿದ್ಧಿ, ಪರರ ಪ್ರಕಾರ ಭಾಗಸಿದ್ಧಿ ಬರುವುದರಿಂದ ಜ್ಞಾತತಾವೇ ಫಲ ಎನ್ನುವ ಮೊದಲನೇ ಪಕ್ಷ ಸರಿಯಲ್ಲ.

ಇನ್ನು ಚೈತನ್ಯವೇ ಫಲ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಏಕೆಂದರೆ - ಈ ಹಿಂದೆ ನಿರೂಪಿಸಲ್ಪಟ್ಟ ''ಸ್ವಚ್ಛೇಽಂತಃಕರಣೇ ...'' ಎಂಬ ಶ್ಲೋಕಾನುಸಾರವಾದ ಪ್ರಕ್ರಿಯೆ ಏನಿದೆ ಅದು ಅಪರೋಕ್ಷವೃತ್ತಿಯಲ್ಲಿ ನಡೆಯುವಂತಹದ್ದು. ಪರೋಕ್ಷವೃತ್ತಿಯಲ್ಲಿ ಈ ಪ್ರಕ್ರಿಯೆ ಅಲ್ಲ. ಪರರೂ ಸಹ ಪರೋಕ್ಷವೃತ್ತಿಯಲ್ಲಿ ಆ ಆಧೇಯವಾದ ಸ್ಫುರಣರೂಪವಾದ ಚೈತನ್ಯವನ್ನು ಅಂಗೀಕರಿಸಿಲ್ಲ. ಅಲ್ಲಿ ಪರೋಕ್ಷವೃತ್ತಿಗೇನೇ ಜ್ಞಾನತ್ವವನ್ನು ಅಂಗೀಕರಿಸುತ್ತಾರೆ. ಅಂದಮೇಲೆ ಪರೋಕ್ಷವೃತ್ತಿಯಂತೆ ಅಪರೋಕ್ಷವೃತ್ತಿಗೇನೇ ಜ್ಞಾನತ್ವವು ಉಪಪನ್ನವಾಗುವಾಗ, ಆ ವೃತ್ತಿಯಿಂದ ಆಧೇಯವಾದ ಸ್ಫುರಣರೂಪವಾದ ಅಪ್ರಾಮಾಣಿಕವಾದ ಚೈತನ್ಯವನ್ನು ಅಂಗೀಕರಿಸುವುದು ಸರಿಯಲ್ಲ. ಅಂತಹ ವೃತ್ತ್ಯುಪಾರೂಢವಾದ ಚೈತನ್ಯವೇ ಅಪ್ರಾಮಾಣಿಕವಾದ್ದರಿಂದ ಚೈತನ್ಯವಿಷಯತ್ವರೂಪದೃಶ್ಯತ್ವಹೇತು ಅಸಿದ್ಧವಾಗಿದೆ. ಆದ್ದರಿಂದ -

''ಆತ್ಮನು ವೃತ್ತಿವಿಷಯನಾದರೂ ಫಲವ್ಯಾಪ್ಯನಾಗದ ಕಾರಣ ವ್ಯಭಿಚಾರ ಇಲ್ಲ'' ಎಂಬ ಕೆಲವರ ಆಕ್ಷೇಪ ಸರಿಯಾದದ್ದಲ್ಲ ಎಂದು ಅಭಿಪ್ರಾಯ.

**ಮೂಲ :- ಜಗತೋಽಭಾವೇಽನುಮಾನಸ್ಯಾಪ್ಯಭಾವ ಇತಿ ತರ್ಕಬಾಧಿತತ್ವೇನ ಅನಧ್ಯವಸಿತಃ ।**

**ಟೀಕಾ :- ನನ್ವತ್ರ ಜಗತೋಽನಿರ್ವಚನೀಯತ್ವಂ ಸದ್ವಿವಿಕ್ತತ್ವಂ ವಾ ಸಾಧ್ಯಮ್ । ತತ್ಕಥಂ ಜಗತೋಽಭಾವ ಇತ್ಯನುವಾದಃ ? ಸತ್ಯಂ, ತಥಾಪಿ ಅನಿರ್ವಚನೀಯತ್ವಸ್ಯಾಪ್ರಸಿದ್ಧತ್ವಾತ್ ಸದ್ವಿವಿಕ್ತತ್ವಸ್ಯ ಅನಿರ್ವಚನೀಯಾ-ಸದನ್ಯತರತ್ವಾನಿಸ್ತಾರಾತ್ ಅಸತ್ವಮೇವ ಸಿದ್ಧವತ್ಕೃತ್ಯ ಅಯಮನುವಾದ ಇತ್ಯದೋಷಃ । ಜಗತಃ ಸತ್ವಾಭಾವ ಇತಿ ವಾ ವ್ಯಾಖ್ಯಾತವ್ಯಮ್ ।**

**ಅನುವಾದ :-** ಹೌದು, ''ಜಗತೋಽಭಾವೇ ಅನುಮಾನಸ್ಯಾಪ್ಯಭಾವಃ'' ಜಗತ್ತೇ ಇಲ್ಲ ಎನ್ನುವುದಾದರೆ ಅನುಮಾನವೂ ಇಲ್ಲ ಎಂಬುದಾಗಿ ಆಪಾದನೆ ಮಾಡುವುದು ಸರಿಯಲ್ಲ. ಏಕೆಂದರೆ - ಈ ರೀತಿ ಹೇಳಿದಾಗ ಜಗದಭಾವ ಎಂಬ ಆಪಾದಕದಿಂದ ಅನುಮಾನಾಭಾವವನ್ನು ಆಪಾದಿಸಿದಂತಾಗುತ್ತದೆ. ಆದರೆ ಇಲ್ಲಿ ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸುವಾಗ ಅನಿರ್ವಚನೀಯತ್ವವನ್ನಾದರೂ ಸಾಧಿಸಿ-ದಂತಾಗುತ್ತದೆ ಅಥವಾ ಸದ್ವಿವಿಕ್ತತ್ವವನ್ನಾದರೂ ಸಾಧಿಸಿದಂತಾಗುತ್ತದೆ. ಹೊರತು ಅಸತ್ವವನ್ನು ಸಾಧಿಸುತ್ತಿಲ್ಲ. ಅಂದಮೇಲೆ -

ಜಗತೋಽಭಾವೇ= ಜಗತ್ತೇ ಇಲ್ಲ ಎನ್ನುವುದಾದರೆ ಎಂಬುದಾಗಿ ಆಚಾರ್ಯರು ಹೇಗೆ ಅನುವಾದ ಮಾಡಿದರು ? ಇದು ಅಸದನುವಾದ ಆಗುತ್ತದೆಯಲ್ಲವೇ ? ಅರ್ಥಾತ್ ಜಗದಭಾವ ಎಂಬ ಆಪಾದಕವೇ ಅಸಿದ್ಧವಾಗಿದೆಯಲ್ಲವೇ ?

ಈ ರೀತಿಯಾಗಿ ಆಕ್ಷೇಪ ಬಂದರೆ, ಸತ್ಯವೇ. ನಿಮ್ಮ ಆಕ್ಷೇಪ ಅರ್ಧದಷ್ಟು ಸತ್ಯವೇ. ಆದರೂ ಸಹ ಆಚಾರ್ಯರ ಅನುವಾದ ಅಸದನುವಾದ ಅಲ್ಲ. ಅರ್ಥಾತ್ ಇಲ್ಲಿ ಆಪಾದಕಾಸಿದ್ಧಿ ಬರುವುದಿಲ್ಲ. ಏಕೆಂದರೆ ಮಿಥ್ಯಾತ್ವವನ್ನು ಸಾಧಿಸುವಾಗ, ಮಿಥ್ಯಾತ್ವ ಎಂದರೆ ಅನಿರ್ವಚನೀಯತ್ವ ಎಂದು ಹೇಳಿದರೆ, ಅನಿರ್ವಚನೀಯವಸ್ತುವೇ ಅಪ್ರಸಿದ್ಧವಾದ್ದರಿಂದ ಅಪ್ರಸಿದ್ಧವಿಶೇಷಣತಾ ಬರಬೇಕಾಗುತ್ತದೆ. ಹಾಗಾಗಿ ಮಿಥ್ಯಾತ್ವ ಎಂದರೆ ಸದ್ವಿವಿಕ್ತತ್ವ ಎಂದು ಹೇಳಬೇಕು.

ಇಲ್ಲಿ ಅಸದ್ವಿಲಕ್ಷಣಸ್ವರೂಪವನ್ನು ಉಪಮರ್ದ ಮಾಡದೇ ಸದ್ವಿವಿಕ್ತತ್ವವನ್ನು ಸಾಧ್ಯ ಮಾಡುವುದಾದರೆ ಆಗ ಅನಿರ್ವಚನೀಯತ್ವವನ್ನು ಹೇಳಿದಂತಾಗುತ್ತದೆ. ಪುನಃ

ಅಪ್ರಸಿದ್ಧವಿಶೇಷಣತಾ ಬರುತ್ತದೆ. ಹಾಗಾಗಿ ಕೇವಲ ಸದ್ವಿವಿಕ್ತತ್ವವನ್ನು ಸಾಧ್ಯ ಮಾಡುವುದಾದರೆ ಆಗ ಅಸತ್ವವನ್ನೇ ಹೇಳಿದಂತಾಗುತ್ತದೆ. ಹೀಗೆ 'ಮಿಥ್ಯಾತ್ವಂ ನಾಮ ಅಸತ್ವಂ' (ಮಿಥ್ಯಾತ್ವ ಎಂದರೆ ಅಸತ್ವ) ಎಂದು ಸಿದ್ಧವಾಗಿಟ್ಟುಕೊಂಡು

''ಜಗತೋಽಭಾವೇ = ಜಗತ್ತೇ ಇಲ್ಲ ಎನ್ನುವುದಾದರೆ''

ಎಂಬುದಾಗಿ ಆಚಾರ್ಯರು ಅನುವಾದ ಮಾಡಿರುವುದು ಸಮಂಜಸವೇ ಆಗಿದೆ. ಜಗದಭಾವರೂಪವಾದ ಆಪಾದಕವು ಸರಿಯಾಗಿಯೇ ಇದೆ.

ಅಥವಾ ' ಜಗತೋಽಭಾವೇ' ಎನ್ನುವಲ್ಲಿ ಅಭಾವ ಎಂದರೆ ಸತ್ವಾಭಾವ ಎಂದು ವ್ಯಾಖ್ಯಾನ ಮಾಡಿಕೊಂಡು, ಜಗತ್ತಿಗೆ ಸತ್ವಾಭಾವವನ್ನು ಅನಿರ್ವಚನೀಯವಾದಿಯಾದ ಪರರೂ ಅಂಗೀಕರಿಸಿದ್ದರಿಂದ, ಜಗತ್ತಿಗೆ ಸತ್ವಾಭಾವ ಹೇಳಿದರೆ ಅಸತ್ವವೇ ಬಂದಂತಾಗಿ

''ಜಗತೋಽಭಾವೇ = ಜಗತ್ತೇ ಇಲ್ಲ ಎನ್ನುವುದಾದರೆ''

ಎಂಬುದಾಗಿ ಆಚಾರ್ಯರು ಅನುವಾದ ಮಾಡಿರುವುದು ಸಮಂಜಸವೇ ಆಗಿದೆ. ಅರ್ಥಾತ್ ಜಗದಭಾವರೂಪವಾದ ಆಪಾದಕದಿಂದ ಅನುಮಾನಾಭಾವವನ್ನು ಆಪಾದಿಸುತ್ತಿರುವುದು ಸಮಂಜಸವೇ ಆಗಿದೆ.

**ಟೀಕಾ :- ತಥಾಪಿ ವ್ಯಾಪ್ತ್ಯಭಾವಾತ್ ಕಥಮಿದಮಾಪಾದನಮ್ ? ಇತಿ ಚೇನ್ನ । 'ಯದಿ ಜಗನ್ಮಿಥ್ಯಾ ಸ್ಯಾತ್ತದಾ ತದಂತರ್ಗತಮನುಮಾನಮಪಿ ಮಿಥ್ಯಾ ಸ್ಯಾತ್ । ಗಂಧರ್ವನಗರಾಂತರ್ಗತಭವನವತ್' ಇತಿ ವಾ 'ಯದಿ ದೃಶ್ಯತ್ವಂ ಜಗತಿ ವರ್ತಮಾನಂ ತನ್ಮಿಥ್ಯಾತ್ವಂ ಪ್ರತಿಪಾದಯೇತ್ತದಾ ಅನುಮಾನಸ್ಯಾಪಿ ಮಿಥ್ಯಾತ್ವಂ ಪ್ರತಿಪಾದಯೇದವಿಶೇಷಾತ್ ಅನ್ಯಥಾ ವ್ಯಭಿಚಾರಾಪತ್ತೇಃ' ಇತಿ ವಾ ಆಪಾದನಾತ್ ।**

**ಅನುವಾದ :-** ಆದರೂ ಸಹ ಈ ರೀತಿಯಾಗಿ ಆಪಾದನೆ ಮಾಡುವುದು ಸರಿಯಲ್ಲ. ಏಕೆಂದರೆ ಆಪಾದನೆ ಮಾಡಬೇಕಾದರೆ ವ್ಯಾಪ್ತಿ ಮೂಲವಾಗಿ ಇರಬೇಕು. ''ಜಗತೋಽಭಾವೇ ಅನುಮಾನಸ್ಯಾಪ್ಯಭಾವಃ'' ಎಂಬುದಾಗಿ ಆಪಾದನೆ ಮಾಡಬೇಕಾದರೆ

**''ಯತ್ರ ಜಗತೋಽಭಾವಃ ತತ್ರ ಅನುಮಾನಸ್ಯಾಭಾವಃ''**

**ಮೂಲ :- ಜಗತೋಽಭಾವೇಽನುಮಾನಸ್ಯಾಪ್ಯಭಾವ ಇತಿ ತರ್ಕಬಾಧಿತತ್ವೇನ ಅನಧ್ಯವಸಿತಃ ।**

**ಟೀಕಾ :- ನನ್ವತ್ರ ಜಗತೋಽನಿರ್ವಚನೀಯತ್ವಂ ಸದ್ವಿವಿಕ್ತತ್ವಂ ವಾ ಸಾಧ್ಯಮ್ । ತತ್ಕಥಂ ಜಗತೋಽಭಾವ ಇತ್ಯನುವಾದಃ ? ಸತ್ಯಂ, ತಥಾಪಿ ಅನಿರ್ವಚನೀಯತ್ವಸ್ಯಾಪ್ರಸಿದ್ಧತ್ವಾತ್ ಸದ್ವಿವಿಕ್ತತ್ವಸ್ಯ ಅನಿರ್ವಚನೀಯಾ-ಸದನ್ಯತರತ್ವಾನಿಸ್ತಾರಾತ್ ಅಸತ್ವಮೇವ ಸಿದ್ಧವತ್ಕೃತ್ಯ ಅಯಮನುವಾದ ಇತ್ಯದೋಷಃ । ಜಗತಃ ಸತ್ವಾಭಾವ ಇತಿ ವಾ ವ್ಯಾಖ್ಯಾತವ್ಯಮ್ ।**

**ಅನುವಾದ :-** ಹೌದು, ''ಜಗತೋಽಭಾವೇ ಅನುಮಾನಸ್ಯಾಪ್ಯಭಾವಃ'' ಜಗತ್ತೇ ಇಲ್ಲ ಎನ್ನುವುದಾದರೆ ಅನುಮಾನವೂ ಇಲ್ಲ ಎಂಬುದಾಗಿ ಆಪಾದನೆ ಮಾಡುವುದು ಸರಿಯಲ್ಲ. ಏಕೆಂದರೆ - ಈ ರೀತಿ ಹೇಳಿದಾಗ ಜಗದಭಾವ ಎಂಬ ಆಪಾದಕದಿಂದ ಅನುಮಾನಾಭಾವವನ್ನು ಆಪಾದಿಸಿದಂತಾಗುತ್ತದೆ. ಆದರೆ ಇಲ್ಲಿ ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸುವಾಗ ಅನಿರ್ವಚನೀಯತ್ವವನ್ನಾದರೂ ಸಾಧಿಸಿ-ದಂತಾಗುತ್ತದೆ ಅಥವಾ ಸದ್ವಿವಿಕ್ತತ್ವವನ್ನಾದರೂ ಸಾಧಿಸಿದಂತಾಗುತ್ತದೆ. ಹೊರತು ಅಸತ್ವವನ್ನು ಸಾಧಿಸುತ್ತಿಲ್ಲ. ಅಂದಮೇಲೆ -

ಜಗತೋಽಭಾವೇ= ಜಗತ್ತೇ ಇಲ್ಲ ಎನ್ನುವುದಾದರೆ ಎಂಬುದಾಗಿ ಆಚಾರ್ಯರು ಹೇಗೆ ಅನುವಾದ ಮಾಡಿದರು ? ಇದು ಅಸದನುವಾದ ಆಗುತ್ತದೆಯಲ್ಲವೇ ? ಅರ್ಥಾತ್ ಜಗದಭಾವ ಎಂಬ ಆಪಾದಕವೇ ಅಸಿದ್ಧವಾಗಿದೆಯಲ್ಲವೇ ?

ಈ ರೀತಿಯಾಗಿ ಆಕ್ಷೇಪ ಬಂದರೆ, ಸತ್ಯವೇ. ನಿಮ್ಮ ಆಕ್ಷೇಪ ಅರ್ಧದಷ್ಟು ಸತ್ಯವೇ. ಆದರೂ ಸಹ ಆಚಾರ್ಯರ ಅನುವಾದ ಅಸದನುವಾದ ಅಲ್ಲ. ಅರ್ಥಾತ್ ಇಲ್ಲಿ ಆಪಾದಕಾಸಿದ್ಧಿ ಬರುವುದಿಲ್ಲ. ಏಕೆಂದರೆ ಮಿಥ್ಯಾತ್ವವನ್ನು ಸಾಧಿಸುವಾಗ, ಮಿಥ್ಯಾತ್ವ ಎಂದರೆ ಅನಿರ್ವಚನೀಯತ್ವ ಎಂದು ಹೇಳಿದರೆ, ಅನಿರ್ವಚನೀಯವಸ್ತುವೇ ಅಪ್ರಸಿದ್ಧವಾದ್ದರಿಂದ ಅಪ್ರಸಿದ್ಧವಿಶೇಷಣತಾ ಬರಬೇಕಾಗುತ್ತದೆ. ಹಾಗಾಗಿ ಮಿಥ್ಯಾತ್ವ ಎಂದರೆ ಸದ್ವಿವಿಕ್ತತ್ವ ಎಂದು ಹೇಳಬೇಕು.

ಇಲ್ಲಿ ಅಸದ್ವಿಲಕ್ಷಣಸ್ವರೂಪವನ್ನು ಉಪಮರ್ದ ಮಾಡದೇ ಸದ್ವಿವಿಕ್ತತ್ವವನ್ನು ಸಾಧ್ಯ ಮಾಡುವುದಾದರೆ ಆಗ ಅನಿರ್ವಚನೀಯತ್ವವನ್ನು ಹೇಳಿದಂತಾಗುತ್ತದೆ. ಪುನಃ




ಅಪ್ರಸಿದ್ಧವಿಶೇಷಣತಾ ಬರುತ್ತದೆ. ಹಾಗಾಗಿ ಕೇವಲ ಸದ್ವಿವಿಕ್ತತ್ವವನ್ನು ಸಾಧ್ಯ ಮಾಡುವುದಾದರೆ ಆಗ ಅಸತ್ವವನ್ನೇ ಹೇಳಿದಂತಾಗುತ್ತದೆ. ಹೀಗೆ 'ಮಿಥ್ಯಾತ್ವಂ ನಾಮ ಅಸತ್ವಂ' (ಮಿಥ್ಯಾತ್ವ ಎಂದರೆ ಅಸತ್ವ) ಎಂದು ಸಿದ್ಧವಾಗಿಟ್ಟುಕೊಂಡು

''ಜಗತೋಽಭಾವೇ = ಜಗತ್ತೇ ಇಲ್ಲ ಎನ್ನುವುದಾದರೆ''

ಎಂಬುದಾಗಿ ಆಚಾರ್ಯರು ಅನುವಾದ ಮಾಡಿರುವುದು ಸಮಂಜಸವೇ ಆಗಿದೆ. ಜಗದಭಾವರೂಪವಾದ ಆಪಾದಕವು ಸರಿಯಾಗಿಯೇ ಇದೆ.

ಅಥವಾ ' ಜಗತೋಽಭಾವೇ' ಎನ್ನುವಲ್ಲಿ ಅಭಾವ ಎಂದರೆ ಸತ್ವಾಭಾವ ಎಂದು ವ್ಯಾಖ್ಯಾನ ಮಾಡಿಕೊಂಡು, ಜಗತ್ತಿಗೆ ಸತ್ವಾಭಾವವನ್ನು ಅನಿರ್ವಚನೀಯವಾದಿಯಾದ ಪರರೂ ಅಂಗೀಕರಿಸಿದ್ದರಿಂದ, ಜಗತ್ತಿಗೆ ಸತ್ವಾಭಾವ ಹೇಳಿದರೆ ಅಸತ್ವವೇ ಬಂದಂತಾಗಿ

''ಜಗತೋಽಭಾವೇ = ಜಗತ್ತೇ ಇಲ್ಲ ಎನ್ನುವುದಾದರೆ''

ಎಂಬುದಾಗಿ ಆಚಾರ್ಯರು ಅನುವಾದ ಮಾಡಿರುವುದು ಸಮಂಜಸವೇ ಆಗಿದೆ. ಅರ್ಥಾತ್ ಜಗದಭಾವರೂಪವಾದ ಆಪಾದಕದಿಂದ ಅನುಮಾನಾಭಾವವನ್ನು ಆಪಾದಿಸುತ್ತಿರುವುದು ಸಮಂಜಸವೇ ಆಗಿದೆ.

**ಟೀಕಾ :- ತಥಾಪಿ ವ್ಯಾಪ್ತ್ಯಭಾವಾತ್ ಕಥಮಿದಮಾಪಾದನಮ್ ? ಇತಿ ಚೇನ್ನ । 'ಯದಿ ಜಗನ್ಮಿಥ್ಯಾ ಸ್ಯಾತ್ತದಾ ತದಂತರ್ಗತಮನುಮಾನಮಪಿ ಮಿಥ್ಯಾ ಸ್ಯಾತ್ । ಗಂಧರ್ವನಗರಾಂತರ್ಗತಭವನವತ್' ಇತಿ ವಾ 'ಯದಿ ದೃಶ್ಯತ್ವಂ ಜಗತಿ ವರ್ತಮಾನಂ ತನ್ಮಿಥ್ಯಾತ್ವಂ ಪ್ರತಿಪಾದಯೇತ್ತದಾ ಅನುಮಾನಸ್ಯಾಪಿ ಮಿಥ್ಯಾತ್ವಂ ಪ್ರತಿಪಾದಯೇದವಿಶೇಷಾತ್ ಅನ್ಯಥಾ ವ್ಯಭಿಚಾರಾಪತ್ತೇಃ' ಇತಿ ವಾ ಆಪಾದನಾತ್ ।**

**ಅನುವಾದ :-** ಆದರೂ ಸಹ ಈ ರೀತಿಯಾಗಿ ಆಪಾದನೆ ಮಾಡುವುದು ಸರಿಯಲ್ಲ. ಏಕೆಂದರೆ ಆಪಾದನೆ ಮಾಡಬೇಕಾದರೆ ವ್ಯಾಪ್ತಿ ಮೂಲವಾಗಿ ಇರಬೇಕು. ''ಜಗತೋಽಭಾವೇ ಅನುಮಾನಸ್ಯಾಪ್ಯಭಾವಃ'' ಎಂಬುದಾಗಿ ಆಪಾದನೆ ಮಾಡಬೇಕಾದರೆ

**''ಯತ್ರ ಜಗತೋಽಭಾವಃ ತತ್ರ ಅನುಮಾನಸ್ಯಾಭಾವಃ''**

ಎಂದು ವ್ಯಾಪ್ತಿ ಇರಬೇಕು. ಆದರೆ ಈ ರೀತಿ ವ್ಯಾಪ್ತಿ ಹೇಳುವುದಕ್ಕೆ ದೃಷ್ಟಾಂತ ಯಾವುದೂ ಇಲ್ಲವಾದ್ದರಿಂದ ವ್ಯಾಪ್ತಿ ಕೂಡುವುದಿಲ್ಲ. ವ್ಯಾಪ್ತಿ ಇಲ್ಲ ಎಂದರೆ ಆಪಾದನೆ ಹೇಗೆ ಮಾಡುತ್ತೀರಿ ?

ಈ ರೀತಿಯಾಗಿ ಆಕ್ಷೇಪ ಬಂದರೆ, ಅದೂ ಸರಿಯಲ್ಲ. ಕಾರಣ -

**''ಯದಿ ಜಗತ್ ಮಿಥ್ಯಾ ಸ್ಯಾತ್ ತದಾ ತದಂತರ್ಗತಮನುಮಾನಮಪಿ ಮಿಥ್ಯಾ ಸ್ಯಾತ್ । ಗಂಧರ್ವನಗರಾಂತರ್ಗತಭವನವತ್ ।''**

''[1]ಗಂಧರ್ವನಗರವು ಮಿಥ್ಯಾ ಆಗಿದ್ದರಿಂದ ತದಂತರ್ಗತವಾದ ಭವನವೂ ಮಿಥ್ಯಾ ಆದಂತೆ, ಒಂದುವೇಳೆ ಜಗತ್ತು ಮಿಥ್ಯಾ ಆಗುವುದಾದರೆ ತದಂತರ್ಗತವಾದ ಅನುಮಾನವೂ ಮಿಥ್ಯಾ ಆಗುತ್ತದೆ''

ಎಂಬುದಾಗಿ ನಾವು ಆಪಾದನೆ ಮಾಡುತ್ತಿದ್ದೇವೆ. ಈ ರೀತಿ ಆಪಾದನೆಗೆ

**''ಯತ್ ಮಿಥ್ಯಾ ತತ್ಸಮಾನಯೋಗಕ್ಷೇಮಂ ತದಂತರ್ಗತಮಪಿ ಮಿಥ್ಯಾ । ಯಥಾ ಗಂಧರ್ವನಗರಾಂತರ್ಗತಂ ಭವನಮ್ ।''**

''ಯಾವುದು ಮಿಥ್ಯಾ ಆಗಿರುವುದೋ ತತ್ಸಮಾನಯೋಗಕ್ಷೇಮವಾದದ್ದು ಹಾಗೂ ತದಂತರ್ಗತವಾದದ್ದು ಅದೂ ಮಿಥ್ಯಾನೇ ಆಗಿರುತ್ತದೆ. ಗಂಧರ್ವನಗರವು ಮಿಥ್ಯಾ ಆಗಿದ್ದರಿಂದ ತದಂತರ್ಗತವಾದ ಭವನವೂ ಮಿಥ್ಯಾ ಆದಂತೆ''

ಎಂಬುದಾಗಿ ಸಾಮಾನ್ಯವ್ಯಾಪ್ತಿಯು ಮೂಲವಾಗಿ ಇರುವುದರಿಂದ ಆಪಾದನೆ ಸಮಂಜಸವೇ ಆಗಿದೆ.

ಅಥವಾ -

''ಯದಿ ದೃಶ್ಯತ್ವಂ ಜಗತಿ ವರ್ತಮಾನಂ ತನ್ಮಿಥ್ಯಾತ್ವಂ ಪ್ರತಿಪಾದಯೇತ್ ತದಾ ಅನುಮಾನಸ್ಯಾಪಿ ಮಿಥ್ಯಾತ್ವಂ ಪ್ರತಿಪಾದಯೇತ್ ಅವಿಶೇಷಾತ್ । ಅನ್ಯಥಾ ವ್ಯಭಿಚಾರಾಪತ್ತೇಃ ।''

---

1 ಗಂಧರ್ವನಗರ ಎಂದರೆ, ಸಾಯಂಕಾಲದಲ್ಲಿ ಮೋಡ ಮೊದಲಾದವುಗಳು ಕೆಂಪುಬಣ್ಣ ಉಳ್ಳದ್ದಾಗಿ ನಗರದ ಆಕಾರದಲ್ಲಿ ಭ್ರಾಂತಿಯಿಂದ ತೋರುತ್ತದೆ. (ಸಂಜೆಹೊತ್ತಿನಲ್ಲಿ ಕೆಂಪುಮೋಡಗಳು ವಿವಿಧ ಆಕಾರಗಳಲ್ಲಿ ಕಂಡು ಯಾವುದೋ ಅದ್ಭುತ ನಗರದಂತೆ ತೋರುತ್ತವೆ.) ಅದಕ್ಕೆ ಗಂಧರ್ವನಗರ ಎಂದು ಹೆಸರು.




''ಒಂದುವೇಳೆ ಜಗತ್ತಿನಲ್ಲಿ ಇರುವ ದೃಶ್ಯತ್ವವು ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸುವುದಾದರೆ ಆಗ ತನ್ನಲ್ಲಿಯೂ (ಅನುಮಾನದಲ್ಲಿಯೂ) ದೃಶ್ಯತ್ವ ಇರುವುದರಿಂದ = ದೃಶ್ಯತ್ವಾಧಿಕರಣತ್ವವು ಸಮಾನವಾಗಿರುವುದರಿಂದ ತನಗೂ (ಅನುಮಾನಕ್ಕೂ) ಮಿಥ್ಯಾತ್ವವನ್ನು ಸಾಧಿಸಲಿ '' ಎಂಬುದಾಗಿ ನಾವು ಆಪಾದನೆ ಮಾಡುತ್ತೇವೆ.

ತನ್ನಲ್ಲಿ (ಅನುಮಾನದಲ್ಲಿ = ದೃಶ್ಯತ್ವಹೇತುವಿನಲ್ಲಿ) ದೃಶ್ಯತ್ವ ಇದ್ದರೂ ಸಹ ಅದು ತನಗೆ (ದೃಶ್ಯತ್ವ ಹೇತುವಿಗೆ) ಮಿಥ್ಯಾತ್ವವನ್ನು ಸಾಧಿಸುವುದಿಲ್ಲ ಎಂದು ಹೇಳುವುದು ಸರಿಯಾಗುವುದಿಲ್ಲ. ಏಕೆಂದರೆ - ದೃಶ್ಯತ್ವಹೇತುವಿನಲ್ಲಿ ದೃಶ್ಯತ್ವವಿದೆ ಎಂಬುದಾಗಿ ಹೇಳಲೇಬೇಕು. (ದೃಶ್ಯತ್ವಹೇತುವಿನಲ್ಲಿ ದೃಶ್ಯತ್ವ ಇಲ್ಲದೇ ಹೋದರೆ ಹೇತುವಿನ ಜ್ಞಾನವೇ ಇಲ್ಲದಂತಾಗಿ ಹೇತುವೇ ಅಸಿದ್ಧವಾಗಬೇಕಾಗುತ್ತದೆ.) ಆದರೆ ಆ ದೃಶ್ಯತ್ವದಲ್ಲಿ ಮಿಥ್ಯಾತ್ವ ಇಲ್ಲ ಎಂದಾದರೆ, ಸಾಧ್ಯವಿಲ್ಲ ಹೇತುವಿದೆ ಎಂದಾಗುವುದರಿಂದ ವ್ಯಭಿಚಾರ ಬರಬೇಕಾಗುತ್ತದೆ.

ವ್ಯಭಿಚಾರ ಬರಲಿ, ಏನು ಸಮಸ್ಯೆ ? ಎಂದರೆ, ಹಾಗಾದರೆ ತನ್ನಲ್ಲಿಯೇ ಭಗ್ನವಾದ ವ್ಯಾಪ್ತಿ ಉಳ್ಳ ದೃಶ್ಯತ್ವವು ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸಲು ಸಮರ್ಥವಾಗುವುದಿಲ್ಲ.

ಆದ್ದರಿಂದ ''ಜಗತ್ತಿನಲ್ಲಿ ಇರುವ ದೃಶ್ಯತ್ವವು ಜಗತ್ತಿಗೇ ಮಿಥ್ಯಾತ್ವವನ್ನು ಸಾಧಿಸುವುದಾದರೆ, ಅನುಮಾನದಲ್ಲಿರುವ ದೃಶ್ಯತ್ವವು ಅನುಮಾನಕ್ಕೂ ಮಿಥ್ಯಾತ್ವವನ್ನು ಸಾಧಿಸಲಿ'' ಎಂಬುದಾಗಿ ಆಪಾದನೆ ಮಾಡುತ್ತಿರುವುದರಿಂದ ಯಾವ ಅನುಪಪತ್ತಿಯೂ ಇಲ್ಲ.

**ಟೀಕಾ :- ನನ್ವನೇನ ಅಸಿದ್ಧಿರೇವೋಕ್ತಾ ಸ್ಯಾತ್ । ಸಾ ಚ ಪ್ರಾಗೇವೋಕ್ತಾ ಇತಿ ಕಿಮನೇನ ? ನ ಚ ವಾಚ್ಯಂ ಲಿಂಗಾಭಾವಮಾತ್ರಮಸಿದ್ಧಿಃ । ಸಾಧ್ಯಲಿಂಗ-ವ್ಯಾಪ್ತೀನಾಮನುಮಾನಾಂಗಾನಾಮಭಾವೋಽತ್ರಾಪಾದ್ಯತ ಇತಿ ಭೇದ ಇತಿ । ತಥಾತ್ವೇಽಪಿ ವ್ಯಾಪ್ಯತ್ವಾಸಿದ್ಧ್ಯಾದ್ಯನಿಸ್ತಾರಾದಿತಿ ।**

**ಮೈವಮ್ । ಅನುಮಾನಾಂಗಾನಾಮುಸತ್ವಾಪಾದನಮುಖೇನ ಅಸಾಧಕತ್ವಸ್ಯಾತ್ರಾಪಾದ್ಯಮಾನತ್ವಾತ್ । ತದಿದಮುಕ್ತಂ ''ಇತಿ ತರ್ಕಬಾಧಿತತ್ವೇನ ಅನಧ್ಯವಸಿತಃ'' ಇತಿ । ನ ವಿದ್ಯತೇ ಅಧ್ಯವಸಿತಂ ಅಧ್ಯವಸಾಯಃ ಸಾಧ್ಯಸಿದ್ಧಿರ್ಯಸ್ಮಾತ್ ಸ ತಥೋಕ್ತ ಇತಿ ।**

**ಏತೇನ ಅನುಮಾನಮಿಥ್ಯಾತ್ವಂ ಪರಸ್ಯೇಷ್ಟಮೇವ । ತತ್ ಕಥಮಾಪಾದನಂ ? ಇತ್ಯಪಿ ನಿರಸ್ತಮ್ ।**

**ಅನುವಾದ :-** ಈ ರೀತಿಯಾಗಿ 'ಜಗತೋಽಭಾವೇ ಅನುಮಾನಸ್ಯಾಪ್ಯಭಾವಃ' ಎಂಬುದಾಗಿ ದೃಶ್ಯತ್ವರೂಪಹೇತ್ವಭಾವವನ್ನು ಆಪಾದನೆ ಮಾಡುವುದರಿಂದ ಅವರ ಅನುಮಾನಕ್ಕೆ ಸ್ವರೂಪಾಸಿದ್ಧಿಯನ್ನು ಹೇಳಿದಂತಾಗುತ್ತದೆ. ಆದರೆ ಆ ಅಸಿದ್ಧಿದೋಷವನ್ನು

**''ದೃಶ್ಯತ್ವಾಭಾವಾತ್ ಅಸಿದ್ಧೋ ಹೇತುಃ ।''**

ಎಂಬ ಹಿಂದಿನ ಮೂಲವಾಕ್ಯದಿಂದಲೇ ಹೇಳಿಯಾಗಿದೆ. ಅಂದಮೇಲೆ

**''ಜಗತೋಽಭಾವೇ ಅನುಮಾನಸ್ಯಾಪ್ಯಭಾವಃ''**

ಎಂಬ ಈ ಮೂಲವಾಕ್ಯದಿಂದ ಏನು ಹೆಚ್ಚಿನದನ್ನು ಹೇಳುತ್ತಿದ್ದೀರಿ ? ಹೆಚ್ಚಿನದೇನೂ ಹೇಳುತ್ತಿಲ್ಲ. ಕಿಂತು ಹಿಂದೆ ಹೇಳಿದ ಅಸಿದ್ಧಿದೋಷವನ್ನೇ ಪುನಃ ಹೇಳುತ್ತಿದ್ದೀರಿ. ಆದ್ದರಿಂದ ನಿಮಗೆ ಪುನರುಕ್ತಿದೋಷ ಬರುತ್ತದೆ.

ಹಾಗಲ್ಲ, 'ದೃಶ್ಯತ್ವಾಭಾವಾತ್ ಅಸಿದ್ಧೋ ಹೇತುಃ' ಎಂಬ ಹಿಂದಿನ ಮೂಲವಾಕ್ಯದಿಂದ ಕೇವಲ ಲಿಂಗಾಭಾವರೂಪವಾದ ಅಸಿದ್ಧಿಯನ್ನು ಹೇಳಲಾಗಿದೆ. ಇಲ್ಲಿ 'ಜಗತೋಽಭಾವೇ...' ಎಂಬ ಮೂಲವಾಕ್ಯದಲ್ಲಿ ಅನುಮಾನಪದದಿಂದ ಉಪಲಕ್ಷಣಯಾ ಸಾಧ್ಯ-ವ್ಯಾಪ್ತಿಗಳನ್ನೂ ತೆಗೆದುಕೊಂಡು, ''ಜಗತ್ತೇ ಇಲ್ಲ ಎನ್ನುವುದಾದರೆ ಜಗದಂತರ್ಗತವಾದ ಸಾಧ್ಯ-ಲಿಂಗ-ವ್ಯಾಪ್ತಿಗಳೂ ಇಲ್ಲ'' ಎಂಬುದಾಗಿ ಅನುಮಾನಕ್ಕೆ ಲಿಂಗಗಳಾದ ಸಾಧ್ಯ-ಲಿಂಗ-ವ್ಯಾಪ್ತಿ ಈ ಮೂರರ ಅಭಾವವನ್ನೂ ಹೇಳುತ್ತಿದ್ದಾರೆ. ಈ ವ್ಯತ್ಯಾಸ ಇರುವುದರಿಂದ ಪುನರುಕ್ತಿ ಬರುವುದಿಲ್ಲ ಎಂಬುದಾಗಿ ಉತ್ತರಿಸುವುದು ಸರಿಯಲ್ಲ.

ಏಕೆಂದರೆ ಹೀಗೆ ಹೇಳಿದರೂ ಸಹ ವ್ಯಾಪ್ಯತ್ವಾಸಿದ್ಧಿ-ಸ್ವರೂಪಾಸಿದ್ಧಿ-ಬಾಧ ದೋಷಗಳನ್ನು ನಿರಾಕರಿಸಿದಂತಾಗುವುದಿಲ್ಲ. ಅಂದರೆ ಅದರ ಅಭಿಪ್ರಾಯ -

**''ದೃಶ್ಯತ್ವಾಭಾವಾತ್ ಅಸಿದ್ಧೋ ಹೇತುಃ ।''**

ಎಂಬ ಹಿಂದಿನ ಮೂಲವಾಕ್ಯದಲ್ಲಿ ಲಿಂಗಾಭಾವನಿಮಿತ್ತವಾಗಿ ಸ್ವರೂಪಾಸಿದ್ಧಿ ಹೇಳಲಾಗಿದೆ. ವಿರುದ್ಧ-ಅನೈಕಾಂತಿಕತಾಗಳನ್ನು ಹೇಳುವ ಮೂಲಕ ವ್ಯಾಪ್ತ್ಯಭಾವವನ್ನು

ತೋರಿಸಿ ವ್ಯಾಪ್ಯತ್ವಾಸಿದ್ಧಿಯನ್ನೂ ಹಿಂದೆಯೇ ಹೇಳಲಾಗಿದೆ. ಸಾಧ್ಯಾಭಾವವನ್ನು ಹೇಳುವ ಮೂಲಕ ಬಾಧವನ್ನು ಮುಂದೆ ಹೇಳುವವರಿದ್ದಾರೆ. ಅಂದಮೇಲೆ ಸಾಧ್ಯ-ಲಿಂಗ-ವ್ಯಾಪ್ತಿಗಳ ಅಭಾವವನ್ನೂ ಹಿಂದೆಯೇ ಹೇಳಿದ್ದರಿಂದ, ಇಲ್ಲಿ ಮತ್ತೆ ಅದನ್ನೇ ಹೇಳಿದರೆ ನಿಮಗೆ ಪುನರುಕ್ತಿದೋಷ ಬಂದೇ ಬರುತ್ತದೆ ಎಂಬುದಾಗಿ ಆಕ್ಷೇಪ.

ಈ ಆಕ್ಷೇಪ ಸರಿಯಲ್ಲ. ಏಕೆಂದರೆ - ಸಾಧ್ಯಲಿಂಗವ್ಯಾಪ್ತಿಗಳು ಇಲ್ಲ ಎಂಬುದಾಗಿ ವ್ಯಾಪ್ತ್ಯಾದಿಗಳ ಅಭಾವವನ್ನು ಹೇಳುವುದರಲ್ಲಿ ಮಾತ್ರವೇ ಹಿಂದಿನ ವಾಕ್ಯಗಳಿಗೆ ತಾತ್ಪರ್ಯ ಇದ್ದದ್ದು. ಇಲ್ಲಿ ಮಾತ್ರ ''ಜಗತ್ತು ಇಲ್ಲ ಎಂದಾದರೆ ಅನುಮಾನವೂ ಇಲ್ಲ ಎಂದಾಗುವುದರಿಂದ ಸಾಧ್ಯಸಾಧಕವಾಗುವುದಿಲ್ಲ'' ಎಂಬುದಾಗಿ ಅನುಮಾನಾಂಗ-ಗಳಾದ ಸಾಧ್ಯ-ಲಿಂಗ-ವ್ಯಾಪ್ತಿಗಳಿಗೆ ಅಸತ್ವವನ್ನು ಆಪಾದಿಸುವ ಮೂಲಕ ಅಧಿಕವಾದ ಸಾಧ್ಯಾಸಾಧಕತ್ವವನ್ನು (ಸಾಧ್ಯಾಸಾಧಕತ್ವ ಎಂಬ ಹೆಚ್ಚಿನ ಅಂಶವನ್ನು) ಆಪಾದಿಸುತ್ತಿರುವುದರಿಂದ ಪುನರುಕ್ತಿ ಇಲ್ಲ.

ಹೌದು, ಸಾಧ್ಯಾಸಾಧಕತ್ವ ಎಂಬ ಹೆಚ್ಚಿನ ಅಂಶವನ್ನು ಆಪಾದಿಸಲಾಗುತ್ತಿದೆ ಎನ್ನುವುದು ''ಜಗತೋऽಭಾವೇ.....'' ಎಂಬ ಮೂಲದಲ್ಲಿ ತೋರುವುದಿಲ್ಲವಲ್ಲ ? ಎಂದರೆ, ಅದಕ್ಕೆ ಟೀಕಾಕೃತ್ಪಾದರು ಜ್ಞಾಪಕವನ್ನು ತೋರಿಸುತ್ತಾರೆ - **ತದಿದಮುಕ್ತಂ** ಇತ್ಯಾದಿಯಾಗಿ.

''ತರ್ಕಬಾಧಿತತ್ವೇನ'' ಎಂದು ತೃತೀಯಾವಿಭಕ್ತಿಯನ್ನು ಬಳಸುವ ಮೂಲಕ ಅನುಮಾನವು ಅಸಾಧಕವಾಗುವುದಕ್ಕೆ ವ್ಯಾಪ್ತ್ಯಾದ್ಯಭಾವವು ದ್ವಾರವಾಗಿದೆ (ಕಾರಣವಾಗಿದೆ) ಎಂದು ಹೇಳುತ್ತಾ, ವ್ಯಾಪ್ತ್ಯಾದ್ಯಭಾವವನ್ನು ಹೇಳುವುದರಲ್ಲಿ ಮಾತ್ರ ಪರ್ಯವಸಾನ ಅಲ್ಲ. ಕಿಂತು ವ್ಯಾಪ್ತ್ಯಾದ್ಯಭಾವಮೂಲಕ ಅಸಾಧಕತ್ವ ಹೇಳುವುದರಲ್ಲಿ ತಾತ್ಪರ್ಯ ಎಂಬುದನ್ನು ಸೂಚಿಸುತ್ತಿದ್ದಾರೆ.

ಅನಧ್ಯವಸಿತ ಶಬ್ದದಿಂದ ಈ ಅರ್ಥ ಹೇಗೆ ಬರುತ್ತದೆ ? ಎಂದರೆ, ''ನ ವಿದ್ಯತೇ ಅಧ್ಯವಸಿತಂ ಅಧ್ಯವಸಾಯಃ ಸಾಧ್ಯಸಿದ್ಧಿಃ ಯಸ್ಮಾತ್ ಸಃ'' ಎಂಬುದಾಗಿ ವಿಗ್ರಹ ಮಾಡಿಕೊಂಡಾಗ, ಯಾವ ಹೇತುವಿನಿಂದ ಅಧ್ಯವಸಾಯ=ಸಾಧ್ಯಸಿದ್ಧಿ ಆಗುವುದಿಲ್ಲವೋ ಅಂತಹ ಹೇತು ಅನಧ್ಯವಸಿತ=ಸಾಧ್ಯಾಸಾಧಕ ಎಂದು ಅರ್ಥ ಬರುತ್ತದೆ ಎಂದು ಭಾವ.

ಹೌದು,

''ಜಗತೋऽಭಾವೇ ಅನುಮಾನಸ್ಯಾಪ್ಯಭಾವಃ'' ''ಜಗತ್ತೇ ಇಲ್ಲ ಎನ್ನುವುದಾದರೆ ಅನುಮಾನವೂ ಇಲ್ಲ''

ಎಂಬುದಾಗಿ ಆಪಾದನೆ ಮಾಡಿದರೆ, ಈ ಆಪಾದನೆಯು ಪರರಿಗೆ ಇಷ್ಟವೇ ಆಗಿದೆ. ಪರರ ಮತದಲ್ಲಿ ಬ್ರಹ್ಮಾತಿರಿಕ್ತವಾದ ಎಲ್ಲವೂ ಮಿಥ್ಯಾ ಆಗಿದ್ದರಿಂದ ಅನುಮಾನವೂ ಜಗತ್ತಿನಲ್ಲಿ ಅಂತರ್ಗತವಾಗುವ ಕಾರಣ (ಅವರು ಅನುಮಾನಕ್ಕೂ ಮಿಥ್ಯಾತ್ವವನ್ನು ಒಪ್ಪಿದ್ದರಿಂದ) ಅನುಮಾನಾಭಾವಾಪಾದನೆಯು ಅವರಿಗೆ ಇಷ್ಟವೇ ಆಗಿದೆ. ಅನಿಷ್ಟಾಪಾದನೆ ಆಗುವುದಿಲ್ಲವಲ್ಲ ? ಎಂಬ ಶಂಕೆಗೂ ಇದರಿಂದ ಉತ್ತರ ನೀಡಿದಂತಾಗಿದೆ.

ಅಂದರೆ - ಇಲ್ಲಿ ವ್ಯಾಪ್ತ್ಯಾದ್ಯಭಾವವನ್ನು ಮಾತ್ರ ಹೇಳದೇ

''ಜಗತೋऽಭಾವೇ ಅನುಮಾನಸ್ಯಾಪ್ಯಭಾವಾತ್ ಸಾಧ್ಯಾಸಾಧಕತ್ವಂ ಸ್ಯಾತ್'' (ಜಗತ್ತೇ ಇಲ್ಲ ಎನ್ನುವುದಾದರೆ ಅನುಮಾನವೂ ಇಲ್ಲ ಎಂದಾಗುವುದರಿಂದ ಸಾಧ್ಯಾಸಾಧಕತ್ವ ಬರಬೇಕಾಗುತ್ತದೆ)

ಎಂಬುದಾಗಿ ಅನುಮಾನಕ್ಕೆ ಅಸಾಧಕತ್ವ ಎಂಬ ಹೆಚ್ಚಿನ ಅಂಶವನ್ನೂ ಆಪಾದನೆ ಮಾಡುತ್ತಿರುವುದರಿಂದ, ಪರರು ವಿಶ್ವಮಿಥ್ಯಾತ್ವವಾದಿಗಳಾದ ಕಾರಣ ಅನುಮಾನಕ್ಕೆ ಮಿಥ್ಯಾತ್ವವನ್ನು ಅಂಗೀಕರಿಸಿದ್ದರೂ ಅನುಮಾನಕ್ಕೆ ಅಸಾಧಕತ್ವವನ್ನು ಅಂಗೀಕರಿಸಿಲ್ಲವಾದ್ದರಿಂದ ಪರಾನಂಗೀಕೃತಅಸಾಧಕತ್ವಾಂಶವನ್ನು ಆಪಾದನೆ ಮಾಡುತ್ತಿರುವುದರಿಂದ ನಮ್ಮ ಈ ಆಪಾದನೆಯು (ಇಷ್ಟಾಪಾದನೆ ಆಗುವುದಿಲ್ಲ) ಅನಿಷ್ಟಾಪಾದನೆಯೇ ಆಗುತ್ತದೆ ಎಂದು ಅಭಿಪ್ರಾಯ.

**ಟೀಕಾ :- ನನ್ವೇವಂ ವ್ಯಾಖ್ಯಾನೇ ಹೇತೋಃ ಕೋ ದೋಷ ಉಕ್ತಃ ಸ್ಯಾತ್ ? ಅನಧ್ಯವಸಿತ ಇತಿ ಬ್ರೂಮಃ । ತದರ್ಥಂ 'ಇತ್ಯನಧ್ಯವಸಿತಃ' ಇತ್ಯಸ್ಯ ಆವೃತ್ತಿರ್ವ್ಯಾಖ್ಯಾಯತೇ । ತರ್ಹಿ 'ತರ್ಕಬಾಧಿತತ್ವೇನ' ಇತಿ ಕಥಂ ? ತಥಾತ್ವೇ ಕಾಲಾತ್ಯಯಾಪದಿಷ್ಟತ್ವಪ್ರಸಂಗಾದಿತಿ ಚೇನ್ನ । ಬಾಧಿತಶಬ್ದಸ್ಯ ವಿರುದ್ಧಾರ್ಥತ್ವಾತ್।**

**ಅನುವಾದ :-**

**ಮಧ್ಯಸ್ಥರು :-** ಹೌದು, ಈ ರೀತಿಯಾಗಿ ಅನಧ್ಯಸಿತ ಎಂಬ ಪದಕ್ಕೆ ಸಾಧ್ಯಾಸಾಧಕ ಎಂಬುದಾಗಿ ವ್ಯಾಖ್ಯಾನ ಮಾಡುವುದಾದರೆ, ''ತರ್ಕಬಾಧಿತತ್ವೇನ ಅನಧ್ಯವಸಿತಃ'' ಎಂಬ ಮೂಲವಾಕ್ಯದಿಂದ ಹೇತ್ವಾಭಾಸಗಳ ಮಧ್ಯದಲ್ಲಿ ಯಾವ ಹೇತ್ವಾಭಾಸವವನ್ನು (ದೋಷವನ್ನು) ಹೇಳಿದಂತಾಗುತ್ತದೆ ? (ಅನಧ್ಯವಸಿತ ಎಂಬ ಪದಕ್ಕೆ ಅನಧ್ಯವಸಿತ ಎಂಬ ಹೇತ್ವಾಭಾಸವನ್ನು ಅರ್ಥೈಸದೇ ಬೇರೆ ಅರ್ಥವನ್ನು ಮಾಡಿರುವುದರಿಂದ ಯಾವ ದೋಷವನ್ನು ಹೇಳುತ್ತಿದ್ದೀರಿ ?)

**ಸಿದ್ಧಾಂತಿ :-** ಈ ರೀತಿ ಶಂಕೆ ಬೇಡ. ಅನಧ್ಯವಸಿತ ಎಂಬ ಹೇತ್ವಾಭಾಸವನ್ನೇ ಹೇಳುತ್ತಿದ್ದೇವೆ.

**ಮಧ್ಯಸ್ಥರು :-** ಅನಧ್ಯವಸಿತ ಶಬ್ದಕ್ಕೆ ಹಿಂದೆ ಹೇಳಿದ ಪ್ರಕಾರ ಬೇರೆ ಅರ್ಥವನ್ನು ಮಾಡಿದ್ದರಿಂದ ಅನಧ್ಯವಸಿತ ಎಂಬ ಹೇತ್ವಾಭಾಸವನ್ನು ಹೇಗೆ ಹೇಳಿದಂತಾಗುತ್ತದೆ ?

**ಸಿದ್ಧಾಂತಿ :-** 'ತರ್ಕಬಾಧಿತತ್ವೇನ ಅನಧ್ಯವಸಿತಃ' ಎಂಬ ಮೂಲವಾಕ್ಯದಲ್ಲಿ 'ಇತಿ ಅನಧ್ಯವಸಿತಃ' ಎಂಬ ಪದಗಳನ್ನು ಆವೃತ್ತಿ ಮಾಡಿಕೊಳ್ಳಲಾಗುವುದು.

''ತರ್ಕಬಾಧಿತತ್ವೇನ = ತರ್ಕಬಾಧಿತವಾಗುವುದರಿಂದ ಅನಧ್ಯವಸಿತಃ = ಸಾಧ್ಯಾಸಾಧಕವಾಗುತ್ತದೆ ಇತಿ = ಆ ಕಾರಣದಿಂದ ಅನಧ್ಯವಸಿತಃ = ಅನಧ್ಯಸಿತ ಎಂಬ ಹೇತ್ವಾಭಾಸವಾಗುತ್ತದೆ''

ಎಂಬುದಾಗಿ ಯೋಗ-ರೂಢಿಗಳನ್ನು ಆಶ್ರಯಿಸಿ ಆವೃತ್ತವಾದ ವಾಕ್ಯಕ್ಕೆ ವ್ಯಾಖ್ಯಾನ ಮಾಡಿಕೊಳ್ಳಬೇಕು. ಅದರಿಂದ ಅನಧ್ಯವಸಿತ ಎಂಬ ಹೇತ್ವಾಭಾಸವನ್ನು ತೋರಿಸಿದಂತಾಗುತ್ತದೆ.

**ಮಧ್ಯಸ್ಥರು :-** ಈ ರೀತಿಯಾಗಿ ಆವೃತ್ತಿ ಮಾಡಿಕೊಂಡು ವ್ಯಾಖ್ಯಾನ ಮಾಡಿಕೊಳ್ಳುವುದಾದರೆ ''ತರ್ಕಬಾಧಿತತ್ವೇನ'' ಎನ್ನುವುದು ಹೇಗೆ ಉಪಪನ್ನವಾಗುತ್ತದೆ?

**ಸಿದ್ಧಾಂತಿ :-** 'ತರ್ಕಬಾಧಿತತ್ವೇನ' ಎನ್ನುವುದಕ್ಕೆ 'ತರ್ಕಬಾಧಿತವಾಗುವುದರಿಂದ' ಎಂದೇ ಅರ್ಥ ಹೇಳಿದರೆ ಏನು ಸಮಸ್ಯೆ ?

**ಮಧ್ಯಸ್ಥರು :-** 'ತರ್ಕರೂಪ ಬಲವತ್ಪ್ರಮಾಣದಿಂದ ಬಾಧಿತವಾಗುತ್ತದೆ' ಎಂದು ಹೇಳುವುದರಿಂದ

**''ಕಾಲಾತೀತೋ ಬಲವತಾ ಪ್ರಮಾಣೇನ ಪ್ರಬಾಧಿತಃ ।''**

ಎಂಬುದಾಗಿ ವಚನ ಇರುವ ಕಾರಣ ಕಾಲಾತ್ಯಯಾಪದಿಷ್ಟತ್ವ ಎಂಬ ಬಾಧಿತವಿಷಯತ್ವರೂಪ ಹೇತ್ವಾಭಾಸವವನ್ನು ಹೇಳಿದಂತಾಗುತ್ತದೆಯೇ ಹೊರತು ಅನಧ್ಯವಸಿತ ಎಂಬ ಹೇತ್ವಾಭಾಸವನ್ನು ಹೇಳಿದಂತಾಗುವುದಿಲ್ಲ.

**ಸಿದ್ಧಾಂತಿ :-** ಸರಿ ಹಾಗಾದರೆ ಬಾಧಿತವಿಷಯತ್ವ ಎಂಬ ಹೇತ್ವಾಭಾಸವನ್ನೇ ಹೇಳೋಣ ?

**ಮಧ್ಯಸ್ಥರು :-** 'ಪ್ರತ್ಯಕ್ಷಾದಿವಿರುದ್ಧತ್ವಾತ್' ಎಂಬ ವಾಕ್ಯದಿಂದ ಬಾಧಿತ ವಿಷಯತ್ವವನ್ನು ಮುಂದೆ ಹೇಳುತ್ತಿರುವುದರಿಂದ ಇಲ್ಲಿಯೂ ಬಾಧಿತವಿಷಯತ್ವವನ್ನೇ ಹೇಳಿದರೆ ಪುನರುಕ್ತಿ ಬರುತ್ತದೆ. ಆದ್ದರಿಂದ 'ತರ್ಕಬಾಧಿತತ್ವೇನ ಅನಧ್ಯವಸಿತಃ' ಎಂಬ ವಾಕ್ಯ ಹೇಗೆ ಉಪಪನ್ನ ?

ಈ ರೀತಿಯಾಗಿ ಪ್ರಶ್ನೋತ್ತರಗಳು ಪ್ರವೃತ್ತವಾದಾಗ, ಮಧ್ಯಸ್ಥರ ಆಕ್ಷೇಪಕ್ಕೆ ಕೊನೆಯಲ್ಲಿ ಶ್ರೀಮಟ್ಟೀಕಾಕೃತ್ಪಾದರು ಸರಿಯಾದ ಸಮಾಧಾನವನ್ನು ಹೇಳುತ್ತಾರೆ.

**ಸಿದ್ಧಾಂತಿ :-** ಇಲ್ಲಿ 'ತರ್ಕಬಾಧಿತತ್ವೇನ' ಎನ್ನುವುದಕ್ಕೆ ಬಲವತ್ಪ್ರಮಾಣಬಾಧಿತತ್ವ ಎಂಬ ಅರ್ಥವು ನಮಗೆ ಅಭಿಪ್ರೇತವಾಗಿಲ್ಲ. ಹಾಗೆ ಅರ್ಥವನ್ನು ಹೇಳಿದ್ದರೆ, ಕಾಲಾತ್ಯಯಾಪದಿಷ್ಟತ್ವ ಹೇಳಿದಂತಾಗುತ್ತದೆ ಎಂಬುದಾಗಿ ನಿಮ್ಮ ಆಕ್ಷೇಪ ಸರಿಯಾಗುತ್ತಿತ್ತು. ಪ್ರಕೃತ ನಾವು ಹಾಗೆ ಅರ್ಥ ಹೇಳುವುದಿಲ್ಲ. ಕಿಂತು ತರ್ಕಕ್ಕೆ ಪ್ರಬಲಪ್ರಮಾಣತ್ವವನ್ನು ಅಂಗೀಕರಿಸದೇ, ಬಾಧಿತ ಶಬ್ದಕ್ಕೆ ವಿರುದ್ಧ ಎಂಬ ಅರ್ಥವನ್ನು ಅಂಗೀಕರಿಸಿ,

''ತರ್ಕಬಾಧಿತತ್ವೇನ = ತರ್ಕವಿರುದ್ಧವಾಗುವುದರಿಂದ ಅನಧ್ಯವಸಿತಃ = ಅನಧ್ಯವಸಿತ ಎಂಬ ಹೇತ್ವಾಭಾಸವಾಗುತ್ತದೆ''

ಎಂಬುದಾಗಿ ನಮ್ಮ ಅಭಿಪ್ರಾಯ ಇರುವುದರಿಂದ ಕಾಲಾತ್ಯಯಾಪದಿಷ್ಟತ್ವ-ಪ್ರಸಂಗ, ಪುನರುಕ್ತಿ ಮೊದಲಾದ ಯಾವ ಅನುಪಪತ್ತಿಗೂ ಅವಕಾಶವಿಲ್ಲ.

**ಟೀಕಾ :- ನನು ಸಾಧ್ಯಾಸಾಧಕಃ ಪಕ್ಷ ಏವ ವರ್ತಮಾನೋಽನಧ್ಯವಸಿತಃ । ನ ಚಾಯಂ ತಥೇತಿ ಕಥಂ ಅನಧ್ಯವಸಿತಃ ? ಇತಿ ಚೇನ್ನ । ತಥಾ ಸತಿ ಬಾಧಿತೇ ಸತ್ಪ್ರತಿಪಕ್ಷೇ ಚ ಕೇವಲವ್ಯತಿರೇಕಿಣ್ಯತಿಪ್ರಸಂಗಾತ್ ।**

**ಸಾಧ್ಯಾಸಾಧಕತ್ವಂ ನಾಮ ತತ್ಪ್ರತೀತ್ಯಜನಕತ್ವಮ್ । ಬಾಧಿತಸತ್ಪ್ರತಿಪಕ್ಷೌ ತು ವಿಪರ್ಯಯಸಂದೇಹಜನಕಾವಿತಿ ಚೇತ್, ತಥಾ ಸತಿ ವಿರುದ್ಧಾದಿವ್ಯುದಾಸಸ್ಯ ತತ ಏವ ಸಿದ್ಧೇಃ ''ಪಕ್ಷ ಏವ ವರ್ತಮಾನಃ'' ಇತ್ಯಸ್ಯ ವೈಯರ್ಥ್ಯಪ್ರಸಂಗಾತ್।**

**ಅಸಿದ್ಧಿಪರಿಹಾರಾರ್ಥಂ ಇತಿ ಚೇನ್ನ । ಏವಕಾರವೈಯರ್ಥ್ಯಾತ್ । ತಥಾ ಚಾಸಿದ್ಧಾತಿರಿಕ್ತಃ ಸಾಧ್ಯಾಸಾಧಕ ಇತಿ ಲಕ್ಷಣಾರ್ಥಃ ಸ್ಯಾತ್ । ಸ ಚ ಸಮಃ ಪ್ರಕೃತೇಽಪೀತಿ ಕಥಂ ನಾನಧ್ಯವಸಿತಃ ?**

**ಅನುವಾದ :-** ಸಾಧ್ಯಸಾಧಕವಾಗದ, ಪಕ್ಷದಲ್ಲಿ ಮಾತ್ರ ಇರುವ ಹೇತು ಅನಧ್ಯವಸಿತ ಎನಿಸಿಕೊಳ್ಳುತ್ತದೆ. ಪ್ರಕೃತದಲ್ಲಿ ದೃಶ್ಯತ್ವಹೇತುವು ಹಾಗಾಗಿಲ್ಲ. ಅಂದರೆ ಪಕ್ಷದಲ್ಲಿ ಮಾತ್ರ ಇರುವ ಹೇತುವಾಗಿಲ್ಲ. ಕಾರಣ ದೃಶ್ಯತ್ವಹೇತುವು ಮಾಯಾವಾದದ ಪ್ರಕಾರ ಸಪಕ್ಷವಾದ ಶುಕ್ತಿರಜತಾದಿಗಳಲ್ಲಿಯೂ ಇದೆ. ಸಿದ್ಧಾಂತದ ಪ್ರಕಾರ ವಿಪಕ್ಷನಾದ ಆತ್ಮನಲ್ಲಿಯೂ ಇದೆ. ಅಂದಮೇಲೆ ದೃಶ್ಯತ್ವಹೇತು ಅನಧ್ಯವಸಿತ ಹೇಗಾಗುತ್ತದೆ ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ -

''ಸಾಧ್ಯಾಸಾಧಕಃ ಪಕ್ಷೇ ಏವ ವರ್ತಮಾನಃ ಅನಧ್ಯವಸಿತಃ'' ಎಂಬುದಾಗಿ ನೀವು ಹೇಳಿದ ಅನಧ್ಯವಸಿತದ ಲಕ್ಷಣ ಸರಿಯಾಗಿದ್ದರೆ ಆಗ ನಿಮ್ಮ ಶಂಕೆ ಸರಿಯಾಗುತ್ತಿತ್ತು. ಆದರೆ ನೀವು ಹೇಳಿದ ಅನಧ್ಯವಸಿತದ ಲಕ್ಷಣವೇ ಸರಿಯಲ್ಲ.

ಯಾಕೆ ಈ ಲಕ್ಷಣ ಸರಿಯಲ್ಲ ? ಎಂದರೆ, ಪಕ್ಷದಲ್ಲಿ ಮಾತ್ರ ಇರುವ ಹೇತು ಅನಧ್ಯವಸಿತ ಎಂದು ಹೇಳುವುದಾದರೆ -

**ಅಸಪಕ್ಷಂ ವಿಪಕ್ಷೇಭ್ಯೋ ವ್ಯಾವೃತ್ತಂ ಪಕ್ಷಭೂಮಿಷು ।**
**ಸರ್ವಾಸು ವರ್ತಮಾನಂ ಯತ್ ಕೇವಲವ್ಯತಿರೇಕಿ ತತ್ ॥**

ಎಂಬುದಾಗಿ ಹೇಳಿದಂತೆ ಕೇವಲವ್ಯತಿರೇಕಿ ಅನುಮಾನದಲ್ಲಿ ಸಪಕ್ಷ ಯಾವುದೂ ಇರುವುದಿಲ್ಲ. ವಿಪಕ್ಷ ಇದ್ದರೂ ವಿಪಕ್ಷಗಳಲ್ಲಿ ಹೇತು ಇರುವುದಿಲ್ಲ. ಪಕ್ಷದಲ್ಲಿ ಎಲ್ಲೆಡೆ ಇರುತ್ತದೆ. ಅಂತಹ ಹೇತು ಕೇವಲವ್ಯತಿರೇಕಿ ಎನಿಸುತ್ತದೆ. ಇಂತಹ ಕೇವಲವ್ಯೇತಿರೇಕಿ ಅನುಮಾನದಲ್ಲಿ 'ಪಕ್ಷೇ ಏವ ವರ್ತಮಾನತ್ವ' ಎಂಬ ಅನಧ್ಯವಸಿತದ ಲಕ್ಷಣ ಬರುವುದರಿಂದ ಅತಿವ್ಯಾಪ್ತಿ ಬರುತ್ತದೆ.

ಈ ಕೇವಲವ್ಯತಿರೇಕಿ ಅನುಮಾನದಲ್ಲಿ ಸಾಧ್ಯಾಸಾಧಕತ್ವವನ್ನು ತೋರಿಸುವುದಕ್ಕಾಗಿ ಕೇವಲ ''ಕೇವಲವ್ಯತಿರೇಕಿ ಅನುಮಾನದಲ್ಲಿ ಅತಿವ್ಯಾಪ್ತಿ ಬರುತ್ತದೆ'' ಎಂದಷ್ಟೇ ಹೇಳದೇ ''ಬಾಧಿತವಾದ ಕೇವಲವ್ಯತಿರೇಕಿ ಅನುಮಾನದಲ್ಲಿ ಅತಿವ್ಯಾಪ್ತಿ ಬರುತ್ತದೆ'' ಅಥವಾ ''ಸತ್ಪ್ರತಿಪಕ್ಷವಾದ ಕೇವಲವ್ಯತಿರೇಕಿ ಅನುಮಾನದಲ್ಲಿ ಅತಿವ್ಯಾಪ್ತಿ ಬರುತ್ತದೆ'' ಎಂಬುದಾಗಿ ಕೇವಲವ್ಯತಿರೇಕಿಗೆ ಎರಡು ವಿಶೇಷಣಗಳನ್ನು ನೀಡಿದ್ದಾರೆ.

ಆದ್ದರಿಂದ ಬಾಧಿತವಾದ ಅಥವಾ ಸತ್ಪ್ರತಿಪಕ್ಷವಾದ ಕೇವಲವ್ಯತಿರೇಕಿ ಅನುಮಾನದಲ್ಲಿ ಅತಿವ್ಯಾಪ್ತಿ ಬರುವುದರಿಂದ ''ಸಾಧ್ಯಾಸಾಧಕಃ ಪಕ್ಷ ಏವ ವರ್ತಮಾನಃ ಅನಧ್ಯವಸಿತಃ'' ಎಂಬುದಾಗಿ ನೀವು ಹೇಳಿದ ಅನಧ್ಯವಸಿತದ ಲಕ್ಷಣ ಸರಿಯಲ್ಲ.

ಬಾಧಿತವಾದ ಅಥವಾ ಸತ್ಪ್ರತಿಪಕ್ಷವಾದ ಕೇವಲವ್ಯತಿರೇಕಿಯಲ್ಲಿ ಅತಿವ್ಯಾಪ್ತಿ ಬರುವುದಿಲ್ಲ. ಏಕೆಂದರೆ ಅಲ್ಲಿ ಲಕ್ಷಣ ಬರಬೇಕಾದರೆ ಸಾಧ್ಯಾಸಾಧಕತ್ವ ಎಂಬ ಅಂಶವೂ ಬರಬೇಕು. ಆದರೆ ಬಾಧಿತ-ಸತ್ಪ್ರತಿಪಕ್ಷಗಳಲ್ಲಿ ಸಾಧ್ಯಾಸಾಧಕತ್ವ ಬರುವುದಿಲ್ಲ. ಅದು ಹೇಗೆಂದರೆ - ಸಾಧ್ಯಾಸಾಧಕತ್ವ ಎಂದರೆ ಸಾಧ್ಯಪ್ರತೀತಿಅಜನಕತ್ವ (ಸಾಧ್ಯಜ್ಞಾನವನ್ನು ಹುಟ್ಟಿಸದಿರುವುದು) ಎಂದು ಅರ್ಥ. ಪ್ರಕೃತ ಬಾಧಿತವಾದ ಹೇತು ವಿಪರ್ಯಯಜನಕವಾದರೆ (ಪಕ್ಷದಲ್ಲಿ ಸಾಧ್ಯಾಭಾವಜ್ಞಾನ ಹುಟ್ಟಿಸುವುದಾದರೆ) ಸತ್ಪ್ರತಿಪಕ್ಷವಾದ ಹೇತು ವಿರುದ್ಧೋಭಯಪರಾಮರ್ಶರೂಪವಾದ್ದರಿಂದ ಸಂದೇಹಜನಕವಾಗುತ್ತದೆ. (ಪಕ್ಷದಲ್ಲಿ ಸಾಧ್ಯವಿದೆಯೋ ಸಾಧ್ಯಾಭಾವವಿದೆಯೋ ಎಂದು ಸಂಶಯ ಹುಟ್ಟಿಸುತ್ತದೆ.) ಹೀಗೆ ವಿಪರ್ಯಯ-ಸಂದೇಹ-ಜನಕವಾಗುತ್ತವೆಯೇ ಹೊರತು ಸಾಧ್ಯಪ್ರತೀತಿಅಜನಕವಾಗುವುದಿಲ್ಲ. ಅಂದಮೇಲೆ ಸಾಧ್ಯಾಸಾಧಕತ್ವ ಎಂಬ ಅಂಶ ಬರುವುದಿಲ್ಲವಾದ್ದರಿಂದ ಕೇವಲವ್ಯತಿರೇಕಿ ಅನುಮಾನದಲ್ಲಿ ಅತಿವ್ಯಾಪ್ತಿ ಹೇಗೆ ಬರುತ್ತದೆ ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ - ಸಾಧ್ಯಾಸಾಧಕತ್ವ ಎನ್ನುವುದಕ್ಕೆ ಸಾಧ್ಯಪ್ರತೀತ್ಯಜನಕತ್ವ ಎಂದು ಅರ್ಥ ವಿವಕ್ಷಿಸುವುದು ಸರಿಯಲ್ಲ.

ಯಾಕೆ ? ಸಾಧ್ಯಾಸಾಧಕತ್ವ ಎನ್ನುವುದಕ್ಕೆ ಸಾಧ್ಯಪ್ರತೀತ್ಯಜನಕತ್ವ ಎಂಬ ಅರ್ಥ ಯಾಕೆ ಸರಿಯಲ್ಲ ? ಎಂದರೆ, ಹಾಗೆ ಅರ್ಥ ಹೇಳಿದರೆ ಅನಧ್ಯವಸಿತ ಲಕ್ಷಣದಲ್ಲಿ ''ಪಕ್ಷೇ ಏವ ವರ್ತಮಾನತ್ವ' ಎಂಬ ವಿಶೇಷಣಕ್ಕೆ ವೈಯರ್ಥ್ಯ ಬರಬೇಕಾಗುತ್ತದೆ.

**ಆದರ ಅಭಿಪ್ರಾಯ :-** ''ಸಾಧ್ಯಾಸಾಧಕಃ ಪಕ್ಷೇ ಏವ ವರ್ತಮಾನೋ ಹೇತುಃ ಅನಧ್ಯವಸಿತಃ'' ಎಂಬ ಅನಧ್ಯವಸಿತಲಕ್ಷಣದಲ್ಲಿ

**'ಸಾಧ್ಯಾಸಾಧಕಃ ಅನಧ್ಯವಸಿತಃ'**

ಎಂದಷ್ಟೇ ಹೇಳಿದರೆ ವಿರುದ್ಧಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ವಿರುದ್ಧಾದಿ ಹೇತ್ವಾಭಾಸಗಳು ಸಾಧ್ಯಾಸಾಧಕವಾದ್ದರಿಂದ ಅತಿವ್ಯಾಪ್ತಿ. ಆ ಅತಿವ್ಯಾಪ್ತಿಪರಿಹಾರಕ್ಕಾಗಿ

**'ಪಕ್ಷೇ ಏವ ವರ್ತಮಾನಃ'**

ಎಂಬ ಅಂಶವನ್ನೂ ಹೇಳಬೇಕು. ವಿರುದ್ಧಾದಿಗಳು ಸಾಧ್ಯಾಸಾಧಕವಾದರೂ ಪಕ್ಷೇ ಏವ ವರ್ತಮಾನವಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಇಲ್ಲ.

ಈ ರೀತಿಯಾಗಿ ನೀವು ಪದಕೃತ್ಯ ಹೇಳಬೇಕು. ಆದರೆ ಅದು ಸರಿಯಾಗುವುದಿಲ್ಲ. ಏಕೆಂದರೆ - ಸಾಧ್ಯಾಸಾಧಕತ್ವ ಎಂದರೆ ಸಾಧ್ಯಪ್ರತೀತ್ಯಜನಕತ್ವ ಎಂದು ಅರ್ಥ ವಿವಕ್ಷಿಸುವುದಾದರೆ ಆಗ ವಿರುದ್ಧಾದಿಗಳಲ್ಲಿ ಅತಿವ್ಯಾಪ್ತಿಪ್ರಸಕ್ತಿಯೇ ಇಲ್ಲ. ಕಾರಣ - ವಿರುದ್ಧ-ಬಾಧಿತಹೇತುಗಳು ವಿಪರೀತಪ್ರತೀತಿಜನಕವಾಗಿವೆ, ಅನೈಕಾಂತಿಕ-ಸತ್ಪ್ರತಿಪಕ್ಷಗಳು ಸಂದೇಹರೂಪಪ್ರತೀತಿಜನಕವಾಗಿವೆ. ಅಂತೂ ವಿರುದ್ಧಾದಿಗಳು ಸಾಧ್ಯಪ್ರತೀತ್ಯಜನಕವಾಗಿಲ್ಲ. ಅಂತೆಯೇ ವಿರುದ್ಧಾದಿಗಳಲ್ಲಿ ಅತಿವ್ಯಾಪ್ತಿ ಬರುವುದೇ ಇಲ್ಲ. ಅಂದಮೇಲೆ ಸಾಧ್ಯಾಸಾಧಕ=ಸಾಧ್ಯಪ್ರತೀತ್ಯಜನಕ ಪದದಿಂದಲೇನೇ ವಿರುದ್ಧಾದಿಗಳಲ್ಲಿ ಅತಿವ್ಯಾಪ್ತಿಪರಿಹಾರ ಆಗುವುದರಿಂದ

**''ಪಕ್ಷೇ ಏವ ವರ್ತಮಾನಃ''**

ಎಂಬ ವಿಶೇಷಣವು ವ್ಯರ್ಥವೇ ಆಗಬೇಕಾಗುತ್ತದೆ. ಆದ್ದರಿಂದ ಸಾಧ್ಯಾಸಾಧಕತ್ವ ಎನ್ನುವುದಕ್ಕೆ ಸಾಧ್ಯಪ್ರತೀತ್ಯಜನಕತ್ವ ಎಂದು ಅರ್ಥ ಹೇಳುವುದು ಸರಿಯಾಗುವುದಿಲ್ಲ.

ಅದು ಹಾಗಲ್ಲ. 'ಪಕ್ಷೇ ಏವ ವರ್ತಮಾನಃ' ಎಂಬ ವಿಶೇಷಣ ವ್ಯರ್ಥವಲ್ಲ. ಏಕೆಂದರೆ - ಕೇವಲ 'ಸಾಧ್ಯಾಸಾಧಕಃ ಅನಧ್ಯವಸಿತಃ' ಎಂದಷ್ಟೇ ಹೇಳಿದರೆ

**'ಶಬ್ದಃ ನಿತ್ಯಃ ಚಾಕ್ಷುಷತ್ವಾತ್'**

ಎಂಬ ಅಸಿದ್ಧಹೇತುವಿನಲ್ಲಿ ಅತಿವ್ಯಾಪ್ತಿ ಬರುತ್ತದೆ. ಚಾಕ್ಷುಷತ್ವವು ನಿತ್ಯತ್ವರೂಪಸಾಧ್ಯಪ್ರತೀತಿಜನಕವಾಗಿಲ್ಲವಾದ್ದರಿಂದ ಅತಿವ್ಯಾಪ್ತಿ. ಆದ್ದರಿಂದ 'ಪಕ್ಷೇ

ಏವ ವರ್ತಮಾನಃ' ಎಂಬ ವಿಶೇಷಣ ಬೇಕು. ಚಾಕ್ಷುಷತ್ವಹೇತು ಪಕ್ಷದಲ್ಲಿ ಮಾತ್ರ ವರ್ತಮಾನವಾಗಿಲ್ಲವಾದ್ದರಿಂದ (ಪಕ್ಷ ಬಿಟ್ಟು ಘಟಾದಿಗಳಲ್ಲಿಯೂ ಇರುವುದರಿಂದ) ಅತಿವ್ಯಾಪ್ತಿಪರಿಹಾರವಾಗುತ್ತದೆ. ಹೀಗೆ ಅತಿವ್ಯಾಪ್ತಿಪರಿಹಾರಕವಾದ್ದರಿಂದ 'ಪಕ್ಷೇ ಏವ ವರ್ತಮಾನಃ' ಎಂಬ ವಿಶೇಷಣ ಸಾರ್ಥಕವಾಗಿದೆ ಎಂಬುದಾಗಿ ಶಂಕೆ ಬಂದರೆ, ಅದೂ ಸರಿಯಲ್ಲ. ಕಾರಣ - ಹಾಗೆ ಅತಿವ್ಯಾಪ್ತಿಪರಿಹಾರ ಉದ್ದೇಶವಾಗಿದ್ದರೆ 'ಪಕ್ಷೇ ವರ್ತಮಾನಃ' ಎಂಬುದಾಗಿ ಹೇಳಿದರೂ (ಪಕ್ಷದಲ್ಲಿ ಇರಬೇಕು ಎಂದಷ್ಟೇ ಹೇಳಿದರೂ) ಅತಿವ್ಯಾಪ್ತಿ ಪರಿಹಾರವಾಗುವಾಗ 'ಏವ' ಶಬ್ದವು ವ್ಯರ್ಥವಾಗಬೇಕಾಗುತ್ತದೆ.

ಹಾಗಾದರೆ ಏವಕಾರ ಬಿಟ್ಟುಬಿಡೋಣ ಎಂದರೆ, ಹಾಗಾದರೆ -

**''ಅಸಿದ್ಧಾತಿರಿಕ್ತಃ ಸಾಧ್ಯಾಸಾಧಕಃ ಅನಧ್ಯವಸಿತಃ''**

ಎಂಬುದಾಗಿ ಲಕ್ಷಣ ಮಾಡಿದಂತಾಗುತ್ತದೆ. ಈ ಲಕ್ಷಣವು ಪ್ರಕೃತ ದೃಶ್ಯತ್ವಹೇತುವಿನಲ್ಲಿಯೂ ಸಮಾನವಾಗಿದೆಯಾದ್ದರಿಂದ ದೃಶ್ಯತ್ವಹೇತು ಅನಧ್ಯವಸಿತ ಏಕೆ ಆಗುವುದಿಲ್ಲ ?

**ಅದರ ಅಭಿಪ್ರಾಯ :-** 'ಸರ್ವಂ ಅನಿತ್ಯಂ ಸತ್ವಾತ್' ಎನ್ನುವುದು ಅನಧ್ಯವಸಿತಕ್ಕೆ ಉದಾಹರಣೆ. ಅಲ್ಲಿ ಎಲ್ಲವೂ ಪಕ್ಷವಾದ್ದರಿಂದ ದೃಷ್ಟಾಂತ ಯಾವುದೂ ಇಲ್ಲದ ಕಾರಣ (ಹೇತು ಸಾಧ್ಯಸಹಚರಿತವಾಗದ ಕಾರಣ) ಸತ್ವಹೇತು ಸಾಧ್ಯಪ್ರತೀತ್ಯಜನಕವಾಗಿದೆ. ಪ್ರಕೃತ ದೃಶ್ಯತ್ವಹೇತು ಅಸತ್ ಆಗಿದ್ದರಿಂದ (ಜಗತ್ತು ಇಲ್ಲ ಎಂದಮೇಲೆ ಜಗದಂತರ್ಗತವಾದ ದೃಶ್ಯತ್ವಹೇತುವೂ ಇಲ್ಲ ಎಂದಾಗುವುದರಿಂದ) ಸಾಧ್ಯಪ್ರತೀತ್ಯಜನಕವಾಗಿದೆ. ಹೀಗೆ ಉಪಪಾದಕ ಭಿನ್ನಭಿನ್ನವಾಗಿದ್ದರೂ ಸಹ (ಅಲ್ಲಿ ದೃಷ್ಟಾಂತಾಭಾವ - ಇಲ್ಲಿ ಅಸತ್ವ ಹೀಗೆ ಉಪಪಾದಕ ಬೇರೆ ಬೇರೆ ಆಗಿದ್ದರೂ ಸಹ) ಸಾಧ್ಯಪ್ರತೀತ್ಯಜನಕತ್ವ ಎನ್ನುವುದು ಸತ್ವಹೇತು - ದೃಶ್ಯತ್ವಹೇತು ಎರಡರಲ್ಲಿಯೂ ಸಮಾನವಾಗಿದೆ. ಇನ್ನು ಆ ದೃಶ್ಯತ್ವಹೇತು ಅಸಿದ್ಧ ಅಲ್ಲ ಎಂದು ನೀವೇ ಒಪ್ಪಿದ್ದೀರಿ. ಹಾಗಾದರೆ -

**''ಅಸಿದ್ಧಾತಿರಿಕ್ತತ್ವೇ ಸತಿ ಸಾಧ್ಯಪ್ರತೀತ್ಯಜನಕತ್ವರೂಪಸಾಧ್ಯಾಸಾಧಕತ್ವ''**

ಎಂಬ ಅನಧ್ಯವಸಿತದ ಲಕ್ಷಣ ಪ್ರಕೃತ ದೃಶ್ಯತ್ವಹೇತುವಿನಲ್ಲಿಯೂ ಇರುವುದರಿಂದ ದೃಶ್ಯತ್ವಾನುಮಾನವು ಅನಧ್ಯವಸಿತವಾಗಿದೆ ಎನ್ನುವುದು

**''ಜಗತೋಽಭಾವೇಽನುಮಾನಸ್ಯಾಪ್ಯಭಾವ ಇತಿ ತರ್ಕಬಾಧಿತತ್ವೇನ ಅನಧ್ಯವಸಿತಃ''**

ಎಂಬ ಮೂಲವಾಕ್ಯದ ಅಭಿಪ್ರಾಯವಾಗಿದೆ.

**ಟೀಕಾ :- ಅಸಿದ್ಧಿಬಹಿರ್ಭಾವೋಽಸ್ಯ ಕಥಂ ? ಇತಿ ಚೇತ್ । ಇತ್ಥಮ್ । ಯದಾ ವಾದಿಪ್ರತಿವಾದಿನೋರನ್ಯತರರೀತ್ಯಾ ಲಿಂಗಾಭಾವಸ್ತದಾಽಸಿದ್ಧಿಃ । ಯದಾ ಸಾಮರ್ಥ್ಯವಿಘಟನಂ ತದಾ ಅನಧ್ಯವಸಿತ ಇತಿ ಭೇದಃ । ಪ್ರಕೃತೇ ತರ್ಕಸ್ಯಾಸಿದ್ಧಿಪುರಸ್ಕಾರೇಣ ಪ್ರವೃತ್ತೇರ್ದೋಷದ್ವಯಮಪಿ । ನ ಚೈವಂ ಸರ್ವತ್ರೇತ್ಯಸಂಕೀರ್ಣತಾ ಚ ಸಿದ್ಧೇತಿ ।**

**ಅನುವಾದ :-** ಹಾಗಾದರೆ ಈ ಅನಧ್ಯವಸಿತತ್ವರೂಪವಾದ ದೋಷವು ಅಸಿದ್ಧಿದೋಷದಿಂದ ಭಿನ್ನವಾಗುವುದಾದರೂ ಹೇಗೆ ? ಅಂದರೆ - ಅಸಿದ್ಧವಾದ ಚಾಕ್ಷುಷತ್ವಹೇತುವಿನಲ್ಲಿ ಹಾಗೂ ಅನಧ್ಯವಸಿತವಾದ ಸತ್ವಹೇತುವಿನಲ್ಲಿ ಎರಡರಲ್ಲಿಯೂ ಸಾಧ್ಯಪ್ರತೀತ್ಯಜನಕತ್ವ ಎಂಬ ಸಾಧ್ಯಾಸಾಧಕತ್ವವು ಸಮಾನವಾಗಿರುವುದರಿಂದ ಅನಧ್ಯವಸಿತತ್ವದೋಷವು ಅಸಿದ್ಧಿದೋಷದಿಂದ ಹೇಗೆ ಭಿನ್ನವಾಗುತ್ತದೆ ? (ಅನಧ್ಯವಸಿತತ್ವ-ಅಸಿದ್ಧಿದೋಷಗಳಲ್ಲಿ ವ್ಯತ್ಯಾಸವೇನು ?)

ಈ ರೀತಿಯಾಗಿ ಶಂಕೆ ಬಂದರೆ, ಶ್ರೀಮಟ್ಟೀಕಾಕೃತ್ಪಾದರು ಆ ಅನಧ್ಯವಸಿತತ್ವ-ಅಸಿದ್ಧಿದೋಷಗಳಲ್ಲಿ ವ್ಯತ್ಯಾಸವನ್ನು ತೋರಿಸುತ್ತಾರೆ - ಯದಾ ಎಂದು.

ವಾದಿ-ಪ್ರತಿವಾದಿ ಇಬ್ಬರ ಪ್ರಕಾರವಾಗಿಯೂ ಲಿಂಗ ಇಲ್ಲ ಎಂದಾದರೆ ಅಥವಾ ವಾದಿ-ಪ್ರತಿವಾದಿ ಇಬ್ಬರಲ್ಲಿ ಒಬ್ಬರ ಪ್ರಕಾರವಾಗಿಯಾದರೂ ಲಿಂಗ ಇಲ್ಲ ಎಂದಾದರೆ ಆಗ ಅಸಿದ್ಧಿದೋಷ. ಇನ್ನು ಲಿಂಗ ಇದ್ದರೂ ಸಹ ವ್ಯಾಪ್ತಿವಿಘಟನ ಇದ್ದರೆ ಆಗ ಅನಧ್ಯವಸಿತತ್ವದೋಷ.

'ಶಬ್ದಃ ನಿತ್ಯಃ ಚಾಕ್ಷುಷತ್ವಾತ್' ಎನ್ನುವಲ್ಲಿ ಪಕ್ಷವಾದ ಶಬ್ದದಲ್ಲಿ ಉಭಯವಾದಿರೀತ್ಯಾ ಚಾಕ್ಷುಷತ್ವಹೇತು ಇಲ್ಲವಾದ್ದರಿಂದ ಅಸಿದ್ಧಿದೋಷ ಬರುತ್ತದೆ. ಇನ್ನು 'ಸರ್ವಂ ಅನಿತ್ಯಂ ಸತ್ವಾತ್' ಎನ್ನುವಲ್ಲಿ ಸತ್ವಹೇತುವು ಪಕ್ಷವಾದ ಎಲ್ಲ ಪದಾರ್ಥಗಳಲ್ಲಿ ಇದ್ದರೂ ಸಹ ದೃಷ್ಟಾಂತ ಇಲ್ಲದ ಕಾರಣ ವ್ಯಾಪ್ತಿವಿಘಟನ ಇರುವುದರಿಂದ ಅನಧ್ಯವಸಿತತ್ವದೋಷ ಬರುತ್ತದೆ ಎಂದು ತಿಳಿಯಬೇಕು. ಹಾಗಾದರೆ ಪಕ್ಷಧರ್ಮತಾ ಇಲ್ಲದ ಕಾರಣ ಪ್ರತೀತ್ಯಜನಕವಾಗುವುದು ಅಸಿದ್ಧಿಯಾದರೆ, ಲಿಂಗ

ಇದ್ದರೂ ಸಹ ವ್ಯಾಪ್ತಿ ಇಲ್ಲದ ಕಾರಣ ಪ್ರತೀತ್ಯಜನಕವಾಗುವುದು ಅನಧ್ಯವಸಿತತ್ವ. ಈ ರೀತಿಯಾಗಿ ಅಸಿದ್ಧಿ-ಅನಧ್ಯವಸಿತತ್ವ ದೋಷಗಳಲ್ಲಿ ವ್ಯತ್ಯಾಸ ತಿಳಿಯಬೇಕೆನ್ನುವುದು ಪರಿಹಾರದ ಅಭಿಪ್ರಾಯ.

ಪ್ರಕೃತದಲ್ಲಿ ದೃಶ್ಯತ್ವಾನುಮಾನದಲ್ಲಿ ಅಸಿದ್ಧಿ-ಅನಧ್ಯವಸಿತತ್ವ ಎಂಬ ಎರಡು ದೋಷಗಳೂ ಬರುತ್ತವೆ. ಹೇಗೆಂದರೆ -

**''ಜಗತೋಽಭಾವೇ ಅನುಮಾನಸ್ಯ = ದೃಶ್ಯತ್ವಸ್ಯ, ತದಂಗಭೂತಾಯಾಃ ವ್ಯಾಪ್ತೇಶ್ಚ ಅಭಾವಃ''**

(ಜಗತ್ತು ಇಲ್ಲ ಎಂದಾದರೆ ಅನುಮಾನವೂ ಇಲ್ಲ. ಅಂದರೆ ದೃಶ್ಯತ್ವ ಹೇತುವೂ ಇಲ್ಲ, ಅದಕ್ಕೆ ಅಂಗವಾದ ವ್ಯಾಪ್ತಿಯೂ ಇಲ್ಲ)

ಎಂಬ ತರ್ಕವು ಅಸಿದ್ಧಿಮೂಲಕವಾಗಿ ಪ್ರವೃತ್ತವಾಗಿರುವುದರಿಂದ, ದೃಶ್ಯತ್ವಹೇತುವಿನಲ್ಲಿ ಲಿಂಗಾಭಾವನಿಮಿತ್ತಅಸಿದ್ಧಿಪ್ರಯುಕ್ತ ಅಸಾಧಕತ್ವವೂ ಇದೆ. ವ್ಯಾಪ್ತ್ಯಭಾವಪ್ರಯುಕ್ತ ಅಸಾಧಕತ್ವವೂ ಇದೆ. ಹಾಗಾಗಿ ದೃಶ್ಯತ್ವಾನುಮಾನದಲ್ಲಿ ಅಸಿದ್ಧಿ - ಅನಧ್ಯವಸಿತತ್ವ ಎಂಬ ಎರಡು ದೋಷಗಳೂ ಬರುತ್ತವೆ ಎಂದು ಅಭಿಪ್ರಾಯ.

ಹಾಗಾದರೆ ಅಸಿದ್ಧಿರಹಿತವಾದ ಅನಧ್ಯವಸಿತತ್ವದೋಷಕ್ಕೆ ಅಸಂಕೀರ್ಣವಾದ ಉದಾಹರಣೆ ಯಾವುದೂ ಇಲ್ಲವಾದ್ದರಿಂದ ಅಸಿದ್ಧಿ-ಅನಧ್ಯವಸಿತತ್ವ ಎರಡರಲ್ಲಿಯೂ ಸಾಂಕರ್ಯ ಬರುತ್ತದೆಯಲ್ಲವೇ ? ಎಂಬುದಾಗಿ ಶಂಕಿಸುವುದೇ ಬೇಡ.

ದೃಶ್ಯತ್ವಾನುಮಾನದಲ್ಲಿ ಲಿಂಗಸ್ವರೂಪಕ್ಕೆ ಅಸತ್ವವನ್ನು ಹೇಳದ ಹೊರತು ಅನಧ್ಯವಸಿತತ್ವವು ಸಿದ್ಧಿಸುವುದಿಲ್ಲ. ಹಾಗಾಗಿ ಲಿಂಗಸ್ವರೂಪಕ್ಕೆ ಅಸತ್ವ (ಅಸಿದ್ಧಿ) ಹಾಗೂ ಅನಧ್ಯವಸಿತತ್ವ ಎರಡೂ ದೋಷಗಳೂ ಪ್ರಸಕ್ತವಾಗಿವೆ. ಆದರೆ - 'ಸರ್ವಂ ಅನಿತ್ಯಂ ಸತ್ವಾತ್' ಎನ್ನುವಲ್ಲಿ ಲಿಂಗಸ್ವರೂಪಕ್ಕೆ ಅಸತ್ವವನ್ನು ಹೇಳಿಯೇ ಅನಧ್ಯವಸಿತತ್ವವನ್ನು ಹೇಳಬೇಕು ಎಂದೇನಿಲ್ಲ. ಸತ್ವರೂಪವಾದ ಲಿಂಗಸ್ವರೂಪ ಸತ್ ಆದರೂ ವ್ಯಾಪ್ತ್ಯಭಾವಪ್ರಯುಕ್ತ ಅನಧ್ಯವಸಿತತ್ವವನ್ನು ಹೇಳಲಾಗುತ್ತದೆ. ಹೀಗಾಗಿ ಅಸಿದ್ಧಿ - ಅನಧ್ಯವಸಿತತ್ವಗಳಲ್ಲಿ ಸಾಂಕರ್ಯ ಪ್ರಸಕ್ತಿ ಇಲ್ಲ ಎಂದು ಅಭಿಪ್ರಾಯ.

**ಟೀಕಾ :- ನನು ಕಥಮಸತ್ಯಸ್ಯಾಸಾಧಕತ್ವಂ ? ತಥಾ ಸತಿ ಧೂಮಾಭಾಸಸ್ಯಾಪಿ ಸಾಧಕತ್ವಪ್ರಸಂಗಾದಿತಿ ಬ್ರೂಮಃ । ಅಥ ಧೂಮಾಭಾಸಸ್ಯಾಸಾಧಕತಾ**

 

**ನಾಸತ್ತ್ವಾತ್ । ಅಪಿ ತು ಅವ್ಯಾಪ್ತತ್ವಾತ್ । ಬಹುಲೋರ್ಧ್ವತ್ವಾದಿವತ್ ಆಭಾಸವಿವೇಕಸ್ಯಾಪಿ ವ್ಯಾಪ್ತ್ಯುಪಯೋಗಾದಿತಿ ಮನ್ಯೇತ । ತದಾ ವಕ್ತವ್ಯಂ, ಕಿಮೇವಂ ಲೋಕಾನುಭವಾತ್ ಕಲ್ಪ್ಯತೇ ? ಉತಾಸತೋಽಪಿ ಸಾಧಕತ್ವಾಭಿಮಾನಾತ್ ?**

**ನ ಪ್ರಥಮಃ । ತದಭಾವಾತ್ । ಲೌಕಿಕಾ ಹಿ 'ಮಹಾಹ್ರದೋಽಗ್ನಿಮಾನ್ ಧೂಮವತ್ತ್ವಾತ್' ಇತಿ ಪ್ರಯುಕ್ತೇ ಅಸಿದ್ಧಿಮುದ್ಭಾವಯಂತಿ । ನ ದ್ವಿತೀಯಃ । ನಿರ್ಮೂಲತ್ವಾತ್ ।**

**ಅಸತ್ಯಸ್ಯಾಪಿ ಪ್ರತಿಬಿಂಬಾದೇಃ ಬಿಂಬಾದಿಸಿದ್ಧ್ಯಾವಂಗತೋಪಲಂಭಾನ್ನೇತಿ ಚೇನ್ನ । ಪ್ರತಿಬಿಂಬಾದ್ಯಸತ್ಯತಾಽಸಿದ್ಧೇರನ್ಯತ್ರೋಪಪಾದಿತತ್ವಾತ್ ।**

**ಅನುವಾದ :-**

**ಪೂರ್ವಪಕ್ಷೀ :-** 'ಜಗತೋಽಭಾವೇ ಅನುಮಾನಸ್ಯಾಪ್ಯಭಾವಃ' ಎಂಬ ವಾಕ್ಯದಿಂದ ದೃಶ್ಯತ್ವಹೇತುವಿಗೆ ಅಸತ್ತ್ವವನ್ನು ಆಪಾದಿಸುವ ಮೂಲಕ ಅಸಾಧಕತ್ವವನ್ನು ಹೇಳುವುದು ಸರಿಯಲ್ಲ. ಕಾರಣ - ಅಸತ್ ಆದದ್ದಕ್ಕೆ ಸಾಧಕತ್ವ ಇಲ್ಲ ಎಂದು ಏಕೆ ಹೇಳಬೇಕು ? ದೃಶ್ಯತ್ವಹೇತು ಅಸತ್ ಆದರೂ ಮಿಥ್ಯಾತ್ವಸಾಧಕವಾಗಲಿ ?

**ಸಿದ್ಧಾಂತೀ :-** ಅಸತ್ ಆದದ್ದಕ್ಕೂ ಸಾಧಕತ್ವವನ್ನು ಅಂಗೀಕರಿಸುವುದಾದರೆ, ಬಾಷ್ಪಾರೋಪಿತವಾದ ಧೂಮವೂ ಸಹ ಹ್ರದದಲ್ಲಿ ವಹ್ನಿಸಾಧಕವಾಗಲಿ ಎಂಬ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಅಸತ್‌ಗೆ ಸಾಧಕತ್ವ ಇಲ್ಲ.

**ಪೂರ್ವಪಕ್ಷೀ :-** ಧೂಮಾಭಾಸವು (ಬಾಷ್ಪಾರೋಪಿತಧೂಮವು) ಸಾಧಕವಲ್ಲ ನಿಜ. ಆದರೆ ಅದು ಅಸತ್ ಆದ್ದರಿಂದ ಸಾಧಕವಲ್ಲ ಎಂದಲ್ಲ. ಕಿಂತು ವ್ಯಾಪ್ತಿಶೂನ್ಯವಾದ್ದರಿಂದ ಅದು ಅಸಾಧಕ.

ಅದು ಹೇಗೆಂದರೆ - ಕೇವಲ 'ಯತ್ರ ಧೂಮಃ ತತ್ರ ವಹ್ನಿಃ' ಎಂಬುದಾಗಿ ಧೂಮಮಾತ್ರದಿಂದ (ಅವಿಶೇಷಿತಧೂಮದಿಂದ) ವಹ್ನಿಯನ್ನು ಸಾಧಿಸಲು ಹೊರಟರೆ, ಶಾಂತವಾದ ಅಗ್ನಿಯುಳ್ಳ ಸ್ಥಳದಲ್ಲಿಯೂ ಧೂಮವು ಇರುವುದರಿಂದ (ಅಂತಹ ಸ್ಥಳದಲ್ಲಿ ವಹ್ನಿ ಇಲ್ಲ. ಆದರೆ ಧೂಮ ಇದೆಯಾದ್ದರಿಂದ) ವ್ಯಭಿಚಾರ ಬರುತ್ತದೆ. ಹಾಗಾಗಿ ಕೇವಲ ಧೂಮವು ವಹ್ನಿಸಾಧಕವಾಗುವುದಿಲ್ಲ. ಆದ್ದರಿಂದ 'ಯತ್ರ

ಬಹುಲೋರ್ಧ್ವತ್ವಾದಿವಿಶಿಷ್ಟಃ ಧೂಮಃ ತತ್ರ ಅಗ್ನಿಃ' ಎಂಬುದಾಗಿ ಬಹುಲೋರ್ಧ್ವತ್ವಾದಿಗಳನ್ನು ವಿವಕ್ಷಿಸಿ (ಶಾಂತಾಗ್ನಿಸ್ಥಳದಲ್ಲಿ ಕೇವಲ ಧೂಮ ಇದ್ದರೂ ಬಹುಲೋರ್ಧ್ವತ್ವಾದಿವಿಶಿಷ್ಟಧೂಮವು ಇಲ್ಲದ ಕಾರಣ ವ್ಯಭಿಚಾರ ಇಲ್ಲ) ಬಹುಲೋರ್ಧ್ವತ್ವಾದಿವಿಶಿಷ್ಟಧೂಮವು ವಹ್ನಿಸಾಧಕ ಎಂದು ಹೇಳಬೇಕು. ಬಹಲೋರ್ಧ್ವತ್ವಾದಿಗಳೂ ವ್ಯಾಪ್ತ್ಯುಪಯೋಗಿಯಾಗಿವೆ ಎಂದು ಹೇಳಬೇಕು.

ಹೇಗೋ ಅದರಂತೆಯೇ ಧೂಮಾಭಾಸವು ವಹ್ನಿಸಾಧಕ ಎಂದು ಹೇಳಿದರೆ ವಹ್ನಿ ಇಲ್ಲದ ಹ್ರದದಲ್ಲಿ ಧೂಮಾಭಾಸ ಇರುವುದರಿಂದ ವ್ಯಭಿಚಾರ ಬರುತ್ತದೆ. ಹಾಗಾಗಿ ಧೂಮಾಭಾಸವು ವಹ್ನಿಸಾಧಕವಾಗುವುದಿಲ್ಲ. ಆದ್ದರಿಂದ

**'ಯತ್ರ ಅನಾಭಾಸೋ ಧೂಮಃ ತತ್ರ ಅಗ್ನಿಃ''**

ಎಂಬುದಾಗಿ ಆಭಾಸವಿವಿಕ್ತತ್ವವನ್ನೂ ವಿವಕ್ಷಿಸಿ ಅನಾಭಾಸಧೂಮವು ವಹ್ನಿಸಾಧಕ ಎಂದು ಹೇಳಬೇಕು. ಅರ್ಥಾತ್ ಆಭಾಸವಿವಿಕ್ತತ್ವವೂ ವ್ಯಾಪ್ತ್ಯುಪಯೋಗಿ ಎಂಬುದಾಗಿ ಹೇಳಬೇಕಾಗುತ್ತದೆ. ಆದ್ದರಿಂದ ಬಾಷ್ಪಾರೋಪಿತವಾದ ಧೂಮವೂ ವಹ್ನಿಸಾಧಕವಾಗಲಿ ಎಂಬ ಅತಿಪ್ರಸಂಗ ಇಲ್ಲ.

**ಸಿದ್ಧಾಂತೀ :-** ಆಭಾಸವಿವೇಕವೂ ವ್ಯಾಪ್ತ್ಯುಪಯೋಗಿ ಎಂಬುದನ್ನು ಲೋಕಾನುಭವದಿಂದ ಕಲ್ಪಿಸಿ ಹೇಳುತ್ತಿದ್ದೀರೋ ? ಅಥವಾ ಅಸತ್‌ಗೂ ಸಾಧಕತ್ವ ಇದೆ ಎಂಬ ಅಭಿಮಾನದಿಂದ ಹಾಗೆ ಹೇಳುತ್ತಿದ್ದೀರೋ ?

ಲೋಕಾನುಭವದಿಂದ ಹಾಗೆ ಹೇಳುತ್ತೇವೆ ಎಂಬ ಮೊದಲನೇ ಪಕ್ಷ ಸರಿಯಲ್ಲ. ಕಾರಣ - ಆ ವಿಧವಾಗಿ ಲೋಕಾನುಭವವೇ ಇಲ್ಲ. ಏಕೆಂದರೆ,

**'ಮಹಾಹ್ರದಃ ಅಗ್ನಿಮಾನ್ ಧೂಮವತ್ವಾತ್'**

ಎಂಬುದಾಗಿ ಯಾರಾದರೂ ಪ್ರಯೋಗ ಮಾಡಿದರೆ ಲೌಕಿಕರು (ಜನರು) ಅಸಿದ್ಧಿಯನ್ನೇ ಹೇಳುತ್ತಾರೆ. (ಧೂಮ ಏವಾಸೌ ನ ಭವತಿ = ಬಾಷ್ಪಾರೋಪಿತವಾದ ಧೂಮವು ವಾಸ್ತವಿಕವಾಗಿ ಧೂಮವೇ ಅಲ್ಲ ಎಂಬುದಾಗಿ ಉತ್ತರ ಹೇಳುತ್ತಾರೆಯೇ ಹೊರತು 'ಆಭಾಸವಿವೇಕವೂ ವ್ಯಾಪ್ತ್ಯುಪಯೋಗಿಯಾಗಿದೆ. ಪ್ರಕೃತ ಆಭಾಸವಿವೇಕ ಇಲ್ಲ' ಎಂಬುದಾಗಿ ಯಾರೂ ಉತ್ತರಿಸುವುದಿಲ್ಲ.) ಆದ್ದರಿಂದ ಆ ವಿಧವಾದ ಲೋಕಾನುಭವ ಇಲ್ಲ.

ಇನ್ನು ಅಸತ್‌ಗೂ ಸಾಧಕತ್ವ ಇದೆ ಎಂಬ ಅಭಿಮಾನದಿಂದ ಹೇಳುವ ಎರಡನೇ ಪಕ್ಷವೂ ಸರಿಯಲ್ಲ. ಕಾರಣ - ಅಸತ್‌ಗೂ ಕಾರಣತ್ವ ಇದೆ ಎಂಬ ನಿಮ್ಮ ಅಭಿಮಾನವೇ ನಿರ್ಮೂಲವಾಗಿದೆ.

ಹಾಗಾದರೆ -

- ಅಸತ್‌ಗೆ ಸಾಧಕತ್ವವು ಸಿದ್ಧವಾದರೆ, ಆಗ ಧೂಮಾಭಾಸವೂ ಸಾಧಕವಾಗಲಿ ಎಂದು ಆಪಾದನೆ ಮಾಡಿದಾಗ ಆಭಾಸವಿವಿಕ್ತತ್ವವಿಶೇಷಣವು ವ್ಯಾಪ್ಯುಪಯೋಗಿಯಾಗಿದೆ ಎಂದು ಸಿದ್ಧವಾಗುತ್ತದೆ.
- ಆಭಾಸವಿವಿಕ್ತತ್ವವಿಶೇಷಣವು ವ್ಯಾಪ್ಯುಪಯೋಗಿಯಾಗಿದೆ ಎಂದು ಸಿದ್ಧವಾದರೆ, ಧೂಮಾಭಾಸವೂ ಸಾಧಕವಾಗಲಿ ಎಂಬ ಆಪಾದನರೂಪ ಅತಿಪ್ರಸಂಗ ಇಲ್ಲವಾದ್ದರಿಂದ ಅಸತ್‌ಗೆ ಸಾಧಕತ್ವವು ಸಿದ್ಧವಾಗುತ್ತದೆ.

ಈ ರೀತಿಯಾಗಿ ಅನ್ಯೋನ್ಯಾಶ್ರಯದೋಷ ಬರುತ್ತದೆ ಎಂದು ಅಭಿಪ್ರಾಯ.

**ಪೂರ್ವಪಕ್ಷಿ :-** 'ಅಯಂ ಪ್ರದೇಶಃ ಬಿಂಬವಾನ್ ಪ್ರತಿಬಿಂಬವತ್ತ್ವಾತ್' ಎಂಬುದಾಗಿ ಪ್ರತಿಬಿಂಬವು ಅಸತ್ ಆದರೂ ಸಹ ಬಿಂಬಸಾಧಕವಾದದ್ದು ಕಂಡಿದೆಯಲ್ಲವೇ ? ಅದರಂತೆಯೇ ಅಸತ್ ಆದ ಸ್ವಾಪ್ನಪದಾರ್ಥಗಳು ಶುಭಾಶುಭಸಾಧಕವಾದದ್ದು ಕಂಡಿದೆಯಲ್ಲವೇ ?

ಅಂದಮೇಲೆ ''ದೃಶ್ಯತ್ವಹೇತು ಅಸತ್ ಆದ್ದರಿಂದ ಸಾಧಕವಲ್ಲ'' ಎಂದು ಹೇಳುವುದು ಸರಿಯಲ್ಲ ?

**ಸಿದ್ಧಾಂತೀ :-** ಛಾಯೆಯಂತೆ (ನೆರಳಿನಂತೆ), ಪ್ರತಿಧ್ವನಿಯಂತೆ, ಸೂರ್ಯನ ಸಮೀಪದಲ್ಲಿ ಪ್ರತಿಸೂರ್ಯದಂತೆ ಪ್ರತಿಬಿಂಬವು ಸತ್ಯವೇ ಆಗಿದೆ. ಅದರಂತೆ ಸ್ವಾಪ್ನಪದಾರ್ಥಗಳು ವಾಸನೋಪಾದಾನಕವಾದ್ದರಿಂದ ಸತ್ಯವೇ ಆಗಿವೆ ಎನ್ನುವುದನ್ನು 'ವಿಷ್ಣುತತ್ತ್ವನಿರ್ಣಯ' ಮೊದಲಾದ ಗ್ರಂಥಗಳಲ್ಲಿ ಚೆನ್ನಾಗಿ ಪ್ರಮಾಣಬದ್ಧವಾಗಿ ಉಪಪಾದನೆ ಮಾಡಲಾಗಿದೆ.

ಆದ್ದರಿಂದ ಸತ್ಯವಾದ ಪ್ರತಿಬಿಂಬಕ್ಕೇ ಬಿಂಬಸಾಧಕತ್ವ ಕಂಡಿರುವುದು. ಸತ್ಯವಾದ ಸ್ವಾಪ್ನಪದಾರ್ಥಗಳಿಗೇನೇ ಶುಭಾಶುಭಸಾಧಕತ್ವ ಕಂಡಿರುವುದು. ಹೊರತು ಅಸತ್‌ಗೆ ಸಾಧಕತ್ವ ಎಲ್ಲೂ ಕಂಡಿಲ್ಲ. ಅಂತೆಯೇ ಅಸತ್ ಆದ ದೃಶ್ಯತ್ವವು ಮಿಥ್ಯಾತ್ವಸಾಧಕ-ವಾಗುವುದಿಲ್ಲ.

**ಟೀಕಾ :- ಸವಿತೃಸುಷಿರಾದಿನಾ ಅನಿಷ್ಟಾನುಮಾನಂ ಕಥಂ ? ಇತಿ ಚೇನ್ನ । ತತ್ರಾಪಿ ತದ್‌ಜ್ಞಾನಸ್ಯೈವ ಸಾಧಕತ್ವಾತ್ ।**

**ಜ್ಞೇಯಭೇದಾನವಚ್ಛಿನ್ನಸ್ಯ ಜ್ಞಾಮಾತ್ರಸ್ಯಾತಿಪ್ರಸಂಗಿತ್ವಾತ್ ತದವಚ್ಛಿನ್ನಸ್ಯ ಸಿದ್ಧ್ಯಂಗತಾಯಾಂ ತಸ್ಯಾಪ್ಯಂಗತ್ವಮಿತಿ ಚೇತ್ । ನ । ದೋಷವಶಾತ್ ಸತ್ಯತದ್ವಿಷಯಜ್ಞಾನಸದೃಶಸ್ಯ ಜ್ಞಾನಸ್ಯಾಂಗತಾಂಗೀಕಾರಾತ್ ।**

**ಅನುವಾದ :-** ಅಸತ್‌ಗೆ ಸಾಧಕತ್ವ ಇಲ್ಲ ಎಂದು ಹೇಗೆ ಹೇಳುತ್ತೀರಿ ? ಏಕೆಂದರೆ 'ನ ಚಿರಮಿವ ಜೀವಿಷ್ಯತೀತಿ ವಿದ್ಯಾತ್' ಎಂಬುದಾಗಿ ಶ್ರುತಿಯು ಹೇಳುವಂತೆ ಸೂರ್ಯನಲ್ಲಿ ಸುಷಿರ (ಛಿದ್ರ) ಕಂಡರೆ ಅದು ಮರಣರೂಪ ಅನಿಷ್ಟಕ್ಕೆ ಸೂಚಕವಾಗುತ್ತದೆ. ವಾಸ್ತವಿಕವಾಗಿ ಸೂರ್ಯನಲ್ಲಿ ಸುಷಿರ ಇಲ್ಲವಾದ್ದರಿಂದ ಆ ಸವಿತೃಸುಷಿರವು ಅಸತ್. ಪ್ರಕೃತದಲ್ಲಿ ದೃಶ್ಯತ್ವವು ಅಸತ್ ಆದ್ದರಿಂದ ಅದು ಮಿಥ್ಯಾತ್ವಸಾಧಕವಾಗುವುದಿಲ್ಲ ಎನ್ನುವುದಾದರೆ ಅಸತ್ ಆದ ಸವಿತೃಸುಷಿರವು ಅನಿಷ್ಟ(ಸೂಚಕ)ಸಾಧಕ ಹೇಗಾಗುತ್ತದೆ ? ನೀವೂ ಸಹ ಅಸತ್ ಆದ ಸವಿತೃಸುಷಿರಕ್ಕೆ ಅನಿಷ್ಟಸೂಚಕತ್ವವನ್ನು ಒಪ್ಪಿದ್ದೀರಲ್ಲವೇ ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ ಅಲ್ಲಿಯೂ ಸಹ ಸವಿತೃಸುಷಿರವು ಅನಿಷ್ಟಸಾಧಕವಾಗಿಲ್ಲ. ಕಿಂತು ಸವಿತೃಸುಷಿರಜ್ಞಾನವೇ ಅನಿಷ್ಟಸಾಧಕವಾಗಿದೆ. ಆದ್ದರಿಂದಲೇ ಶ್ರುತಿಯಲ್ಲಿ -

**''ಅಥಾಪಿ ಯತ್ರ ಛಿದ್ರ ಇವಾದಿತ್ಯೋ ದೃಶ್ಯತೇ''**

ಎಂಬುದಾಗಿ ದೃಶಿಗ್ರಹಣ ಮಾಡಲಾಗಿದೆ. (ಆದಿತ್ಯನಲ್ಲಿ ಛಿದ್ರ ಇದ್ದಂತೆ ತೋರಿದರೆ ಎಂಬುದಾಗಿ ಜ್ಞಾನವನ್ನು ಹೇಳಲಾಗಿದೆ.) ಸವಿತೃಸುಷಿರ ಅಸತ್ ಆದರೂ ಅದರ ಜ್ಞಾನ (ಸವಿತೃಸುಷಿರಜ್ಞಾನ) ಸತ್ಯವೇ ಆದ್ದರಿಂದ ಸತ್ ಆದದ್ದಕ್ಕೇನೇ ಸಾಧಕತ್ವ ಇರುವುದು.

ಇದರ ಮೇಲೆ ಆಕ್ಷೇಪ ಮಾಡುತ್ತಾರೆ. ಸವಿತೃಸುಷಿರ ಎಂಬ ವಿಷಯವಿಶೇಷದಿಂದ ಅವಚ್ಛಿನ್ನವಾಗದ ಜ್ಞಾನವು (ಜ್ಞಾನತ್ವೇನ ಜ್ಞಾನವು) ಅನಿಷ್ಟಸಾಧಕ ಎಂದು ಹೇಳುವುದಾದರೆ ಘಟಾದಿಜ್ಞಾನಗಳೂ ಅನಿಷ್ಟಸಾಧಕವಾಗಲಿ ಎಂದು ಅತಿಪ್ರಸಂಗ ಬರುತ್ತದೆ. ಆದ್ದರಿಂದ ಸವಿತೃಸುಷಿರ ಎಂಬ ವಿಷಯವಿಶೇಷದಿಂದ ಅವಚ್ಛಿನ್ನವಾದ ಜ್ಞಾನವೇ ಅನಿಷ್ಟಸಾಧಕ ಎಂದು ಹೇಳಬೇಕು. ಹಾಗಾದರೆ -




**ಅವಚ್ಛಿನ್ನಸ್ಯ ಯದ್ಭವತಿ ತತ್ ಅವಚ್ಛೇದಕಸ್ಯಾಪಿ ಭವತಿ ।**

ಎಂಬ ನಿಯಮ ಪ್ರಕಾರ ವಿಷಯಾವಚ್ಛಿನ್ನವಾದ ಜ್ಞಾನಕ್ಕೆ ಅನಿಷ್ಟಸಾಧಕತ್ವ ಹೇಳಿದರೆ ಅವಚ್ಛೇದಕವಾದ ವಿಷಯಕ್ಕೂ (ಅಸತ್ ಆದ ಸವಿತೃಸುಷಿರಕ್ಕೂ) ಅನಿಷ್ಟಸಾಧಕತ್ವ ಬಂದಂತೆಯೇ ಆಗುತ್ತದೆಯಲ್ಲವೇ ?

ಈ ರೀತಿಯಾಗಿ ಆಕ್ಷೇಪ ಮಾಡುವುದು ಸರಿಯಲ್ಲ. ಕಾರಣ ಸತ್ಯಸುಷಿರಜ್ಞಾನದಿಂದ ಸದೃಶವಾದ ಯಾವ ಅಸತ್ಯಸುಷಿರಜ್ಞಾನವಿದೆಯೋ ಅದಕ್ಕೇನೇ ಅಂಗತ್ವವನ್ನು = ಅನಿಷ್ಟಸಾಧಕತ್ವವನ್ನು ಅಂಗೀಕರಿಸುತ್ತೇವೆ.

**ವಿಶೇಷ ವಿವರಣೆ :-**

ಪೂರ್ವಪಕ್ಷಿಗಳು ಮಾಡಿದ ಆಕ್ಷೇಪದ ಅಭಿಪ್ರಾಯ ಇಷ್ಟಿದೆ :- ಸವಿತೃಸುಷಿರಜ್ಞಾನವೇ ಅನಿಷ್ಟಸಾಧಕವಾಗಿದೆ ಎಂಬುದಾಗಿ ಹೇಳುವುದಾದರೆ, ನಾವು ಪ್ರಶ್ನಿಸುತ್ತೇವೆ - ವಿಷಯಾನವಚ್ಛಿನ್ನವಾದ ಜ್ಞಾನ (ಜ್ಞಾನತ್ವೇನ ಜ್ಞಾನ) ಅನಿಷ್ಟಸಾಧಕ ಎಂದು ಹೇಳುತ್ತೀರೋ ? ಅಥವಾ ವಿಷಯಾವಚ್ಛಿನ್ನವಾದ ಜ್ಞಾನ ಅನಿಷ್ಟಸಾಧಕ ಎಂದು ಹೇಳುತ್ತೀರೋ ?

ವಿಷಯಾನವಚ್ಛಿನ್ನವಾದ ಜ್ಞಾನ (ಜ್ಞಾನತ್ವೇನ ಜ್ಞಾನ) ಅನಿಷ್ಟಸಾಧಕ ಎಂದು ಹೇಳುವುದಾದರೆ ಘಟಾದಿಜ್ಞಾನಗಳೂ ಜ್ಞಾನವೇ ಆದ್ದರಿಂದ ಘಟಾದಿಜ್ಞಾನಗಳೂ ಅನಿಷ್ಟಸಾಧಕವಾಗಲಿ ಎಂದು ಅತಿಪ್ರಸಂಗ ಬರುತ್ತದೆ.

ಇನ್ನು ವಿಷಯಾವಚ್ಛಿನ್ನವಾದ ಜ್ಞಾನಕ್ಕೆ ಅನಿಷ್ಟಸಾಧಕತ್ವವನ್ನು ಹೇಳುವುದಾದರೆ 'ಅವಚ್ಛಿನ್ನಸ್ಯ ಯತ್ ಭವತಿ ಅವಚ್ಛೇದಕಸ್ಯಾಪಿ ತತ್ ಭವತಿ' ಎಂಬ ನಿಯಮವು 'ಲಂಬಕರ್ಣಮಾನಯ' ಇತ್ಯಾದಿ ಸ್ಥಳಗಳಲ್ಲಿ ಕಂಡಿದ್ದರಿಂದ (ಲಂಬಕರ್ಣವಿಶಿಷ್ಟನಾದ ವ್ಯಕ್ತಿಯನ್ನು ಕರೆತಂದಾಗ ಲಂಬವಾದ ಕರ್ಣಗಳಲ್ಲಿಯೂ ಆನಯನಕ್ರಿಯೆ ಕಂಡಿದ್ದರಿಂದ) ಪ್ರಕೃತ ಈ ನಿಯಮ ಪ್ರಕಾರ ಅವಚ್ಛೇದಕವಾದ ವಿಷಯಕ್ಕೂ (ಸವಿತೃಸುಷಿರಕ್ಕೂ) ಅನಿಷ್ಟಸಾಧಕತ್ವ ಬಂದಂತಾಯಿತು.

ಇದು ಪೂರ್ವಪಕ್ಷಿಗಳ ಆಕ್ಷೇಪ.

ಈ ಆಕ್ಷೇಪಕ್ಕೆ 'ವಿಷಯಾನವಚ್ಛಿನ್ನಜ್ಞಾನ ಅನಿಷ್ಟಸಾಧಕ' 'ವಿಷಯಾವಚ್ಛಿನ್ನಜ್ಞಾನ ಅನಿಷ್ಟಸಾಧಕ' ಎಂಬ ಎರಡೂ ಪಕ್ಷಗಳನ್ನು ಅಂಗೀಕರಿಸಿ ಸಮಾಧಾನ ಹೇಳುತ್ತಾರೆ.

**ಪಕ್ಷ 1) ವಿಷಯಾನವಚ್ಛಿನ್ನ ಜ್ಞಾನ ಅನಿಷ್ಟಸಾಧಕ**

ವಿಷಯಾನವಚ್ಛಿನ್ನವಾದ ಸುಷಿರಜ್ಞಾನವೇ ಅನಿಷ್ಟಸಾಧಕ ಎಂದು ಅಂಗೀಕರಿಸುತ್ತೇವೆ.

ಹಾಗಾದರೆ ಸುಷಿರಜ್ಞಾನಭಿನ್ನವಾದ ಘಟಾದಿಜ್ಞಾನವೂ ಅನಿಷ್ಟಸಾಧಕವಾಗಲಿ ಎಂದು ಅತಿಪ್ರಸಂಗ ಬರುತ್ತದೆಯಲ್ಲವೇ ? ಎಂದರೆ, ಅತಿಪ್ರಸಂಗ ಬರುವುದಿಲ್ಲ. ಹೇಗೆಂದರೆ-

**ಸತ್ಯಸುಷಿರಜ್ಞಾನಂ, ಅಸುಷಿರಜ್ಞಾನಾತ್ ಸ್ವತ ಏವ ವ್ಯಾವೃತ್ತಂ, ಅಸುಷಿರಜ್ಞಾನ-ಜನಿತಾರ್ಥಕ್ರಿಯಾವಿಲಕ್ಷಣಾರ್ಥಕ್ರಿಯಾಕಾರಿತ್ವಾತ್, ಯವಬೀಜಕಲಮಬೀಜವತ್ ।**

[1]ಸತ್ಯಸುಷಿರಜ್ಞಾನವು ಘಟಾದಿಜ್ಞಾನಗಳಿಂದ ಸ್ವತ ಏವ (ವಿಷಯಸಂಬಂಧವನ್ನು ಅಪೇಕ್ಷಿಸದೇ) ಭಿನ್ನವಾಗಿದೆ. ಯಾಕೆ ? ಘಟಾದಿಜ್ಞಾನಗಳಿಂದ ಉಂಟಾಗುವ ಅರ್ಥಕ್ರಿಯಾಕ್ಕಿಂತಲೂ ವಿಲಕ್ಷಣವಾದ ಅರ್ಥಕ್ರಿಯಾವನ್ನು ಹುಟ್ಟಿಸುವುದರಿಂದ. (ಸತ್ಯಸುಷಿರಜ್ಞಾನದಿಂದ ಆಗುವ ಅರ್ಥಕ್ರಿಯಾವೇ ಬೇರೆ. ಘಟಾದಿಜ್ಞಾನಗಳಿಂದ ಆಗುವ ಅರ್ಥಕ್ರಿಯಾಗಳೇ ಬೇರೆ ಬೇರೆ ಆಗಿದೆ, ಆದ್ದರಿಂದ.) ಯವಬೀಜದಿಂದ ಆಗುವ ಅರ್ಥಕ್ರಿಯಾವೇ ಬೇರೆ. ಕಮಲಬೀಜದಿಂದ ಆಗುವ ಅರ್ಥಕ್ರಿಯಾವೇ ಬೇರೆ ಆಗಿದ್ದರಿಂದ, ಯವಬೀಜವು ಕಲಮಬೀಜದಿಂದ ಭಿನ್ನವಾದಂತೆ.

ಹೌದು, ಸತ್ಯಸುಷಿರಜ್ಞಾನವು ಘಟಾದಿಜ್ಞಾನಗಳಿಂದ ಭಿನ್ನವಾಗುವುದಕ್ಕೆ ವಿಲಕ್ಷಣ ಅರ್ಥಕ್ರಿಯಾಕಾರಿತ್ವವು ಪ್ರಯೋಜಕವಲ್ಲ. ಕಿಂತು ವಿಷಯವೇ ಅಲ್ಲಿ ವ್ಯಾವರ್ತಕವಾಗುತ್ತದೆ ಎಂಬುದಾಗಿ (ಅಪ್ರಯೋಜಕತಾ) ಶಂಕೆ ಮಾಡುವುದು ಸರಿಯಲ್ಲ. ಕಾರಣ ವಿಷಯವು ಜ್ಞಾನಧರ್ಮವಾಗಿಲ್ಲವಾದ್ದರಿಂದ ವ್ಯಾವರ್ತಕವಾಗಲು ಸಾಧ್ಯವಿಲ್ಲ.

ವಿಷಯವು ವ್ಯಾವರ್ತವಾಗುವುದಿಲ್ಲವಾದರೂ ಜ್ಞಾನದಲ್ಲಿ ವಿಷಯ-ಸಂಬಂಧವೇನಿದೆ ಅದು ವ್ಯಾವರ್ತಕವಾಗಬಹುದಲ್ಲ ? ಎಂದು ಶಂಕಿಸುವುದೂ ಸರಿಯಲ್ಲ. ಕಾರಣ - ಜ್ಞಾನಜ್ಞೇಯಗಳಲ್ಲಿ ಸಂಯೋಗಾದಿಸಂಬಂಧಗಳು

---

1 ಗೋಡೆಯಲ್ಲಿ ಛಿದ್ರ ಕಂಡಾಗ ಅಲ್ಲಿಯೂ ಸುಷಿರಜ್ಞಾನವಾಗುತ್ತದೆ. ಗೋಡೆಯಲ್ಲಿ ಛಿದ್ರವಿರುವುದು ಸತ್ಯವೇ ಆದ್ದರಿಂದ ಇದು ಸತ್ಯಸುಷಿರಜ್ಞಾನ.

ಕೂಡುವುದಿಲ್ಲ. ಇನ್ನು ಸ್ವರೂಪಸಂಬಂಧವು ಜ್ಞಾನಸ್ವರೂಪದಿಂದ ಅತಿರಿಕ್ತವಾಗಿಲ್ಲವಾದ್ದರಿಂದ ವಿಷಯಸಂಬಂಧವೂ ವ್ಯಾವರ್ತಕವಾಗುವುದಿಲ್ಲ.

ಹಾಗಾದರೆ ಸತ್ಯಸುಷಿರಜ್ಞಾನವು ಘಟಾದಿಜ್ಞಾನಗಳಿಂದ ಸ್ವತ ಏವ=ವಿಷಯಸಂಬಂಧವನ್ನು ಅಪೇಕ್ಷಿಸದೇ ವ್ಯಾವೃತ್ತವಾಗಿದೆ. (ಭಿನ್ನವಾಗಿದೆ.)

ಯಾವ ರೀತಿಯಾಗಿ ಸತ್ಯಸುಷಿರಜ್ಞಾನವು ಘಟಾದಿಜ್ಞಾನಗಳಿಂದ ಸ್ವತ ಏವ = ವಿಷಯಸಂಬಂಧವನ್ನು ಅಪೇಕ್ಷಿಸದೇ ವ್ಯಾವೃತ್ತವಾಗಿದೆಯೋ ಅದೇ ರೀತಿಯಾಗಿ ಅಸತ್ಯಸುಷಿರಜ್ಞಾನವೂ ಸಹ (ಸವಿತೃಸುಷಿರಜ್ಞಾನವೂ ಸಹ) ಘಟಾದಿಜ್ಞಾನಗಳಿಂದ ಸ್ವತ ಏವ=ವಿಷಯಸಂಬಂಧವನ್ನು ಅಪೇಕ್ಷಿಸದೇ ವ್ಯಾವೃತ್ತವಾಗಿದೆ. ಹಾಗಾಗಿ ಸವಿತೃಸುಷಿರಜ್ಞಾನವು ಅನಿಷ್ಟಸಾಧಕವಾಗುವುದಾದರೆ ಘಟಾದಿಜ್ಞಾನಗಳೂ ಅನಿಷ್ಟಸಾಧಕವಾಗಲಿ ಎಂಬ ಅತಿಪ್ರಸಂಗ ಇಲ್ಲ.

ಹೌದು, ಸತ್ಯಸುಷಿರಜ್ಞಾನವು ಸುಷಿರ-ಇಂದ್ರಿಯಸನ್ನಿಕರ್ಷರೂಪ ಸಾಮಗ್ರೀಜನ್ಯವಾಗಿದೆ. ಅಸತ್ಯಸುಷಿರಜ್ಞಾನವಾದರೂ ಅಸತ್ ಆದ ಸುಷಿರದ ಜೊತೆ ಇಂದ್ರಿಯಕ್ಕೆ ಸನ್ನಿಕರ್ಷವಾಗಲು ಸಾಧ್ಯವಿಲ್ಲವಾದ್ದರಿಂದ ಸುಷಿರ-ಇಂದ್ರಿಯಸನ್ನಿಕರ್ಷರೂಪ ಸಾಮಗ್ರೀಜನ್ಯವಾಗಿಲ್ಲ. ಅಂದಮೇಲೆ ಅಸತ್ಯಸುಷಿರಜ್ಞಾನವು ವಿಷಯಸಂಬಂಧವನ್ನು ಅಪೇಕ್ಷಿಸದೇ ಸತ್ಯಸುಷಿರಜ್ಞಾನಸದೃಶ ಹೇಗಾಗುತ್ತದೆ ? (ಅಸತ್ಯಸುಷಿರಜ್ಞಾನದಲ್ಲಿ ಸತ್ಯಸುಷಿರಜ್ಞಾನಸಾದೃಶ್ಯವು ಹೇಗೆ ಕೂಡುತ್ತದೆ ?) ಎಂದರೆ, ದೋಷವಶಾತ್ ಸಾದೃಶ್ಯವು ಉಪಪನ್ನವಾಗುತ್ತದೆ.

ಹಾಗಾದರೆ -

- ಸತ್ಯಸುಷಿರಜ್ಞಾನದಲ್ಲಿ ಘಟಾದಿಜ್ಞಾನಗಳಿಂದ ವ್ಯಾವರ್ತಕವಾಗುವ, ವಿಷಯದಿಂದ ಭಿನ್ನವಾದ, ಒಂದು ಧರ್ಮವಿಶೇಷವು ಸಮೀಚೀನ ಸಾಮಗ್ರಿಯಿಂದ ಜನ್ಯವಾಗಿದೆ.
- ಅಸತ್ಯಸುಷಿರಜ್ಞಾನದಲ್ಲಿ ಮಾತ್ರ ದೋಷಘಟಿತವಾದ ಸಾಮಗ್ರಿಯಿಂದ ಜನ್ಯವಾಗಿದೆ.

ಸತ್ಯಸುಷಿರಜ್ಞಾನ-ಅಸತ್ಯಸುಷಿರಜ್ಞಾನ ಇವುಗಳಲ್ಲಿ ಇಷ್ಟುಮಾತ್ರವೇ ವ್ಯತ್ಯಾಸ ಇರುವುದು. ಆದ್ದರಿಂದ ಅವೆರಡರಲ್ಲಿ ಸಾದೃಶ್ಯವು ಉಪಪನ್ನವಾಗುತ್ತದೆ. ಹೀಗಾಗಿ

ಸತ್ಯಸುಷಿರಜ್ಞಾನವು ಘಟಾದಿಜ್ಞಾನಗಳಿಂದ ಸ್ವತ ಏವ=ವಿಷಯಸಂಬಂಧಾಪೇಕ್ಷೆ ಇಲ್ಲದೇ ಹೇಗೆ ವ್ಯಾವೃತ್ತವಾಗಿದೆಯೋ ಅದರಂತೆ ಅಸತ್ಯಸುಷಿರಜ್ಞಾನವೂ ಘಟಾದಿಜ್ಞಾನಗಳಿಂದ ಸ್ವತ ಏವ= ವಿಷಯಸಂಬಂಧಾಪೇಕ್ಷೆ ಇಲ್ಲದೇ ವ್ಯಾವೃತ್ತವಾಗಿದೆ. ಆದ್ದರಿಂದ ವಿಷಯಾನವಚ್ಛಿನ್ನವಾದ ಅಸತ್ಯಸುಷಿರಜ್ಞಾನವು ಅನಿಷ್ಟಸಾಧಕವಾಗುವುದಾದರೆ ಘಟಾದಿಜ್ಞಾನವೂ ಅನಿಷ್ಟಸಾಧಕವಾಗಲಿ ಎಂಬ ಅತಿಪ್ರಸಂಗ ಇಲ್ಲ (ಯಾವ ದೋಷವೂ ಇಲ್ಲ) ಎಂದು ಮೊದಲನೇ ಪಕ್ಷದ ಅಭಿಪ್ರಾಯ.

**ಪಕ್ಷ 2) ವಿಷಯಾವಚ್ಛಿನ್ನಜ್ಞಾನ ಅನಿಷ್ಟಸಾಧಕ**

ಸುಷಿರರೂಪವಿಷಯಾವಚ್ಛಿನ್ನಜ್ಞಾನ ಅನಿಷ್ಟಸಾಧಕ ಎಂಬ ಎರಡನೇ ಪಕ್ಷವನ್ನು ಅಂಗೀಕರಿಸಿದರೂ ಸಹ ಯಾವ ದೋಷ ಬರುವುದಿಲ್ಲ.

ಹಾಗಾದರೆ ಅವಚ್ಛಿನ್ನವಾದ ಜ್ಞಾನಕ್ಕೆ ಅನಿಷ್ಟಸಾಧಕತ್ವವನ್ನು ಹೇಳಿದರೆ ಅವಚ್ಛೇದಕವಾದ ವಿಷಯಕ್ಕೂ (ಸವಿತ್ಯಸುಷಿರಕ್ಕೂ) ಅನಿಷ್ಟಸಾಧಕತ್ವ ಬರುತ್ತದೆಯಲ್ಲವೇ ? ಎಂದರೆ, ಅಲ್ಲಿ ಪ್ರಶ್ನಿಸುತ್ತೇವೆ -

**'ಅವಚ್ಛಿನ್ನಸ್ಯ ಯತ್ ಭವತಿ ಅವಚ್ಛೇದಕಸ್ಯಾಪಿ ತತ್ ಭವತಿ' ಎನ್ನುವುದು ಸಾಮಾನ್ಯವ್ಯಾಪ್ತಿಯೋ ? ಅಥವಾ 'ಅವಚ್ಛಿನ್ನಸ್ಯ ಹೇತುತ್ವೇ ಅವಚ್ಛೇದಕಸ್ಯಾಪಿ ಹೇತುತ್ವಂ' ಎಂದು ವಿಶೇಷವ್ಯಾಪ್ತಿಯೋ ?**

ಅವಚ್ಛಿನ್ನಸ್ಯ ಯತ್ ಭವತಿ ... ಎಂದು ಸಾಮಾನ್ಯವ್ಯಾಪ್ತಿ ಹೇಳುವುದು (ಮೊದಲನೇ ಪಕ್ಷ) ಸರಿಯಲ್ಲ. ಕಾರಣ - ಹಾಗೆ ವ್ಯಾಪ್ತಿ ಕಂಡಿಲ್ಲ. ಕಂಡಿಲ್ಲ ಎಂದು ಹೇಗೆ ಹೇಳುತ್ತೀರಿ? 'ಲಂಬಕರ್ಣಮಾನಯ' ಎನ್ನುವಲ್ಲಿ ಕಂಡಿದೆಯಲ್ಲ ಎಂದರೆ, 'ಚಿತ್ರಗುಮಾನಯ' ಎನ್ನುವಲ್ಲಿ ಇದಕ್ಕೆ ವ್ಯಭಿಚಾರವೂ ಕಂಡಿಲ್ಲವೇ ? (ಚಿತ್ರಗುಮಾನಯ = ಚಿತ್ರವಿಚಿತ್ರಗೋವುಗಳುಳ್ಳ ದೇವದತ್ತನನ್ನು ಕರೆದುಕೊಂಡು ಬಾ ಎಂದು ಹೇಳಿದಾಗ ದೇವದತ್ತನನ್ನು ಕರೆತರುತ್ತಾರೆ. ಹೊರತು ಚಿತ್ರವಿಚಿತ್ರಗೋವುಗಳನ್ನೂ ಕರೆತರುವುದಿಲ್ಲ. ಆನಯನಕ್ರಿಯೆ ದೇವದತ್ತನಲ್ಲಿ ಕಂಡಿದೆ. ಗೋವುಗಳಲ್ಲಿ ಕಂಡಿಲ್ಲ. ಆದ್ದರಿಂದ ಅವಚ್ಛಿನ್ನಸ್ಯ ಯತ್ ಭವತಿ .... ಎಂಬ ವ್ಯಾಪ್ತಿಗೆ ಚಿತ್ರಗುಮಾನಯ ಎನ್ನುವಲ್ಲಿ ವ್ಯಭಿಚಾರ ಕಂಡಿದೆ ಎಂದು ಭಾವ.)




[1]ಅವಚ್ಛಿನ್ನವಾದದ್ದಕ್ಕೆ ಹೇತುತ್ವ ಹೇಳುವುದಾದರೆ ಅವಚ್ಛೇದಕಕ್ಕೂ ಹೇತುತ್ವ ಬರುತ್ತದೆ ಎಂಬ ವಿಶೇಷವ್ಯಾಪ್ತಿಯು (ಎರಡನೇ ಪಕ್ಷವು) ಸರಿಯಲ್ಲ. ಏಕೆಂದರೆ - ಬ್ರಹ್ಮಾವಚ್ಛಿನ್ನವಾದ ಅಜ್ಞಾನವು ಜಗದುಪಾದಾನವಾಗುವುದಾದರೆ ಬ್ರಹ್ಮನೂ ಜಗದುಪಾದಾನ- ವಾಗಬೇಕಾಗುತ್ತದೆ. (ನಿರ್ವಿಕಾರನಾದ ಬ್ರಹ್ಮನು ಜಗದುಪಾದಾನವಾಗಲು ಸಾಧ್ಯವೂ ಇಲ್ಲ.) ಮತ್ತು ಆತ್ಮಾವಚ್ಛಿನ್ನವಾದ ಜ್ಞಾನವು ಅವಿದ್ಯಾನಿವೃತ್ತಿಗೆ (ಮೋಕ್ಷಕ್ಕೆ) ಹೇತುವಾಗುವುದಾದರೆ ಅವಚ್ಛೇದಕನಾದ ಆತ್ಮನಿಗೂ ಅವಿದ್ಯಾನಿವೃತ್ತಿಹೇತುತ್ವ ಬರಬೇಕಾಗುತ್ತದೆ. (ಆತ್ಮನು ಅಜ್ಞಾನಕ್ಕೆ ಸ್ಫೋರಕನಾದ್ದರಿಂದ ಅವನು ಅಜ್ಞಾನಕ್ಕೆ ನಿವರ್ತಕನಾಗಲು ಸಾಧ್ಯವೂ ಇಲ್ಲ.) ಆದ್ದರಿಂದ ಅವಚ್ಛಿನ್ನಸ್ಯ ಹೇತುತ್ವೇ ..... ಎಂಬ ವಿಶೇಷವ್ಯಾಪ್ತಿಯೂ ಸರಿಯಲ್ಲ.

ಆದರೂ ಸಹ ಸುಷಿರರೂಪವಾದ ಜ್ಞೇಯವು (ವಿಷಯವು) ಜ್ಞಾನವ್ಯಾವರ್ತಕ- ವಾಗಿರುವುದರಿಂದ (ವ್ಯಾವರ್ತಕತ್ವವು ವ್ಯಾವೃತ್ತಿಜ್ಞಾನಹೇತುತ್ವರೂಪವಾದ್ದರಿಂದ) ಆರೋಪಿತಸುಷಿರಕ್ಕೂ ಸಹ ಹೇತುತ್ವವು (ಅನಿಷ್ಟಸಾಧಕತ್ವವು) ಸಿದ್ಧಿಸುತ್ತದೆಯಲ್ಲವೇ ? ಎಂದರೆ, ಈ ರೀತಿ ಯಾವಾಗ ಹೇಳಬಹುದಿತ್ತು ? ವ್ಯಾವರ್ತಕತ್ವ ಎಂದರೆ ವ್ಯಾವೃತ್ತಿಜ್ಞಾನಹೇತುತ್ವ ಎಂದಾಗಿದ್ದರೆ. ಆದರೆ ವ್ಯಾವರ್ತಕತ್ವ ಎಂದರೆ ವ್ಯಾವೃತ್ತಿಜ್ಞಾನಹೇತುತ್ವ ಎಂದಲ್ಲ. ಕಿಂತು ವ್ಯಾವೃತ್ತಿಜ್ಞಾನಹೇತುಭೂತಜ್ಞಾನವಿಷಯತ್ವ ಎಂದರ್ಥ. ಹಾಗಾಗಿ ಆರೋಪಿತಸುಷಿರಕ್ಕೆ ವ್ಯಾವೃತ್ತಿಜ್ಞಾನಹೇತುತ್ವ ಒಪ್ಪದಿದ್ದರೂ ಸಹ ವ್ಯಾವೃತ್ತಿಜ್ಞಾನಹೇತುಭೂತವಾದ ಯಾವ ಜ್ಞಾನವಿದೆಯೋ ಅಂತಹ ಜ್ಞಾನದಲ್ಲಿ ಉಲ್ಲಿಖ್ಯಮಾನತ್ವರೂಪವಾದ ವಿಷಯತ್ವವನ್ನು ಅಂಗೀಕರಿಸಿದ್ದರಿಂದ, ಆರೋಪಿತಸುಷಿರಕ್ಕೆ ವ್ಯಾವೃತ್ತಿಜ್ಞಾನಹೇತುಭೂತಜ್ಞಾನವಿಷಯತ್ವ ಅಪರಪರ್ಯಾಯ ವ್ಯಾವರ್ತಕತ್ವವು ಉಪಪನ್ನವಾಗುತ್ತದೆ. ಇನ್ನು ವ್ಯಾವೃತ್ತಿಹೇತುಭೂತವಾದ ಆ ಜ್ಞಾನವಾದರೂ ಸತ್ಯವೇ ಆಗಿದೆ.

ಆದ್ದರಿಂದ ವಿಷಯಾವಚ್ಛಿನ್ನಜ್ಞಾನ ಅನಿಷ್ಟಸಾಧಕ ಎಂದು ಅಂಗೀಕರಿಸಿದರೂ ಯಾವ ದೋಷವೂ ಇಲ್ಲ.

---

1 ಸವಿತೃಸುಷಿರಾವಚ್ಛಿನ್ನವಾದ ಜ್ಞಾನಕ್ಕೆ ಅನಿಷ್ಟಸಾಧಕತ್ವ ಹೇಳಿದರೆ ಅವಚ್ಛೇದಕವಾದ ಸವಿತೃಸುಷಿರಕ್ಕೂ ಅನಿಷ್ಟಸಾಧಕತ್ವ ಬರುತ್ತದೆ ಎಂದು ವಿಶೇಷವ್ಯಾಪ್ತಿಯ ಭಾವ.

**ಟೀಕಾ :- ನನ್ವೇವಂ ಸತಿ ಪ್ರಕೃತೇಽಪ್ಯನುಮಾನಾಂಗಾನಾಂ ಪ್ರತೀತಿಸದ್ಭಾವಾತ್ ಕಿಂ ತತ್ಸತ್ಯತಯಾ ? ಇತಿ ಚೇನ್ನ । ಪ್ರತೀತೇರಪಿ ಪರೇಣ ಸತ್ತ್ವಾನಭ್ಯುಪಗಮಾತ್ ।**

**ಕಿಂಚ ಅಸ್ತ್ಯಯಂ ವಿಭಾಗಃ । ಕಿಂಚಿತ್ ಸ್ವರೂಪೇಣ ಸತ್ ಜ್ಞಾತತಯಾ ಅನುಮಾನಾಂಗಮ್ । ಕಸ್ಯಚಿತ್ ಜ್ಞಾನಮೇವೇತಿ । ಅಥ ಸತಃ ಸಾಧಕತ್ವಂ ಕುತಃ ? ಇತಿ ಚೇತ್ । ಅಸತೋಽಸಾಧಕತ್ವಾದರ್ಶನಾತ್ ಇತ್ಯಾಸ್ತಾಂ ವಿಸ್ತರಃ ।**

**ಅನುವಾದ :-** ''ಸವಿತೃಸುಷಿರ ಅಸತ್ ಆದ್ದರಿಂದ ಅದಕ್ಕೆ ಸಾಧಕತ್ವ ಇಲ್ಲದಿದ್ದರೂ ಸವಿತೃಸುಷಿರಜ್ಞಾನ ಸತ್ ಆದ್ದರಿಂದ ಆ ಜ್ಞಾನಕ್ಕೇ ಅನಿಷ್ಟಸಾಧಕತ್ವ ಇರುವುದು'' ಎಂಬುದಾಗಿ ಜ್ಞಾನಕ್ಕೆ ಸಾಧಕತ್ವವನ್ನು ಅಂಗೀಕರಿಸುವುದಾದರೆ, ಪ್ರಕೃತದಲ್ಲಿಯೂ ಸಹ ದೃಶ್ಯತ್ವಾನುಮಾನದಲ್ಲಿ ಅಂಗಭೂತವಾದ ವ್ಯಾಪ್ತ್ಯಾದಿಗಳು ಅಸತ್ ಆದ್ದರಿಂದ ವ್ಯಾಪ್ತ್ಯಾದಿಗಳಿಗೆ ಸಾಧಕತ್ವ ಇಲ್ಲದಿದ್ದರೂ ವ್ಯಾಪ್ತ್ಯಾದಿಗಳ ಜ್ಞಾನ ಸತ್ ಆಗಿದ್ದರಿಂದ ಆ ವ್ಯಾಪ್ತ್ಯಾದಿಜ್ಞಾನಕ್ಕೇ ಸಾಧಕತ್ವ ಹೇಳೋಣ. ವ್ಯಾಪ್ತ್ಯಾದಿಗಳ ಸತ್ಯತ್ವದಿಂದ ಏನು ಪ್ರಯೋಜನ?

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ, ವಿಷಯವು ಸತ್ಯವಾಗದೇ ಹೋದರೂ ಜ್ಞಾನವು ಸತ್ಯ ಎಂಬುದಾಗಿ ನಮ್ಮ ಮತದಲ್ಲಿ ಅಂಗೀಕರಿಸಿದ್ದರಿಂದ ನಮ್ಮ ಮತದಲ್ಲಿ ಅದು ಉಪಪನ್ನವಾಗಬಹುದು. ಆದರೆ ನಿಮ್ಮ ಮತದಲ್ಲಿ ವೃತ್ತಿರೂಪವಾದ ಅಥವಾ ತತ್ಪ್ರತಿಬಿಂಬಿತಚೈತನ್ಯರೂಪವಾದ ಜ್ಞಾನಕ್ಕೆ ಸತ್ಯತ್ವವನ್ನು ಒಪ್ಪಿಲ್ಲವಾದ್ದರಿಂದ ವ್ಯಾಪ್ತ್ಯಾದಿಪ್ರತೀತಿಗಳೂ ಸತ್ಯವಾಗಿಲ್ಲ. ಆದ್ದರಿಂದ 'ವ್ಯಾಪ್ತ್ಯಾದಿಗಳು ಅಸತ್ ಆದರೂ ವ್ಯಾಪ್ತ್ಯಾದಿಗಳ ಪ್ರತೀತಿ ಸಾಧಕವಾಗಬಹುದು' ಎಂಬ ಆಕ್ಷೇಪವೇ ಸರಿಯಲ್ಲ.

ಮತ್ತು ಅನುಮಾನಾಂಗಗಳಲ್ಲಿ ಈ ರೀತಿಯಾಗಿ ವಿಭಾಗ ಇದೆ. ವ್ಯಾಪ್ತ್ಯಾದಿಗಳು (ವ್ಯಾಪ್ತಿ-ಹೇತುಗಳು) ಸ್ವರೂಪೇಣ ಸತ್ ಆಗಿದ್ದುಕೊಂಡು ಜ್ಞಾತವಾಗಿ ಅನುಮಾನಾಂಗವಾಗುತ್ತವೆ. ಹೊರತು ಕೇವಲ ಪ್ರತೀತಿಮಾತ್ರದಿಂದ ಅಂಗವಾಗುವುದಿಲ್ಲ. ಏಕೆಂದರೆ ಹಾಗೆ ಪ್ರತೀತಿಮಾತ್ರದಿಂದ ಅಂಗವಾಗುವುದಾದರೆ 'ಪರ್ವತೋ ವಹ್ನಿಮಾನ್ ಪ್ರಮೇಯತ್ವಾತ್' ಎನ್ನುವ ವ್ಯಭಿಚರಿತ ಅನುಮಾನದಲ್ಲಿ ವಾಸ್ತವಿಕವಾಗಿ ವ್ಯಾಪ್ತಿ ಇಲ್ಲದಿದ್ದರೂ ವ್ಯಾಪ್ತಿಪ್ರತೀತಿಯು ಸಂಭಾವಿತವಾದ್ದರಿಂದ ಪ್ರಮೇಯತ್ವವೂ ವಹ್ನಿಸಾಧಕವಾಗಬೇಕಾಗುತ್ತದೆ. ಅದರಂತೆ 'ಶಬ್ದಃ ನಿತ್ಯಃ




ಚಾಕ್ಷುಷತ್ವಾತ್' ಎಂಬ ಅಸಿದ್ಧವಾದ ಅನುಮಾನದಲ್ಲಿ ವಾಸ್ತವಿಕವಾಗಿ ಹೇತು ಇಲ್ಲದಿದ್ದರೂ ಲಿಂಗಪ್ರತೀತಿಯು ಸಂಭಾವಿತವಾದ್ದರಿಂದ ಚಾಕ್ಷುಷತ್ವವೂ ನಿತ್ಯತ್ವಸಾಧಕವಾಗಬೇಕಾಗುತ್ತದೆ. ಆದ್ದರಿಂದ ವ್ಯಾಪ್ತ್ಯಾದಿಗಳು ಕೇವಲ ಪ್ರತೀತಿಮಾತ್ರದಿಂದ ಸಾಧಕವಲ್ಲ. ಕಿಂತು ಸ್ವರೂಪೇಣ ಸತ್ ಆಗಿದ್ದುಕೊಂಡು ಜ್ಞಾತವಾಗಿ ಅನುಮಾನಾಂಗವಾಗುತ್ತವೆ.

ಇನ್ನು ಪಕ್ಷಾದಿಗಳ ವಿಷಯದಲ್ಲಿ ಪಕ್ಷಾದಿಜ್ಞಾನವೇ ಅನುಮಾನಾಂಗವಾಗುತ್ತದೆ. ಹೊರತು ಪಕ್ಷಾದಿಗಳ ಸತ್ಯತ್ವ ಆವಶ್ಯಕ ಅಲ್ಲ. ಭ್ರಾಂತಿಪ್ರತಿಪನ್ನವಾದ ರಜತಾದಿಗಳನ್ನು ಪಕ್ಷ ಮಾಡಿಕೊಂಡು ಆ ಆ ವಾದಿಗಳು ಅಸತ್ವವನ್ನು ಸಾಧಿಸುವುದು ಕಂಡಿದ್ದರಿಂದ ಮತ್ತು ವಿಮತಂ ಮಿಥ್ಯಾ ದೃಶ್ಯತ್ವಾತ್ ಎಂಬುದಾಗಿ ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸುವಾಗ 'ಯಥಾ ಸಂಪ್ರತಿಪನ್ನಂ' ಎಂದು ಶುಕ್ತಿರಜತವನ್ನು ನೀವೇ ದೃಷ್ಟಾಂತ ಮಾಡಿದ್ದರಿಂದಲೂ ಸಹ ''ಪಕ್ಷಾದಿಗಳು ಸ್ವರೂಪತಃ ಸತ್ ಆಗದಿದ್ದರೂ ಪಕ್ಷಾದಿಜ್ಞಾನ ಅನುಮಾನಾಂಗವಾಗುತ್ತದೆ'' ಎಂಬ ಅಂಶ ಸ್ಪಷ್ಟವಾಗುತ್ತದೆ.

ಆದ್ದರಿಂದ ''ಅನುಮಾನಾಂಗವಾದ ಎಲ್ಲವೂ ಪ್ರತೀತಿಮಾತ್ರದಿಂದಲೇ ಅಂಗ'' ಎಂಬ ಆಕ್ಷೇಪ ಸರಿಯಲ್ಲ. ಪಕ್ಷಾದಿಗಳು ಪ್ರತೀತಿಮಾತ್ರದಿಂದ ಅಂಗವಾಗುವುದಾದರೂ, ಲಿಂಗ-ವ್ಯಾಪ್ತ್ಯಾದಿಗಳು ಸ್ವರೂಪೇಣ ಸತ್ ಆಗಿಯೇ ಜ್ಞಾತವಾಗಿ ಅಂಗವಾಗುತ್ತವೆ. ಈ ಹಿನ್ನಲೆಯಲ್ಲಿ ಲಿಂಗ-ವ್ಯಾಪ್ತ್ಯಾದಿಗಳಿಗೆ ಸ್ವರೂಪಸತ್ವವನ್ನು ಒಪ್ಪಲೇಬೇಕು.

ಪ್ರಕೃತದಲ್ಲಿ ಜಗತ್ತೇ ಇಲ್ಲ ಎನ್ನುವುದಾದರೆ ಜಗದಂತರ್ಗತವಾದ ಲಿಂಗ-ವ್ಯಾಪ್ತ್ಯಾದಿಗಳೂ ಅಸತ್ ಆಗುವುದರಿಂದ, ಸಾಧಕವಾಗುವುದಿಲ್ಲವಾದ್ದರಿಂದ, ದೃಶ್ಯತ್ವ ಹೇತುವಿಗೆ ಅನಧ್ಯವಸಿತತ್ವವನ್ನು ಹೇಳಿದ್ದು ಯುಕ್ತವೇ ಆಗದೆ ಎಂದು ಸಿದ್ಧವಾಗುತ್ತದೆ. ಅಸತ್‌ಗೆ ಸಾಧಕತ್ವ ಇಲ್ಲ ಎಂದು ವಿಸ್ತಾರವಾಗಿ ಸಮರ್ಥಿಸಿದ್ದನ್ನು ಇಲ್ಲಿಗೆ ಮುಕ್ತಾಯಗೊಳಿಸೋಣ.

**ಟೀಕಾ :- ಅನುಮಾನಸ್ಯಾನವಸರೋ ದ್ವೇಧಾ ಪ್ರಮಾಣಬಾಧಸ್ತ-ತ್ಪ್ರತಿರೋಧಶ್ಚ । ತತ್ರಾದ್ಯಃ ಪ್ರಬಲ ಇತಿ ತಮೇವಾದೌ ದರ್ಶಯತಿ –**

**ಮೂಲ :- ಪ್ರತ್ಯಕ್ಷಾದಿವಿರುದ್ಧತ್ವಾತ್ 'ವಿಶ್ವಂ ಸತ್ಯಂ'**
**ಇತ್ಯಾದಿವಾಕ್ಯವಿರುದ್ಧತ್ವಾಚ್ಚ ಕಾಲಾತ್ಯಯಾಪದಿಷ್ಟಃ ।**

**ಯಥಾಯಥಂ ಪ್ರತ್ಯಾಕ್ಷಾನುಮಾನಾಗಮಸಿದ್ಧಾನ್ ಪದಾರ್ಥಾನ್ ಖಲು ಪಕ್ಷೀಕೃತ್ಯ ತನ್ಮಿಥ್ಯಾತ್ವಮನುಮಾತವ್ಯಮ್ । ಪ್ರಮಾಣಾನಿ ಚ ತತ್ಸತ್ಯತಾವಗಾಹೀನೀತಿ ತದ್ಬಾಧಿತತ್ವಾತ್ ಕಾಲಾತ್ಯಯಾಪದಿಷ್ಟೋ ಭವತಿ ।**

**ಅನುವಾದ :-** ಮೊದಲಿಗೆ ಲಿಂಗದರ್ಶನ. ಅನಂತರ ವ್ಯಾಪ್ತಿಸ್ಮೃತಿ. ಆಮೇಲೆ ಅವಸರವಿಚಾರ. ಅದಾದನಂತರ ಅನುಮಿತಿ. ಇದು ಅನುಮಾನದಿಂದ ಅನುಮತಿ ಹುಟ್ಟುವ ಕ್ರಮ. ಇಲ್ಲಿ ಅವಸರವಿಚಾರ ಎಂದರೆ ಪ್ರತಿಬಂಧಕಜಿಜ್ಞಾಸಾವಿಚ್ಛೇದಃ = ವ್ಯಾಪ್ತಿಸ್ಮೃತಿಯ ನಂತರ ಅನುಮಿತಿಗೆ ಪ್ರತಿಬಂಧಕವಾದ ಬಾಧ-ಸತ್ಪ್ರತಿಪಕ್ಷಗಳು ಇಲ್ಲ ನಿಶ್ಚಯ ಮಾಡಿಕೊಳ್ಳುವುದು. ಈ ಅವಸರದ ಅಭಾವ ಎರಡು ವಿಧ. 1) ಪ್ರಮಾಣಬಾಧ 2) ಪ್ರಮಾಣಪ್ರತಿರೋಧ. ಇವುಗಳಲ್ಲಿ ಪ್ರಮಾಣಬಾಧವೇ ಪ್ರಬಲವಾದದ್ದು. ಆದ್ದರಿಂದ ಆ ಪ್ರಬಲವಾದ ಪ್ರಮಾಣಬಾಧವನ್ನೇ ಮೊದಲಿಗೆ ತೋರಿಸುತ್ತಾರೆ -

**ಮೂಲ :- ಪ್ರತ್ಯಕ್ಷಾದಿವಿರುದ್ಧತ್ವಾತ್ ''ವಿಶ್ವಂ ಸತ್ಯಂ'' ಇತ್ಯಾದಿವಾಕ್ಯವಿರುದ್ಧತ್ವಾಚ್ಚ ಕಾಲಾತ್ಯಯಾಪದಿಷ್ಟಃ ।**

**ಮೂಲಾರ್ಥ :-** ಪ್ರತ್ಯಕ್ಷಾದಿವಿರುದ್ಧವಾದ್ದರಿಂದ ಹಾಗೂ 'ವಿಶ್ವಂ ಸತ್ಯಂ' ಇತ್ಯಾದಿ ವಾಕ್ಯವಿರುದ್ಧವಾದ್ದರಿಂದಲೂ ಸಹ ದೃಶ್ಯತ್ವಾನುಮಾನವು ಬಾಧಿತವಾಗುತ್ತದೆ.

ಜಗತ್ತನ್ನು ಪಕ್ಷ ಮಾಡಿದ್ದೀರಿ. ಜಗತ್ತಿನಲ್ಲಿ ನಾನಾತರಹದ ಪದಾರ್ಥಗಳಿವೆ. ಕೆಲವು ಪ್ರತ್ಯಕ್ಷಸಿದ್ಧವಾಗಿವೆ. ಇನ್ನು ಕೆಲವು ಅನುಮಾನಗಮ್ಯವಾಗಿವೆ. ಮತ್ತೆ ಕೆಲವು ಆಗಮಸಿದ್ಧವಾಗಿವೆ. ಹೀಗೆ ಯಥಾಯೋಗ್ಯವಾಗಿ ಪ್ರತ್ಯಕ್ಷ-ಅನುಮಾನ-ಆಗಮಸಿದ್ಧವಾದ ಪದಾರ್ಥಗಳನ್ನು ಪಕ್ಷ ಮಾಡಿಕೊಂಡು ಅವುಗಳಿಗೆ ಮಿಥ್ಯಾತ್ವವನ್ನು ಸಾಧಿಸಬೇಕು. ಹಾಗಾಗಿ ಪ್ರತ್ಯಕ್ಷಾದಿಪ್ರಮಾಣಗಳು ನಿಮ್ಮ ಅನುಮಾನಕ್ಕೆ ಉಪಜೀವ್ಯವಾಗಿವೆ. ಅಂತಹ ಪಕ್ಷೀಭೂತಪದಾರ್ಥಗಳನ್ನು ತಿಳಿಸುವ, ಉಪಜೀವ್ಯವಾದ, ಪ್ರತ್ಯಕ್ಷಾದಿಪ್ರಮಾಣಗಳಾದರೂ ಆ ಪದಾರ್ಥಗಳಿಗೆ ಸತ್ಯತ್ವವನ್ನೇ ಪ್ರತಿಪಾದಿಸುತ್ತಿವೆ. ಹೀಗಾಗಿ ಜಗತ್ತಿಗೆ ಮಿಥ್ಯಾತ್ವವನ್ನು ಹೇಳಿದರೆ, ಅಂತಹ ಜಗತ್ತಿಗೆ ಸತ್ಯತ್ವಪ್ರತಿಪಾದಕವಾದ ಉಪಜೀವ್ಯವಾದ ಪ್ರತ್ಯಕ್ಷಾದಿಪ್ರಮಾಣಗಳ ವಿರೋಧ ಬರುವುದರಿಂದ ದೃಶ್ಯತ್ವ ಹೇತು ಬಾಧಿತವಾಗುತ್ತದೆ.




**ಟೀಕಾ :- ನನು ಕೇಯಂ ಸತ್ಯತಾ ಯಾ ಪ್ರತ್ಯಕ್ಷಾದಿಗೋಚರಾ ? ಬ್ರಹ್ಮಣಿ ಯಾ ಪರೇಣಾಂಗೀಕ್ರಿಯತೇ ಸೈವೇತಿ ಬ್ರೂಮಃ । ಕಾಲತ್ರಯಾಬಾಧ್ಯತಾ-ಲಕ್ಷಣಾ ಸಾ ನ ಪ್ರತ್ಯಕ್ಷಾದಿಗೋಚರಾ ಇತಿ ಚೇತ್ । ತರ್ಹಿ ಬ್ರಹ್ಮಣೋಽಪಿ ಕುತಃ ಸಿದ್ಧಾ ? 'ತತ್ಸತ್ಯಮ್' ಇತ್ಯಾದ್ಯಾಗಮಾದಿತಿ ಚೇತ್ । ತರ್ಹಿ ತತ್ ಪ್ರಕೃತೇಽಪಿ ಸಮಮಿತಿ ತದ್ವಿರೋಧಾತ್ ಕಾಲಾತೀತ ಏವ । ತದಿತಮುಕ್ತಂ 'ವಿಶ್ವಂ ಸತ್ಯಂ' ಇತ್ಯಾದಿನಾ । ಅನ್ಯಥಾ ಪ್ರತ್ಯಕ್ಷಾದೀತ್ಯಾದಿಪದೇನ ವಾಕ್ಯಸ್ಯಾಪಿ ಗೃಹೀತತ್ವಾತ್ ಪುನರ್ಗ್ರಹಣಂ ವ್ಯರ್ಥಂ ಸ್ಯಾತ್ ।**

**ಅಂಗೀಕಾರವಾದಶ್ಚಾಯಮ್ । ಯಥಾ ಚ ತ್ರೈಕಾಲಿಕಾಭಾಧ್ಯತ್ವಲಕ್ಷಣಂ ಸತ್ಯತ್ವಂ ಪ್ರತ್ಯಕ್ಷಾದಿನೈವ ಸಿದ್ಧಂ ತಥೋಪಪಾದಿತಮನ್ಯತ್ರೇತಿ ।**

**ಅನುವಾದ :-**

**ಪೂರ್ವಪಕ್ಷೀ :-** ಪ್ರತ್ಯಕ್ಷಾದಿಪ್ರಮಾಣಗಳು ಸತ್ಯತ್ವವನ್ನು ಗ್ರಹಿಸುತ್ತಿವೆ ಎಂದು ಹೇಳುತ್ತಿದ್ದೀರಿ. ಆ ಪ್ರತ್ಯಕ್ಷಾದಿಪ್ರಮಾಣಗಳಿಂದ ಗ್ರಾಹ್ಯವಾದ ಸತ್ಯತ್ವ ಎಂತಹದು ?

**ಸಿದ್ಧಾಂತೀ :-** ನೀವು ಬ್ರಹ್ಮನಲ್ಲಿ ಎಂತಹ ಸತ್ಯತ್ವ ಒಪ್ಪುತ್ತೀರೋ ಅದೇ ಸತ್ಯತ್ವವನ್ನೇ ಪ್ರತ್ಯಕ್ಷಾದಿಗಳು ಗ್ರಹಿಸುತ್ತವೆ ಎಂದು ಹೇಳುತ್ತೇವೆ.

**ಪೂರ್ವಪಕ್ಷೀ :-** ನಾವು ಬ್ರಹ್ಮನಲ್ಲಿ ಕಾಲತ್ರಯಾಬಾಧ್ಯತ್ವ ರೂಪವಾದ ಸತ್ಯತ್ವವನ್ನು ಒಪ್ಪುತ್ತೇವೆ. ಅಂತಹ ಕಾಲತ್ರಯಾಬಾಧ್ಯತ್ವ ರೂಪವಾದ ಸತ್ಯತ್ವವನ್ನು ಪ್ರತ್ಯಕ್ಷ ಗ್ರಹಿಸುವುದಿಲ್ಲವಲ್ಲ ?

**ಸಿದ್ಧಾಂತೀ :-** ಹಾಗಾದರೆ ಅಂತಹ ಕಾಲತ್ರಯಾಬಾಧ್ಯತ್ವರೂಪವಾದ ಸತ್ಯತ್ವವು ಬ್ರಹ್ಮನಲ್ಲಾದರೂ ಯಾವ ಪ್ರಮಾಣದಿಂದ ಸಿದ್ಧವಾಗಿದೆ ?

**ಪೂರ್ವಪಕ್ಷೀ :-** 'ತತ್ ಸತ್ಯಂ' ಇತ್ಯಾದಿ ಆಗಮಗಳಿಂದ ಅಂತಹ ಸತ್ಯತ್ವವು ಬ್ರಹ್ಮನಲ್ಲಿ ಸಿದ್ಧವಾಗಿದೆ.

**ಸಿದ್ಧಾಂತೀ :-** ಹಾಗಾದರೆ ಅಂತಹ ಕಾಲತ್ರಯಾಬಾಧ್ಯತ್ವರೂಪವಾದ ಸತ್ಯತ್ವವು ಜಗತ್ತಿನಲ್ಲಿಯೂ 'ವಿಶ್ವಂ ಸತ್ಯಂ' ಇತ್ಯಾದಿ ಆಗಮಗಳಿಂದಲೇ ಸಿದ್ಧವಾಗಿದೆಯಾದ್ದ-ರಿಂದ, ನೀವು ಜಗತ್ತಿಗೆ ಮಿಥ್ಯಾತ್ವವನ್ನು ಹೇಳಿದರೆ ಜಗತ್ಸತ್ಯತ್ವಬೋಧಕ ಆಗಮವಿರೋಧ ಬರುವುದರಿಂದ ನಿಮ್ಮ ದೃಶ್ಯತ್ವಾನುಮಾನವು ಬಾಧಿತವೇ ಆಗುತ್ತದೆ.

ಇದನ್ನೇ ಆಚಾರ್ಯರು

'ವಿಶ್ವಂ ಸತ್ಯಂ' ಇತ್ಯಾದಿವಾಕ್ಯವಿರುದ್ಧತ್ವಾಚ್ಚ ಕಾಲಾತ್ಯಯಾಪದಿಷ್ಟಃ ।'

ಎಂಬುದಾಗಿ ಹೇಳಿದರು.

ಬ್ರಹ್ಮನಲ್ಲಿಯಂತೆ ಕಾಲತ್ರಯಾಬಾಧ್ಯತ್ವರೂಪವಾದ ಸತ್ಯತ್ವವು ಜಗತ್ತಿನಲ್ಲಿಯೂ ಆಗಮದಿಂದಲೇ ಸಿದ್ಧವಾಗಿದೆ ಎಂದು ತಿಳಿಸಲು 'ವಿಶ್ವಂ ಸತ್ಯಂ ....' ಇತ್ಯಾದಿ ಮೂಲವು ಪ್ರವೃತ್ತವಾಗಿದೆ ಎಂಬ ಅಭಿಪ್ರಾಯ ಇಲ್ಲದೇ ಹೋಗಿದ್ದರೆ, ಪ್ರತ್ಯಕ್ಷಾದಿ .... ಎಂಬ ಆದಿಪದದಿಂದಲೇ ಆಗಮವೂ ಗೃಹೀತವಾಗುವುದರಿಂದ ಪುನಃ 'ವಿಶ್ವಂ ಸತ್ಯಂ' ಎಂದು ಆಗಮವನ್ನು ಗ್ರಹಿಸಿದ್ದು ವ್ಯರ್ಥವಾಗಬೇಕಾದೀತು ಎಂದು ಅಭಿಪ್ರಾಯ.

ಇಲ್ಲಿ ಪ್ರತ್ಯಕ್ಷವು ವರ್ತಮಾನಮಾತ್ರಗ್ರಾಹಿಯಾದ್ದರಿಂದ ಕಾಲತ್ರಯಾಬಾಧ್ಯತ್ವರೂಪವಾದ ಸತ್ಯತ್ವವು ಜಗತ್ತಿನಲ್ಲಿ ಪ್ರತ್ಯಕ್ಷಾದಿಗಳಿಂದ ಸಿದ್ಧವಾಗಿಲ್ಲವಲ್ಲ ? ಎಂಬ ಶಂಕೆಗೆ, ಪ್ರತ್ಯಕ್ಷಾದಿಗಳಿಂದ ಸಿದ್ಧವಾಗದಿದ್ದರೂ 'ವಿಶ್ವಂ ಸತ್ಯಂ' ಇತ್ಯಾದಿ ಆಗಮದಿಂದ ಸಿದ್ಧವಾಗಿದೆ ಎಂಬುದಾಗಿ ಏನು ಸಮಾಧಾನ ಹೇಳಿದ್ದಾರೆ, ಅದು ಅಂಗೀಕಾರವಾದವಾಗಿದೆ. ಜಗತ್ತಿನಲ್ಲಿ ತ್ರೈಕಾಲಿಕಾಬಾಧ್ಯತ್ವರೂಪವಾದ ಸತ್ಯತ್ವವು ಪ್ರತ್ಯಕ್ಷಾದಿಗಳಿಂದಲೇ ಹೇಗೆ ಸಿದ್ಧವಾಗಿದೆ ಎನ್ನುವುದನ್ನು ಬೇರೆ ಗ್ರಂಥಗಳಲ್ಲಿ ಉಪಪಾದನೆ ಮಾಡಲಾಗಿದೆ.

**ಟೀಕಾ :-** **ಪ್ರತಿರೋಧೋಽಪಿ ದ್ವಿವಿಧಃ ತೇನೈವ ಹೇತುನಾ ಹೇತ್ವಂತರೇಣೇತಿ । ತತ್ರಾದ್ಯಸ್ಯಾಂತರಂಗತ್ವಾತ್ ಪ್ರಥಮಂ ತಮಾಹ -**

**ಮೂಲ :-** **'ರಜತಂ ದೃಷ್ಟಮ್' ಇತಿ ಭ್ರಮಮಾತ್ರತ್ವಾತ್**
**'ವಿಮತಂ ಸತ್ಯಂ ದೃಶ್ಯತ್ವಾತ್ ಆತ್ಮವತ್' ಇತ್ಯಪಿ**
**ಪ್ರಯೋಜ್ಯತ್ವಾತ್ ಪ್ರಕರಣಸಮಃ ।**

**ವಿಮತಂ ಇತಿ ಪೂರ್ವವತ್ ವ್ಯಾಖ್ಯೇಯಮ್ । ಸತ್ಯಂ ಕಾಲತ್ರಯಾಬಾಧ್ಯಮ್ । ಆತ್ಮನೋಽಪಿ ದೃಶ್ಯತ್ವಸ್ಯೋಪಪಾದಿತತ್ವಾನ್ನ ದೃಷ್ಟಾಂತಃ ಸಾಧನವಿಕಲಃ । 'ಇತ್ಯಪಿ ಪ್ರಯೋಜ್ಯತ್ವಾತ್' ಪ್ರಪಂಚಮಿಥ್ಯಾತ್ವ ಇವ ಶುಕ್ತಿರೂಪ್ಯೇಽಪಿ ದೃಶ್ಯತ್ವಸ್ಯ ಪ್ರಯೋಕ್ತುಂ ಶಕ್ಯತ್ವಾತ್ ।**



**ಅನುವಾದ :-** ದೃಶ್ಯತ್ವಾನುಮಾನಕ್ಕೆ ಪ್ರಮಾಣಬಾಧವನ್ನು ಹೇಳಿ ಪ್ರಕೃತ ಪ್ರಮಾಣಪ್ರತಿರೋಧವನ್ನು ಹೇಳಲು ಪ್ರವೃತ್ತರಾಗಿದ್ದಾರೆ. ಪ್ರತಿರೋಧವೂ ಸಹ ಎರಡುವಿಧ. ಸಾಧ್ಯಸಾಧಕವಾಗಿ ಉದಾಹರಿಸಿದ ಅದೇ ಹೇತುವಿನಿಂದಲೇ ಸಾಧ್ಯಾಭಾವವನ್ನು ಸಾಧಿಸುವುದು. ಹಾಗೂ ಬೇರೆ ಹೇತುವಿನಿಂದ ಸಾಧ್ಯಾಭಾವವನ್ನು ಸಾಧಿಸುವುದು ಎಂದು.

ಈ ಎರಡರಲ್ಲಿ ಅದೇ ಹೇತುವಿನಿಂದ ಸಾಧ್ಯಾಭಾವವನ್ನು ಸಾಧಿಸುವುದು ಅಂತರಂಗವಾದ್ದರಿಂದ ಅದನ್ನು ಮೊದಲಿಗೆ ಹೇಳುತ್ತಾರೆ -

**ಮೂಲ :- 'ರಜತಂ ದೃಷ್ಟಂ' ಇತಿ ಭ್ರಮಮಾತ್ರತ್ವಾತ್ 'ವಿಮತಂ ಸತ್ಯಂ ದೃಶ್ಯತ್ವಾತ್ ಆತ್ಮವತ್' ಇತ್ಯಪಿ ಪ್ರಯೋಜ್ಯತ್ವಾತ್ ಪ್ರಕರಣಸಮಃ ।**

**ಮೂಲಾರ್ಥ :-** 'ರಜತಂ ದೃಷ್ಟಂ' ಎಂಬ ಅನುವ್ಯವಸಾಯವು (ರಜತಜ್ಞಾನಕ್ಕೆ ರಜತವಿಷಯಕತ್ವವನ್ನು ತಿಳಿಸುವ ಮಾನಸ ಅನುವ್ಯವಸಾಯವು) ಭ್ರಮರೂಪವಾಗಿದ್ದರಿಂದ 'ವಿಯದಾದಿಪ್ರಪಂಚವು ಸತ್ಯವಾಗಿದೆ ದೃಶ್ಯವಾಗಿದ್ದರಿಂದ ಆತ್ಮನಂತೆ' ಎಂಬುದಾಗಿ ಅದೇ ದೃಶ್ಯತ್ವ ಹೇತುವಿನಿಂದಲೇ ಸತ್ಯತ್ವವನ್ನೂ ಸಾಧಿಸಲು ಬರುವುದರಿಂದ ಪ್ರಕರಣಸಮದೋಷ ಬರುತ್ತದೆ.

ಯಾವ ದೃಶ್ಯತ್ವಹೇತುವಿನಿಂದ ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸುತ್ತಿದ್ದೀರೋ ಅದೇ ದೃಶ್ಯತ್ವಹೇತುವಿನಿಂದಲೇ ''ವಿಮತಂ ಸತ್ಯಂ ದೃಶ್ಯತ್ವಾತ್ ಆತ್ಮವತ್'' ಎಂಬುದಾಗಿ ಜಗತ್ತಿಗೆ ಸತ್ಯತ್ವವನ್ನೂ ಸಾಧಿಸಲು ಬರುವುದರಿಂದ ನಿಮ್ಮ ದೃಶ್ಯತ್ವಾನುಮಾನವು ಪ್ರಕರಣಸಮವಾಗಿದೆ.

ಹಿಂದೆ 'ವಿಮತಂ ಮಿಥ್ಯಾ' ಎಂಬುದಾಗಿ ಪರರ ಅನುಮಾನವನ್ನು ಅನುವಾದಿಸುವಾಗ ವಿಮತಂ ಎಂದು ಏಕೆ ಹೇಳಿದರು ? ಇತ್ಯಾದಿಯಾಗಿ ವಿಮತ ಶಬ್ದದ ಅರ್ಥ-ವಿವರಣೆಗಳನ್ನು ತಿಳಿಸಲಾಗಿದೆ. ಪ್ರಕೃತದಲ್ಲಿಯೂ ಅದೇ ರೀತಿಯಾಗಿ ವಿಮತಶಬ್ದದ ಅರ್ಥ-ವಿವರಣೆಗಳನ್ನು [1] ತಿಳಿಯಬೇಕು.

---

1 ''ಸರ್ವಂ ಸತ್ಯಂ'' ಎಂದು ಹೇಳಿದರೆ ಶುಕ್ತಿರಜತ - ಬ್ರಹ್ಮ ಎಲ್ಲವೂ ಪಕ್ಷಕೋಟಿ ಪ್ರವಿಷ್ಟವಾಗುವುದರಿಂದ ಶುಕ್ತಿರಜತದಲ್ಲಿ ಸತ್ಯತ್ವವು ಬಾಧಿತವಾಗುತ್ತದೆ, ಬ್ರಹ್ಮನಲ್ಲಿ ಸತ್ಯತ್ವವು ಸಿದ್ಧವಾದ್ದರಿಂದ ಸಿದ್ಧಸಾಧನತಾ ಬರುತ್ತದೆ. ಆದ್ದರಿಂದ ವಿಮತಂ ಎಂದು ಹೇಳಬೇಕು.

ಸತ್ಯತ್ವವು ಸಾಧ್ಯವಾಗಿದೆ. ಸತ್ಯತ್ವ ಎಂದರೆ - ಕಾಲತ್ರಯಾಬಾಧ್ಯತ್ವ (ಮೂರು ಕಾಲಗಳಲ್ಲಿಯೂ ಬಾಧಿತವಾಗದೇ ಇರುವುದು.) ಬ್ರಹ್ಮನು ಹೇಗೆ ಕಾಲತ್ರಯಾಬಾಧ್ಯನಾಗಿದ್ದಾನೆಯೋ ಅದರಂತೆ ವಿಯದಾದಿಪ್ರಪಂಚವೂ ಸಹ ಕಾಲತ್ರಯಾಬಾಧ್ಯವಾಗಿದೆ ಎಂದು ಭಾವ.

ಆತ್ಮನನ್ನು ದೃಷ್ಟಾಂತ ಮಾಡಿದ್ದೀರಿ. ಆ ಆತ್ಮನಿಗೆ ನಾವು (ಮಾಯಾವಾದಿಗಳು) ದೃಶ್ಯತ್ವವನ್ನು ಒಪ್ಪಿಲ್ಲವಾದ್ದರಿಂದ (ದೃಷ್ಟಾಂತದಲ್ಲಿ ಹೇತು ಬಾರದ ಕಾರಣ) ಸಾಧನವೈಕಲ್ಯ ಬರುತ್ತದೆ ? ಎಂಬುದಾಗಿ ಶಂಕಿಸಲು ಅವಕಾಶವಿಲ್ಲ. ಏಕೆಂದರೆ -

**''ಆತ್ಮನೋಽಪಿ ದೃಶ್ಯತ್ವಾತ್ ಅನೈಕಾಂತಿಕತಾ ।''**

ಎಂಬುದಾಗಿ ದೃಶ್ಯತ್ವಾನುಮಾನಕ್ಕೆ ವ್ಯಭಿಚಾರ ಹೇಳುವ ಪ್ರಸಂಗದಲ್ಲಿ ಹಿಂದೆ ಆತ್ಮನಿಗೆ ದೃಶ್ಯತ್ವವನ್ನು ವಿಸ್ತಾರವಾಗಿ ಸಮರ್ಥಿಸಿದ್ದರಿಂದ ಸಾಧನವೈಕಲ್ಯ ಬರುವುದಿಲ್ಲ.

ಮೂಲದಲ್ಲಿರುವ ''ಇತ್ಯಪಿ ಪ್ರಯೋಜ್ಯತ್ವಾತ್'' ಎಂಬ ವಾಕ್ಯಕ್ಕೆ ''ಪ್ರಪಂಚಮಿಥ್ಯಾತ್ವವಿಷಯದಲ್ಲಿ ದೃಶ್ಯತ್ವವನ್ನು ಹೇತುವನ್ನಾಗಿ ಮಾಡಿದಂತೆ ಪ್ರಪಂಚಸತ್ಯತ್ವ ವಿಷಯದಲ್ಲಿಯೂ ದೃಶ್ಯತ್ವವನ್ನು ಹೇತುವನ್ನಾಗಿ ಮಾಡಲು ಬರುವುದರಿಂದ'' ಎಂದು ಅರ್ಥ. ದೃಶ್ಯತ್ವ ಹೇತುವಿನಿಂದ ಪ್ರಪಂಚಮಿಥ್ಯಾತ್ವವನ್ನು ಸಾಧಿಸುವಂತೆ ಅದೇ ದೃಶ್ಯತ್ವ ಹೇತುವಿನಿಂದ ಪ್ರಪಂಚಸತ್ಯತ್ವವನ್ನೂ ಸಾಧಿಸಲು ಬರುತ್ತದೆ ಎಂದು ಭಾವ.

---

ವಿಮತಿ ಎಂದರೆ ಸಂಶಯ. ವಿಮತ ಎಂದರೆ ಸಂಶಯಕ್ಕೆ ಧರ್ಮಿಯಾದದ್ದು. ಯಾವ ಸಂಶಯ ತೆಗೆದುಕೊಳ್ಳಬೇಕು ? ಎಂದರೆ, ಸತ್ಯಂ ಎಂಬುದಾಗಿ ಸಾಧ್ಯವಿಶೇಷವನ್ನು (ಒಂದು ಕೋಟಿಯನ್ನು) ಹೇಳಿದ್ದರಿಂದ ಸತ್ಯತ್ವ-ಮಿಥ್ಯಾತ್ವ ಕೋಟಿಕವಾದ ಸಂಶಯವನ್ನೇ ತೆಗೆದುಕೊಳ್ಳಬೇಕು. ಹಾಗಾದರೆ ಸತ್ಯತ್ವ-ಮಿಥ್ಯಾತ್ವ ಕೋಟಿಕಸಂಶಯಕ್ಕೆ ವಿಷಯವಾದ (ಧರ್ಮಿಯಾದ) ವಿಯದಾದಿಗಳು ವಿಮತ ಶಬ್ದದಿಂದ ಗ್ರಾಹ್ಯವಾಗಿವೆ.

ವಿಮತಶಬ್ದಪ್ರಯೋಗದಿಂದ ಆಶ್ರಯಾಸಿದ್ಧಿ-ಅಪ್ರಸಿದ್ಧವಿಶೇಷಣತಾ- ಸಿದ್ಧಸಾಧನತಾ-ಬಾಧ ದೋಷಗಳು ಬರುವುದಿಲ್ಲವೆಂದು ಸೂಚಿತವಾಗುವುದರಿಂದ, ವಿಯದಾದಿಕಂ ಎಂದು ಹೇಳದೇ ವಿಮತಂ ಎಂದು ಹೇಳಿದ್ದು ಸಾರ್ಥಕ ಇತ್ಯಾದಿ ವಿಚಾರಗಳನ್ನು ಹಿಂದೆ ತಿಳಿದಂತೆ ತಿಳಿಯಬೇಕು.




**ಟೀಕಾ :- ನನು ಮಿಥ್ಯಾಭೂತೇಽಪಿ ಶುಕ್ತಿರಜತೇ ವರ್ತಮಾನಂ ದೃಶ್ಯತ್ವಂ ಕಥಂ ಪ್ರಪಂಚಸತ್ಯತಾಸಿದ್ಧೌ ಪ್ರಯೋಕ್ತುಂ ಶಕ್ಯತೇ ? ಇತಿ । ಅತ ಉಕ್ತಂ 'ರಜತಂ' ಇತ್ಯಾದಿ । ಇದಮತ್ರಾಕೂತಮ್ । ದೃಗ್ವಿಷಯತ್ವಂ ಹಿ ದೃಶ್ಯತ್ವಮತ್ರಾಭಿಮತಮ್ । 'ಯತ್ಸನ್ನಿಕೃಷ್ಟಕರಣೇನ ಯತ್ ಜ್ಞಾನಮುತ್ಪದ್ಯತೇ ಸ ತಸ್ಯ ವಿಷಯಃ'' ಇತಿ ಅನಿತ್ಯಜ್ಞಾನೇ ವ್ಯವಸ್ಥಾ । ರಜತಜ್ಞಾನಂ ಚ ಶುಕ್ತಿಸನ್ನಿಕೃಷ್ಟೇಂದ್ರಿಯೇಣ ಜಾತಮತಿ ಸೈವ ತಸ್ಯ ವಿಷಯಃ ।**

**ಅತ ಏವ 'ಅನ್ಯತ್ ಅನ್ಯಾತ್ಮನಾ ಅವಗಾಹತೇ' ಇತಿ ಭ್ರಮಃ । ತಥಾ ಚ 'ರಜತಂ ದೃಷ್ಟಂ' ಇತಿ ಯೋಽಯಮನುವ್ಯವಸಾಯಃ ಸ ಚ ಭ್ರಮ ಏವ । ನ ಚ ಭ್ರಾಂತಿಕಲ್ಪಿತೇನ ವಿಪಕ್ಷವೃತ್ತಿತ್ವೇನ ಲಿಂಗಸ್ಯ ವ್ಯಭಿಚಾರೋ ಭವತಿ । ತಥಾ ಸತಿ ಸರ್ವಾನುಮಾನೋಚ್ಛೇದಪ್ರಸಂಗಾತ್ ।**

**ಅನುವಾದ :-** ಮಿಥ್ಯಾಭೂತವಾದ (ಸತ್ಯತ್ವಸಾಧ್ಯ ಇಲ್ಲದೇ ವಿಪಕ್ಷವಾದ) ಶುಕ್ತಿರಜತದಲ್ಲಿಯೂ ದೃಶ್ಯತ್ವ ಇರುವುದರಿಂದ ವ್ಯಭಿಚಾರ ಬರುತ್ತದೆ. ಅಂತಹ ವ್ಯಭಿಚರಿತವಾದ ದೃಶ್ಯತ್ವಹೇತುವು ಹೇಗೆ ಪ್ರಪಂಚಸತ್ಯತ್ವಸಾಧಕವಾಗುತ್ತದೆ ? ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಆಚಾರ್ಯರು - ''ರಜತಂ ದೃಷ್ಟಂ ಇತಿ ಭ್ರಮಮಾತ್ರತ್ವಾತ್'' ಎಂಬುದಾಗಿ ಹೇಳಿದರು.

ಇಲ್ಲಿ ಶುಕ್ತಿರಜತದಲ್ಲಿ ದೃಶ್ಯತ್ವ ಇಲ್ಲದ ಕಾರಣ ವ್ಯಭಿಚಾರ ಬರುವುದಿಲ್ಲ ಎಂಬುದಾಗಿ ಸಮಾಧಾನ ಹೇಳುವವರಿದ್ದೀರಿ. ಆದರೆ ಹಿಂದೆ

**''ಅನಿರ್ವಚನೀಯಾಸಿದ್ಧೇರೇವ ಸಪಕ್ಷಾಭಾವಾತ್ ವಿರುದ್ಧಃ''**

ಎಂಬ ವಾಕ್ಯದಲ್ಲಿ ''ಅನಿರ್ವಚನೀಯವಾದ ವಸ್ತುವೇ ಅಪ್ರಸಿದ್ಧವಾದ್ದರಿಂದ ಸಪಕ್ಷ ಯಾವುದೂ ಇಲ್ಲ, ಹಾಗಾಗಿ ವಿಯದಾದಿವ್ಯತಿರಿಕ್ತವಾದ ಎಲ್ಲವೂ ವಿಪಕ್ಷವೇ ಎಂದು ತಿಳಿಸಿ, ವಿಪಕ್ಷವಾದ ಶುಕ್ತಿರಜತದಲ್ಲಿ ದೃಶ್ಯತ್ವ ಇರುವುದರಿಂದ ಸಾಧ್ಯವಿಪರೀತ ವ್ಯಾಪ್ತಿಯಿಂದಾಗಿ ದೃಶ್ಯತ್ವಹೇತು ವಿರುದ್ಧವಾಯಿತು'' ಎಂಬುದಾಗಿ ಶುಕ್ತಿರಜತದಲ್ಲಿ ದೃಶ್ಯತ್ವ ಇದೆ ಎಂದು ಹೇಳಿದ್ದೀರಿ. ಅಲ್ಲದೇ

**''ಆತ್ಮನೋಽಪಿ ದೃಶ್ಯತ್ವಾತ್ ಅನೈಕಾಂತಿಕತಾ ಚ ''**

ಎಂಬ ವಾಕ್ಯದಲ್ಲಿ ವ್ಯಭಿಚಾರ ಹೇಳುವಾಗಲೂ ಸಹ ಅಪಿಶಬ್ದದಿಂದ ಸಪಕ್ಷವಾದ ಶುಕ್ತಿರಜತದಲ್ಲಿ ದೃಶ್ಯತ್ವ ಇದೆ ಎಂದು ಹೇಳಿದ್ದೀರಿ. ಅಂದಮೇಲೆ ಪೂರ್ವೋತ್ತರ ಗ್ರಂಥಗಳಲ್ಲಿ ವಿರೋಧ ಬಂತಲ್ಲವೇ ?

ಈ ವಿಧವಾಗಿ ಶಂಕೆ ಬಂದಾಗ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಟೀಕಾಕೃತ್ಪಾದರು 'ಇದಮತ್ರಾಕೂತಂ' ಎಂಬುದಾಗಿ ಅದರ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾರೆ.

ಇಲ್ಲಿ ತಿಳಿಯಬೇಕಾದ ಅಭಿಪ್ರಾಯ ಇಷ್ಟಿದೆ :- ವಿಮತಂ ಸತ್ಯಂ ದೃಶ್ಯತ್ವಾತ್ ಎಂಬ ನಮ್ಮ ಅನುಮಾನದಲ್ಲಿ ದೃಶ್ಯತ್ವವನ್ನು ಹೇತುವನ್ನಾಗಿ ಮಾಡಿದ್ದೇವೆ. ಅಲ್ಲಿ ದೃಶ್ಯತ್ವ ಎಂದರೆ ದೃಗ್‌ವಿಷಯತ್ವ = ಜ್ಞಾನವಿಷಯತ್ವ ಎಂದು ವಿವಕ್ಷಿತವಾಗಿದೆ.

''ಯತ್ಸನ್ನಿಕೃಷ್ಟಕರಣೇನ ಯತ್ ಜ್ಞಾನಂ ಉತ್ಪದ್ಯತೇ ಸ ತಸ್ಯ ವಿಷಯಃ'' ''ಯಾವ ವಸ್ತುವಿನಿಂದ ಸನ್ನಿಕೃಷ್ಟವಾದ ಇಂದ್ರಿಯದಿಂದ ಯಾವ ಜ್ಞಾನ ಉಂಟಾಗುತ್ತದೆಯೋ ಆ ಜ್ಞಾನಕ್ಕೆ ಆ ವಸ್ತು ವಿಷಯ'' ಎನ್ನುವುದು ಅನಿತ್ಯಜ್ಞಾನದಲ್ಲಿ ವ್ಯವಸ್ಥೆ. ಈ ರಜತಜ್ಞಾನವು ಅನಿತ್ಯಜ್ಞಾನವಾದ್ದರಿಂದ, ಇಲ್ಲಿ ಆರೋಪಿತವಾಗಿ ಅಸತ್ ಆಗಿರುವ ರಜತಕ್ಕೆ ಇಂದ್ರಿಯಸನ್ನಿಕರ್ಷವಾಗಲು ಸಾಧ್ಯವಿಲ್ಲದ ಕಾರಣ, ಶುಕ್ತಿಸನ್ನಿಕೃಷ್ಟವಾದ ಇಂದ್ರಿಯದಿಂದಲೇ ರಜತಜ್ಞಾನ ಹುಟ್ಟುವುದು. ಶುಕ್ತಿಸನ್ನಿಕೃಷ್ಟವಾದ ಇಂದ್ರಿಯದಿಂದ ಜನ್ಯವಾದ್ದರಿಂದ ರಜತಜ್ಞಾನಕ್ಕೆ ಶುಕ್ತಿಯೇ ವಿಷಯ. ರಜತವು ಕೇವಲ ಉಲ್ಲೇಖ್ಯವಾಗುತ್ತದೆ.

ಈ ರೀತಿಯಾಗಿ ಉಲ್ಲೇಖ್ಯವಾದ ರಜತ, ಇಂದ್ರಿಯಸನ್ನಿಕೃಷ್ಟವಾದ ಶುಕ್ತಿ ಇವುಗಳಲ್ಲಿ ಭೇದ ಇರುವುದರಿಂದಲೇ

**'ಅನ್ಯತ್ ಅನ್ಯಾತ್ಮನಾ ಅವಗಾಹತೇ'**

ಇಂದ್ರಿಯಸನ್ನಿಕೃಷ್ಟವಾದ ಶುಕ್ತಿಯನ್ನು ಇಂದ್ರಿಯಸನ್ನಿಕೃಷ್ಟವಲ್ಲದ ರಜತರೂಪವಾಗಿ ವಿಷಯೀಕರಿಸುತ್ತದೆ = ಉಲ್ಲೇಖಿಸುತ್ತದೆ ಎಂಬ ಕಾರಣಕ್ಕೆ ರಜತಜ್ಞಾನ ಭ್ರಮವಾಗಿದೆ.

ಹಾಗಾದರೆ ರಜತದಲ್ಲಿ ಉಲ್ಲೇಖ್ಯತ್ವ ಇದೆಯೇ ಹೊರತು ಇಂದ್ರಿಯಸನ್ನಿಕೃಷ್ಟತ್ವ ರೂಪ ಜ್ಞಾನವಿಷಯತ್ವ ಇಲ್ಲ.




ರಜತಕ್ಕೆ ಜ್ಞಾನವಿಷಯತ್ವ ಇಲ್ಲ ಎಂದಾದರೆ, 'ರಜತಂ ದೃಷ್ಟಮ್' ಎಂಬುದಾಗಿ ರಜತಕ್ಕೆ ಜ್ಞಾನವಿಷಯತ್ವವು ತಿಳಿದುಬರುತ್ತಿರುವುದರಿಂದ ಅಂತಹ ರಜತಜ್ಞಾನಕ್ಕೆ ರಜತಸನ್ನಿಕೃಷ್ಟಇಂದ್ರಿಯಜನ್ಯತ್ವವನ್ನು ತಿಳಿಸುವ ಅನುವ್ಯವಸಾಯದ ವಿರೋಧ ಬರುತ್ತದೆಯಲ್ಲವೇ ? ಎಂಬುದಾಗಿ ಶಂಕಿಸುವುದು ಸರಿಯಲ್ಲ. ಕಾರಣ – ''ರಜತಂ ದೃಷ್ಟಂ'' ಎಂಬ ಅನುವ್ಯವಸಾಯ ಏನಿದೆ ಅದು [1]ಭ್ರಮವೇ ಆಗಿದೆ.

ಶುಕ್ತಿರಜತದಲ್ಲಿ ವಾಸ್ತವಿಕವಾಗಿ ದೃಗ್ವಿಷಯತ್ವ =ದೃಶ್ಯತ್ವ ಇಲ್ಲದೇ ಹೋದರೂ ಭ್ರಾಂತಿಕಲ್ಪಿತವಾದ ದೃಶ್ಯತ್ವ ಹೇಳಬಹುದಾದ್ದರಿಂದ ನಿಮ್ಮ ಅನುಮಾನಕ್ಕೆ ಶುಕ್ತಿರಜತದಲ್ಲಿ ವ್ಯಭಿಚಾರ ಬರುತ್ತದೆಯಲ್ಲವೇ ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ - ಭ್ರಾಂತಿಕಲ್ಪಿತವಾದ ಹೇತು ವಿಪಕ್ಷವೃತ್ತಿಯಾಗಿದೆ ಎಂಬ ಕಾರಣಕ್ಕೆ ವ್ಯಭಿಚಾರ ಹೇಳುವುದು ಸರಿಯಲ್ಲ. ಒಂದುವೇಳೆ ಹಾಗೆ ಹೇಳುವುದಾದರೆ (ವಾಸ್ತವಿಕವಾದ ಧೂಮ ಹ್ರದದಲ್ಲಿ ಇಲ್ಲದೇ ಹೋದರೂ) ಭ್ರಾಂತಿಕಲ್ಪಿತವಾದ ಧೂಮ ಹ್ರದದಲ್ಲಿ ಇರುವುದರಿಂದ ಧೂಮಾನುಮಾನವೂ (ಎಲ್ಲ ಸದನುಮಾನಗಳೂ) ವ್ಯಭಿಚರಿತವಾಗಬೇಕಾದ ಅತಿಪ್ರಸಂಗ ಬರುತ್ತದೆ.

---

1ಇಲ್ಲಿ ಅಭಿಪ್ರಾಯವಿಶೇಷ ಇದೆ : (ಶ್ರೀನಿವಾಸತೀರ್ಥೀಯ ವ್ಯಾಖ್ಯಾನವಿಶೇಷ)

ಪರಾಭಿಮತವಾದ ಅನುವ್ಯವಸಾಯವೇ ನಮಗೆ ಸಾಕ್ಷೀ ಎನಿಸಿದೆ. ಆ ಸಾಕ್ಷಿಗೆ ಅವ್ಯಭಿಚರಿತವಾಗಿ ಪ್ರಾಮಾಣ್ಯನಿಯಮ ಇರುವುದರಿಂದ, ಅಂತಹ 'ರಜತಂ ದೃಷ್ಟಂ' ಇತ್ಯಾಕಾರಕ ಸಾಕ್ಷಿಜ್ಞಾನಕ್ಕೆ ಭ್ರಮತ್ವವನ್ನು ಹೇಳಿದರೆ ಅಪಸಿದ್ಧಾಂತ ಬರುವುದಲ್ಲ ? ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಹಿರಿಯರ ಸಮಾಧಾನ ಇಂತಿದೆ.

'ಇದಂ ರಜತಂ' ಎಂಬುದಾಗಿ ಕೇವಲ ಜ್ಞಾನಸ್ವರೂಪ ಏನಿದೆ ಅದು ಮಾತ್ರವೇ ಸಾಕ್ಷಿವೇದ್ಯವಾಗಿದೆ. ಜ್ಞಾನದ ವಿಷಯದಲ್ಲಿ ಎಂದಿಗೂ ಸಂಶಯ ಇಲ್ಲದ ಕಾರಣ 'ಎಲ್ಲೆಡೆ ಜ್ಞಾನವು ಸಾಕ್ಷಿವೇದ್ಯ' ಎಂಬ ನಿಯಮ ಅಬಾಧಿತ. ಆದರೆ ''ಯತ್ ಕ್ವಚಿತ್ ವ್ಯಭಿಚಾರಿ ಸ್ಯಾತ್ ದರ್ಶನಂ ಮಾನಸಂ ಹಿ ತತ್ ।'' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಆಚಾರ್ಯರು ತಿಳಿಸಿದ್ದರಿಂದ, ಆ ಜ್ಞಾನವು ರಜತಸನ್ನಿಕೃಷ್ಟಕರಣಜನ್ಯವಾಗಿದ್ದರಿಂದ ರಜತವಿಷಯಕವಾಗಿದೆ ಎಂದು ತಿಳಿಸುವ ಯಾವ ಅನುವ್ಯವಸಾಯ ಇದೆಯೋ ಅದು ಮಾನಸಜ್ಞಾನವೇ ಹೊರತು ಸಾಕ್ಷಿರೂಪ ಅಲ್ಲ. ಅಂತಹ ಮಾನಸಜ್ಞಾನವು (ಅನುವ್ಯವಸಾಯವು) ಭ್ರಮವಾಗಿದೆ ಎಂದು ಅಭಿಪ್ರಾಯ ತಿಳಿಯಬೇಕು.

**ಅವತಾರಿಕೆ :-** ಹಾಗಾದರೆ ಹಿಂದೆ ಶುಕ್ತಿರಜತಕ್ಕೂ ಸಹ ದೃಶ್ಯತ್ವವನ್ನು ಅಂಗೀಕರಿಸಿ ಮಿಥ್ಯಾತ್ವಾನುಮಾನಕ್ಕೆ ವಿರುದ್ಧತ್ವವನ್ನು ಹೇಳಿದ್ದರ ವಿರೋಧ ಬರುವುದಿಲ್ಲವೇ ? ಎಂಬುದಾಗಿ ಶಂಕೆ ಬಂದರೆ, ಪೂರ್ವವಿರೋಧವನ್ನು ಪರಿಹರಿಸುತ್ತಾರೆ.

**ಟೀಕಾ :- ದೃಗ್ವಿಷಯತ್ವಾಭಾವೇऽಪಿ ದೃಗ್ವ್ಯಾವರ್ತಕತ್ವಮಾತ್ರಮಸತೋऽಪಿ ಶುಕ್ತಿರಜತಸ್ಯಾಸ್ತೀತಿ ತದಭ್ಯುಪಗಮೇನ ನ ವಿರುದ್ಧಾದಿವಾದವಿರೋಧ ಇತಿ ।**

**ಅನುವಾದ :-** ಶುಕ್ತಿರಜತದಲ್ಲಿ ತತ್ಸನ್ನಿಕೃಷ್ಟಕರಣಜನ್ಯತ್ವ ರೂಪವಾದ ದೃಶ್ಯತ್ವ ಇಲ್ಲದೇ ಹೋದರೂ ಸಹ, ದೃಗುಲ್ಲೇಖ್ಯತ್ವ ರೂಪವಾದ ದೃಗ್ವ್ಯಾವರ್ತಕತ್ವ ಏನಿದೆ ಅಂತಹ ದೃಗ್ವ್ಯಾವರ್ತಕತ್ವ ರೂಪ ದೃಶ್ಯತ್ವವನ್ನು ಅಂಗೀಕರಿಸಿ ಹಿಂದೆ ವಿರುದ್ಧ-ಅನೈಕಾಂತಿಕತಾಗಳನ್ನು ಹೇಳಲಾಗಿದೆ. ಈಗ ತತ್ಸನ್ನಿಕೃಷ್ಟಕರಣಜನ್ಯತ್ವರೂಪದೃಶ್ಯತ್ವ ಇಲ್ಲ ಎಂದು ಹೇಳಿ ಸತ್ಯತ್ವಾನುಮಾನದಲ್ಲಿ ವ್ಯಭಿಚಾರಪರಿಹಾರ ಮಾಡಿಕೊಳ್ಳುತ್ತಿದ್ದೇವೆ. ಆದ್ದರಿಂದ ಪೂರ್ವಗ್ರಂಥವಿರೋಧ ಬರುವುದಿಲ್ಲ (ವಿರುದ್ಧ-ಅನೈಕಾಂತಿಕತ್ವೋಕ್ತಿ-ವಿರೋಧ ಬರುವುದಿಲ್ಲ) ಎಂದು ಭಾವ.

**ಇಲ್ಲಿ ಇಷ್ಟು ಅಭಿಪ್ರಾಯ ತಿಳಿಯುವುದು :-**

ಶುಕ್ತಿರಜತದಲ್ಲಿ ದೃಗ್ವ್ಯಾವರ್ತಕತ್ವವನ್ನಾದರೂ ಹೇಗೆ ಹೇಳಲು ಸಾಧ್ಯ ? ಏಕೆಂದರೆ, ವ್ಯಾವರ್ತಕತ್ವ ಎಂದರೆ ವ್ಯಾವೃತ್ತಿಧೀಜನಕತ್ವ. ವ್ಯಾವೃತ್ತಿಧೀಗೆ ಜನಕವಾಗಬೇಕಾದರೆ 'ಕಾರ್ಯನಿಯತಪೂರ್ವವೃತ್ತಿ ಕಾರಣಂ' ಎಂಬ ನಿಯಮ ಪ್ರಕಾರ ಪೂರ್ವಕಾಲವೃತ್ತಿಯಾಗಬೇಕು. ಅಸತ್ ಆದ ಶುಕ್ತಿರಜತಕ್ಕೆ ಅಸ್ತಿತ್ವವೇ ಇಲ್ಲದ ಕಾರಣ ಪೂರ್ವಕಾಲವೃತ್ತಿಯಾಗಲು ಸಾಧ್ಯವಿಲ್ಲವಾದ್ದರಿಂದ ವ್ಯಾವೃತ್ತಿಧೀಜನಕತ್ವ ರೂಪವಾದ ದೃಶ್ಯತ್ವವು ಹೇಗೆ ಕೂಡುತ್ತದೆ ?

ಈ ರೀತಿಯಾಗಿ ಶಂಕೆ ಬಂದರೆ, ಅದಕ್ಕೆ ಸಮಾಧಾನ ಹೇಳುತ್ತಾರೆ - ವ್ಯಾವರ್ತಕತ್ವ ಎಂದರೆ ವ್ಯಾವೃತ್ತಿಧೀಜನಕತ್ವ ಎಂದು ಅರ್ಥ ಹೇಳುತ್ತಿದ್ದರೆ ಆಗ ಈ ರೀತಿ ಸಮಸ್ಯೆ ಬರುತ್ತಿತ್ತು. ಆದರೆ ವ್ಯಾವರ್ತಕತ್ವ ಎಂದರೆ ವ್ಯಾವೃತ್ತಿಧೀಜನಕತ್ವ ಎಂದು ಅರ್ಥ ಅಲ್ಲ. ಕಿಂತು ವ್ಯಾವೃತ್ತಿಧೀಜನಕಜ್ಞಾನವಿಷಯತ್ವವೇ ಆಗಿದೆ. ದೇವದತ್ತನಲ್ಲಿ ದಂಡ ಇದ್ದರೂ ಸಹ ದಂಡದ ಜ್ಞಾನ ಆಗದೇ ಹೋದರೆ ಅದಂಡಿಯಿಂದ ವ್ಯಾವೃತ್ತಿಜ್ಞಾನ ಆಗುವುದಿಲ್ಲವಾದ್ದರಿಂದ, ವ್ಯಾವರ್ತಕತ್ವ ಎಂದರೆ ವ್ಯಾವೃತ್ತಿಧೀಜನಕಜ್ಞಾನವಿಷಯತ್ವ ಎಂದೇ ಹೇಳಬೇಕು. ವ್ಯಾವೃತ್ತಿಧೀಜನಕವಾದ ಜ್ಞಾನವಾದರೂ ಸತ್ಯವೇ ಆಗಿದೆ.




ಹಾಗಾಗಿ ಶುಕ್ತಿರಜತವು ಅಸತ್ ಆದರೂ ಸಹ, ವ್ಯಾವೃತ್ತಿಧೀಜನಕವಾದ ಜ್ಞಾನದಲ್ಲಿ ಉಲ್ಲೇಖ್ಯಮಾನತ್ವ ರೂಪವಾದ ವಿಷಯತ್ವವು ಶುಕ್ತಿರಜತಕ್ಕೆ ಉಪಪನ್ನವಾಗುವುದರಿಂದ ವ್ಯಾವರ್ತಕತ್ವವು ಕೂಡುತ್ತದೆ ಎಂದು ಅಭಿಪ್ರಾಯ.

**ಟೀಕಾ :- ನನ್ವನೈಕಾಂತ್ಯಂ ದೃಷ್ಟಾಂತಸ್ಯ ಸಾಧನವೈಕಲ್ಯಂ ಚಾನಾಶ್ರಿತ್ಯ ನ ಪ್ರಕರಣಸಮಪ್ರವೃತ್ತಿರಿತಿ ತಾಭ್ಯಾಮೇವಾಲಮ್ । ಕಿಮನೇನ ?**

**ಮೈವಮ್ । ತಥಾ ಸತಿ ಹೇತುದೋಷಮನಾಶ್ರಿತ್ಯ ದೃಷ್ಟಾಂತದೋಷಾ-ಪ್ರವೃತ್ತೇಃ ಸೋऽಪ್ಯನುಪಸಂಖ್ಯೇಯಃ ಸ್ಯಾತ್ ।**

**ಅನುವಾದ :-** ಮಿಥ್ಯಾತ್ವಾನುಮಾನಕ್ಕೆ ಅನೈಕಾಂತಿಕತಾ ಹಾಗೂ ದೃಷ್ಟಾಂತದಲ್ಲಿ ಸಾಧನವೈಕಲ್ಯ ಇವುಗಳನ್ನು (ಆಶ್ರಯಿಸದೇ) ಹೇಳದೇ ನಿಮ್ಮ ಪ್ರಕರಣಸಮಾನುಮಾನ ಪ್ರವೃತ್ತವಾಗುವುದಿಲ್ಲ ಎಂದಮೇಲೆ ಅನೈಕಾಂತಿಕತಾ-ಸಾಧನವೈಕಲ್ಯಗಳಿಂದಲೇ ಮಿಥ್ಯಾತ್ವಾನುಮಾನವು ದುಷ್ಟ ಎಂದಾಗಲೀ. ಈ ಪ್ರಕರಣಸಮಾನುಮಾನವನ್ನು (ಪ್ರಕರಣಸಮ ಎಂಬ ದೋಷವನ್ನು) ಪ್ರತ್ಯೇಕ ಏಕೆ ಹೇಳಬೇಕು ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಹಾಗೆ ಒಂದು ದೋಷವನ್ನು ಉಪಜೀವಿಸಿ ಮತ್ತೊಂದು ದೋಷವನ್ನು ಹೇಳುವಾಗ, ಮೊದಲನೇ ದೋಷವೇ ಸಾಕು ಎರಡನೇ ದೋಷ ಏಕೆ ಬೇಕು ? ಎಂದು ಹೇಳುವುದಾದರೆ, ಹೇತುದೋಷವನ್ನು (ಆಶ್ರಯಿಸದೇ) ಹೇಳದೇ ದೃಷ್ಟಾಂತದೋಷ ಹೇಳಲು ಸಾಧ್ಯವಿಲ್ಲದ ಕಾರಣ, ಹೇತುದೋಷವೇ ಸಾಕು ದೃಷ್ಟಾಂತದೋಷ ಏಕೆ ಬೇಕು ? ಎಂಬುದಾಗಿ ದೃಷ್ಟಾಂತದೋಷವೂ ಅನುಪಸಂಖ್ಯೇಯವಾಗಬೇಕಾಗುತ್ತದೆ. (ಪೃಥಕ್ ಗಣನೀಯವಾಗದೇ ಹೋಗಬೇಕಾಗುತ್ತದೆ.)

**ವಿಶೇಷ ವಿವರಣೆ :-**

'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬ ನಿಮ್ಮ ಅನುಮಾನಕ್ಕೆ 'ವಿಮತಂ ಸತ್ಯಂ ದೃಶ್ಯತ್ವಾತ್' ಎಂಬ ನಮ್ಮ ಅನುಮಾನವು (ಅದೇ ಹೇತುವಿನಿಂದಲೇ ಸಾಧ್ಯಾಭಾವವನ್ನು ಸಾಧಿಸುವ ಕಾರಣ) ಪ್ರಕರಣಸಮವಾಗಿದೆ. ಈ ಮಿಥ್ಯಾತ್ವಾನುಮಾನದಲ್ಲಿ ಬ್ರಹ್ಮನು ವಿಪಕ್ಷನಾಗಿದ್ದು, ಅವನಲ್ಲಿ ದೃಶ್ಯತ್ವ ಇರುವುದರಿಂದ ಅನೈಕಾಂತಿಕತಾ ಪ್ರಾಪ್ತವಾಗುತ್ತದೆ. ಅದೇ ಬ್ರಹ್ಮನೇ ಸತ್ಯತ್ವಾನುಮಾನರಲ್ಲಿ ಸಪಕ್ಷನಾಗಿದ್ದರಿಂದ ದೃಶ್ಯತ್ವವು ಸಪಕ್ಷವೃತ್ತಿಯಾಗಿದೆ ಎಂದು ಹೇಳಬೇಕು. ಅಂದಮೇಲೆ ಮಿಥ್ಯಾತ್ವಾನುಮಾನದಲ್ಲಿ

ಹೇತುವಿಗೆ ವಿಪಕ್ಷವೃತ್ತಿತ್ವ ಇಲ್ಲದೇ ಸತ್ಯತ್ವಾನುಮಾನದಲ್ಲಿ ಸಪಕ್ಷವೃತ್ತಿತ್ವ ಕೂಡುವುದಿಲ್ಲ. ಹಾಗಾಗಿ ಮಿಥ್ಯಾತ್ವಾನುಮಾನದಲ್ಲಿ ಅನೈಕಾಂತಿಕತಾವು ಸತ್ಯತ್ವಾನುಮಾನಕ್ಕೆ ಉಪಜೀವ್ಯವಾಗಿದೆ.

ಅದೇ ರೀತಿಯಾಗಿ ಮಿಥ್ಯಾತ್ವಾನುಮಾನದಲ್ಲಿ ಸಪಕ್ಷವಾದ (ದೃಷ್ಟಾಂತವಾದ) ಶುಕ್ತಿರಜತದಲ್ಲಿ ದೃಶ್ಯತ್ವ ಇಲ್ಲದ ಕಾರಣ ಸಾಧನವೈಕಲ್ಯ ಬರುತ್ತದೆ ಎಂಬುದಾಗಿ ಸಾಧನವೈಕಲ್ಯವನ್ನು ಹೇಳಿದಾಗ, ಸತ್ಯತ್ವಾನುಮಾನದಲ್ಲಿ ಆ ಶುಕ್ತಿರಜತವು ವಿಪಕ್ಷವಾಗಿದ್ದರಿಂದ ದೃಶ್ಯತ್ವಹೇತು ವಿಪಕ್ಷವ್ಯಾವೃತ್ತವಾಗುತ್ತದೆ. ಹಾಗಾಗಿ ಮಿಥ್ಯಾತ್ವಾನುಮಾನದಲ್ಲಿ ಸಾಧನವೈಕಲ್ಯ ಹೇಳದೇ ಸತ್ಯತ್ವಾನುಮಾನದಲ್ಲಿ ವಿಪಕ್ಷವ್ಯಾವೃತ್ತಿ ಸಿದ್ಧಿಸುವುದಿಲ್ಲವಾದ್ದರಿಂದ, ಮಿಥ್ಯಾತ್ವಾನುಮಾನದಲ್ಲಿ ಸಾಧನವೈಕಲ್ಯವು ಸತ್ಯತ್ವಾನುಮಾನಕ್ಕೆ ಉಪಜೀವ್ಯವಾಗಿದೆ.

ಅಂದಮೇಲೆ ಅನೈಕಾಂತಿಕತಾ-ಸಾಧನವೈಕಲ್ಯ ಈ ಎರಡು ದೋಷಗಳಿಂದಲೇ ಮಿಥ್ಯಾತ್ವಾನುಮಾನಕ್ಕೆ ದುಷ್ಟತ್ವವು ಉಪಪನ್ನವಾಗುವಾಗ, ಅವುಗಳನ್ನು ಉಪಜೀವಿಸಿ ಹೊರಡುವ ಪ್ರಕರಣಸಮ ಎಂಬ ಮತ್ತೊಂದು ದೋಷವನ್ನು ಹೇಳುವುದು ಬೇಕಿಲ್ಲ.

ಇದು ಆಕ್ಷೇಪದ ಆಂತರ್ಯ.

ಆದರೆ ಆ ರೀತಿಯಾದ ಆಕ್ಷೇಪ ಸರಿಯಾದದ್ದಲ್ಲ. ಏಕೆಂದರೆ ಒಂದು ದೋಷವನ್ನು ಹೇಳಿ, ಆ ದೋಷವನ್ನು ಉಪಜೀವಿಸಿ ಮತ್ತೊಂದು ದೋಷವನ್ನು ಹೇಳಿದಾಗ , ಆ ಮೊದಲನೇ ದೋಷವನ್ನೇ ದೋಷತ್ವೇನ ಪರಿಗಣನೆ ಮಾಡಿ , ಆ ಮೊದಲನೇ ದೋಷವೇ ಸಾಕು ! ಅದನ್ನು ಉಪಜೀವಿಸಿ ಎರಡನೇ ದೋಷವನ್ನು ಪ್ರತ್ಯೇಕ ಹೇಳಬೇಕಿಲ್ಲ ಎಂದು ಅಂಗೀಕರಿಸುವುದಾದರೆ ಅತಿಪ್ರಸಂಗ ಬರಬೇಕಾಗುತ್ತದೆ.

ಏನು ಅತಿಪ್ರಸಂಗ ? ಅದರ ಅಭಿಪ್ರಾಯ ಇಷ್ಟಿದೆ :- ಅನೈಕಾಂತಿಕತಾವು ಎರಡುವಿಧವಾಗಿದೆ. 1) ಸಾಧಾರಣ ಅನೈಕಾಂತಿಕತಾ 2) ಅಸಾಧಾರಣ ಅನೈಕಾಂತಿಕತಾ

1) ಪಕ್ಷಾದಿತ್ರಯವೃತ್ತಿಹೇತುಃ ಸಾಧಾರಣಾನೈಕಾಂತಿಕಃ । ಪಕ್ಷ-ಸಪಕ್ಷ-ವಿಪಕ್ಷ ಮೂರರಲ್ಲಿಯೂ ಇರುವ ಹೇತು ಸಾಧಾರಣ ಅನೈಕಾಂತಿಕ ಎನಿಸುತ್ತದೆ. ಉದಾ -

ಶಬ್ದಃ ಅನಿತ್ಯಃ ಪ್ರಮೇಯತ್ವಾತ್. ಪ್ರಮೇಯತ್ವಹೇತು ಪಕ್ಷವಾದ ಶಬ್ದದಲ್ಲಿ, ಸಪಕ್ಷವಾದ ಘಟಾದಿಗಳಲ್ಲಿ, ವಿಪಕ್ಷವಾದ ಗಗನಾದಿಗಳಲ್ಲಿ ಮೂರರಲ್ಲಿಯೂ ಇರುವುದರಿಂದ ಇದು ಸಾಧಾರಣ ಅನ್ಯೆಕಾಂತಿಕ.

2) ಪಕ್ಷಮಾತ್ರವೃತ್ತಿಹೇತುಃ ಅಸಾಧಾರಣಾನ್ಯೆಕಾಂತಿಕಃ । ಪಕ್ಷದಲ್ಲಿ ಮಾತ್ರ ಇರುವ ಹೇತು ಅಸಾಧಾರಣ ಅನ್ಯೆಕಾಂತಿಕ ಎನಿಸುತ್ತದೆ. ಉದಾ - ಭೂಃ ನಿತ್ಯಾ ಗಂಧವತ್ವಾತ್. ಇಲ್ಲಿ ಗಂಧವತ್ವಹೇತು ಸಪಕ್ಷ-ವಿಪಕ್ಷಗಳಲ್ಲಿ ಇಲ್ಲ. ಕೇವಲ ಪಕ್ಷ(ಭೂ)ಮಾತ್ರ ವೃತ್ತಿಯಾಗಿದೆ. ಆದ್ದರಿಂದ ಇದು ಅಸಾಧಾರಣ ಅನ್ಯೆಕಾಂತಿಕ.

ಇಲ್ಲಿ 'ಭೂಃ ನಿತ್ಯಾ ಗಂಧವತ್ವಾತ್' ಎನ್ನುವಲ್ಲಿ ಗಂಧವತ್ವಹೇತುವು ಪಕ್ಷಮಾತ್ರವೃತ್ತಿಯಾಗಿರುವುದರಿಂದ (ಸಪಕ್ಷವಾದ ಗಗನಾದಿಗಳಲ್ಲಿ ವಿಪಕ್ಷವಾದ ಘಟಾದಿಗಳಲ್ಲಿ ಎಲ್ಲಿಯೂ ಇಲ್ಲದೇ ಪಕ್ಷದಲ್ಲಿ ಮಾತ್ರ ವೃತ್ತಿಯಾದ್ದರಿಂದ) ಅಸಾಧಾರಣ ಅನ್ಯೆಕಾಂತಿಕತಾ ಬರುತ್ತದೆ. ಅಂತೆಯೇ ಪಕ್ಷಮಾತ್ರವೃತ್ತಿಯಾದ ಕಾರಣಕ್ಕೇನೇ (ಸಪಕ್ಷದಲ್ಲಿ ಹೇತು ಇಲ್ಲದ ಕಾರಣ) ಸಾಧನವೈಕಲ್ಯವೂ ಬರುತ್ತದೆ.

ಈ ರೀತಿಯಾಗಿ ಅಸಾಧಾರಣಅನ್ಯೆಕಾಂತಿಕತಾ ದೋಷವನ್ನು (ಹೇತುದೋಷವನ್ನು) ಆಶ್ರಯಿಸಿಯೇ ಸಾಧನವೈಕಲ್ಯದೋಷವು (ದೃಷ್ಟಾಂತದೋಷವು) ಪ್ರವೃತ್ತವಾಗುವುದರಿಂದ , ''ಹೇತುದೋಷವೇ ಸಾಕು. ದೃಷ್ಟಾಂತದೋಷ ಏಕೆಬೇಕು ?'' ಎಂಬುದಾಗಿ ಆಕ್ಷೇಪ ಅಲ್ಲಿಯೂ ಬರುವುದರಿಂದ, ದೃಷ್ಟಾಂತದೋಷವೂ ಅನುಪಸಂಖ್ಯೇಯವಾಗಬೇಕಾದ (ಪೃಥಕ್ ಗಣನೀಯವಾಗದೇ ಹೋಗಬೇಕಾದ) ಅತಿಪ್ರಸಂಗ ಬರುತ್ತದೆ ಎಂದು ಅಭಿಪ್ರಾಯ.

**ಟೀಕಾ :- ಸ್ಫುಟಪ್ರತಿಭಾಸವಶಾತ್ ತತ್ಪರಿಗ್ರಹೇ ಪ್ರಕೃತೇಽಪಿ ಸಮಾನಮ್ । ವಸ್ತುತಸ್ತು ನೇಯಮಾಚಾರ್ಯಪ್ರಕ್ರಿಯಾ । ವಿರುದ್ಧಾನ್ಯೆಕಾಂತಿಕಾದಿವತ್ ಪರಪರಿಕಲ್ಪಿತರೀತ್ಯಾ ವ್ಯವಹಾರ ಇತಿ ।**

**ಅನುವಾದ :-** ಈ ಹಿಂದೆ ನಾವು ಹೇಳಿದಂತೆ ಹೇತುದೋಷವನ್ನು ಆಶ್ರಯಿಸಿಯೇ ದೃಷ್ಟಾಂತದೋಷವು ಪ್ರವೃತ್ತವಾಗುವುದಾದರೂ ಸಹ, ದೃಷ್ಟಾಂತದೋಷವೇ ಮೊದಲು ಸ್ಫುಟವಾಗಿ ಪ್ರತಿಭಾಸವಾಗುವ ಕಾರಣ ದೃಷ್ಟಾಂತದೋಷವನ್ನೇ ಪರಿಗಣಿಸಲಾಗುತ್ತದೆ. ಹೊರತು ಹೇತುದೋಷವನ್ನು ಪರಿಗಣಿಸಲಾಗುವುದಿಲ್ಲ ಎಂದು ಹೇಳುವುದಾದರೆ,

ಅದು ಪ್ರಕೃತದಲ್ಲಿಯೂ (ನಮ್ಮ ಸತ್ಯತ್ವಾನುಮಾನ ವಿಷಯದಲ್ಲಿಯೂ) ಸಮಾನವೇ ಆಗಿದೆ.

ಹಿಂದೆ ಹೇಳಿದಂತೆ ಮಿಥ್ಯಾತ್ವಾನುಮಾನದಲ್ಲಿ ಅನೈಕಾಂತಿಕತಾದಿ ದೋಷಗಳನ್ನು ಆಶ್ರಯಿಸಿಯೇ ಪ್ರಕರಣಸಮದೋಷವು ಪ್ರವೃತ್ತವಾದರೂ ಸಹ ಪ್ರಕರಣಸಮದೋಷವೇ ಸ್ಫುಟವಾಗಿ ಪ್ರತಿಭಾಸವಾಗುವ ಕಾರಣ, ಪ್ರಕರಣಸಮದೋಷವನ್ನೇ ಹೇಳಲಾಗಿದೆ ಎಂದು ಅಭಿಪ್ರಾಯ.

ವಾಸ್ತವಿಕವಾಗಿ ಹೇಳುವುದಾದರೆ ಬಾಧ-ಪ್ರಕರಣಸಮಗಳಿಗೆ ಹೇತುದೋಷತ್ವವನ್ನು ಹೇಳಿರುವುದು ಆಚಾರ್ಯರ ಸಿದ್ಧಾಂತ ಅಲ್ಲ. ಕಾರಣ - ಆಚಾರ್ಯರ ಸಿದ್ಧಾಂತದಲ್ಲಿ ಅಸಿದ್ಧಿ-ಅವ್ಯಾಪ್ತಿಗಳು ಮಾತ್ರವೇ ಹೇತುದೋಷವಾಗಿವೆ. ಬಾಧ-ಸತ್ಪ್ರತಿಪಕ್ಷಗಳು ಪ್ರತಿಜ್ಞಾದೋಷವಾದ್ದರಿಂದ ಅವು ಹೇತುದೋಷವಾಗಿಲ್ಲ.

ಹಾಗಾದರೆ ಬಾಧ-ಸತ್ಪ್ರತಿಪಕ್ಷಗಳು ಹೇತುದೋಷವಲ್ಲ ಎಂದೇ ಆಚಾರ್ಯರ ಪ್ರಕ್ರಿಯೆ (ಸಿದ್ಧಾಂತ) ಆಗಿದ್ದರೆ,

- ಪ್ರತ್ಯಕ್ಷಾದಿವಿರುದ್ಧತ್ವಾತ್ 'ವಿಶ್ವಂ ಸತ್ಯಂ' ಇತ್ಯಾದಿವಾಕ್ಯವಿರುದ್ಧತ್ವಾಚ್ಚ ಕಾಲಾತ್ಯಯಾಪದಿಷ್ಟಃ ।
- 'ವಿಮತಂ ಸತ್ಯಂ ದೃಶ್ಯತ್ವಾತ್ ಆತ್ಮವತ್' ಇತ್ಯಪಿ ಪ್ರಯೋಜ್ಯತ್ವಾತ್ ಪ್ರಕರಣಸಮಃ ।

ಎಂಬುದಾಗಿ ಆಚಾರ್ಯರೇ ಬಾಧ - ಪ್ರಕರಣಸಮತ್ವಗಳನ್ನು ದೋಷವನ್ನಾಗಿ ಏಕೆ ಹೇಳಿದರು. ? ಹೇಳಿದ್ದು ವ್ಯರ್ಥವಲ್ಲವೇ ? ಎಂದು ಶಂಕೆ ಬಂದರೆ, ಅದಕ್ಕೆ ಸಮಾಧಾನ ಇಷ್ಟು :- ವಿರೋಧ-ಅನೈಕಾಂತಿಕತಾಗಳು ಯಾವ ರೀತಿಯಾಗಿ ಹೇತುದೋಷವಾಗಿವೆಯೋ ಅದೇ ರೀತಿಯಾಗಿ ಬಾಧ-ಪ್ರತಿಪಕ್ಷಗಳೂ ಹೇತುದೋಷವಾಗಿವೆ ಎಂದು ಪರಪರಿಕಲ್ಪಿತ ರೀತಿಯಾಗಿದೆ. (ಪರರು ಹಾಗೆ ಅಂಗೀಕರಿಸಿದ್ದಾರೆ.) ಹಾಗೆ ಬಾಧ-ಪ್ರತಿಪಕ್ಷಗಳಿಗೆ ಪರಾಂಗೀಕೃತ ಹೇತುದೋಷತ್ವವನ್ನು ವಿವಕ್ಷಿಸಿ ಆಚಾರ್ಯರು ಅವುಗಳನ್ನು ಹೇತುದೋಷವಾಗಿ ಹೇಳಿದ್ದಾರೆ. ಹೊರತು ಸ್ವಸಿದ್ಧಾಂತರೀತ್ಯಾ ಹೇಳಿದ್ದಲ್ಲ ಎಂದು ಅಭಿಪ್ರಾಯ.




ಇಲ್ಲಿ ಆಚಾರ್ಯರ ಪ್ರಕ್ರಿಯೆ ಇಂತಿದೆ

**ಅನುಮಾನವಿರೋಧ ಮೂರುವಿಧ**

**ಪ್ರತಿಜ್ಞಾವಿರೋಧ ಹೇತುವಿರೋಧ ದೃಷ್ಟಾಂತವಿರೋಧ**

**ಪ್ರತಿಜ್ಞಾವಿರೋಧವು ಎರಡುವಿಧ-**

**ಪ್ರಮಾಣವಿರೋಧ ಸ್ವವಚನವಿರೋಧ**

**ಪ್ರಮಾಣವಿರೋಧವು ಎರಡುವಿಧ-**

**ಪ್ರಬಲಪ್ರಮಾಣವಿರೋಧ ಸಮಬಲಪ್ರಮಾಣವಿರೋಧ**

**ಸಮಬಲಪ್ರಮಾಣವಿರೋಧವು ಎರಡುವಿಧ-**

**ತೇನೈವ ಹೇತುನಾ, ಹೇತ್ವಂತರೇಣ**

**ಹೇತುವಿರೋಧವು ಎರಡುವಿಧ-**

**ಅಸಿದ್ಧಿ ಅವ್ಯಾಪ್ತಿ**

**ಅವ್ಯಾಪ್ತಿಯು ಮೂರುವಿಧ-**

**ಲಿಂಗಸ್ಯ ಸಾಧ್ಯೇನ ತದಭಾವೇನ ಚ ಸಂಬಂಧಃ**

**ಸಾಧ್ಯಸಂಬಂಧಾಭಾವೇ ಸತಿ ತದಭಾವೇನೈವ ಸಂಬಂಧಃ**

**ಉಭಯಸಂಬಂಧಾಭಾವಃ**

ಈ ರೀತಿಯಾಗಿ ಪ್ರಕ್ರಿಯೆ (ಸಿದ್ಧಾಂತ) ಇದ್ದರೂ ಸಹ ವಿರೋಧ-ಅನೈಕಾಂತಿಕತಾ-ಅನಧ್ಯವಸಿತತ್ವ ಎಂಬ ದೋಷಗಳು ಯಾವ ರೀತಿಯಾಗಿ ಪರರೀತ್ಯಾ ಹೇಳಿದರೋ ಅದೇ ರೀತಿಯಾಗಿ ಬಾಧ-ಪ್ರತಿಪಕ್ಷಗಳಿಗೂ ಸಹ ಹೇತುದೋಷತ್ವವನ್ನು ಪರರೀತಿಯಿಂದಲೇ ಅಂಗೀಕರಿಸಿ ಹೇಳಿದ್ದು.

'ಸ್ವಸಿದ್ಧ್ಯೈಃ ಸಾಧನಂ ಪರಸಿದ್ಧ್ಯೈಃ ದೂಷಣಂ'

''ಸ್ವನ್ಯಾಯೈಃ ಸಾಧನಂ ಕಾರ್ಯಂ ಪರನ್ಯಾಯೈಸ್ತು ದೂಷಣಮ್ ''

ಎಂಬುದಾಗಿ ಆಚಾರ್ಯರೇ ಹೇಳಿದಂತಹ ಮಾತು.

**ಮೂಲ :- 'ವಿಮತಂ ಸತ್ಯಂ ಪ್ರಮಾಣದೃಷ್ಟತ್ವಾತ್ ಯದಿತ್ಥಂ ತತ್ತಥಾ ಯಥಾ ಆತ್ಮಾ' ಇತಿ ಪ್ರಯೋಗಾತ್ ಸಪ್ರತಿಸಾಧನಃ ।**

ಟೀಕಾ :- ನನ್ವತ್ರ ದೃಷ್ಟತ್ವಮಾತ್ರಸ್ಯ ವ್ಯಭಿಚಾರೋಽಸ್ತಿ ನ ವಾ ? ಆದ್ಯೇ ಪೂರ್ವಾನುಮಾನಮಸತ್ ಸ್ಯಾತ್ । ತತ್ರ ತನ್ಮಾತ್ರಸ್ಯ ಪ್ರಯೋಗಾತ್ । ದ್ವಿತೀಯೇ ಪ್ರಮಾಣವಿಶೇಷಣವೈಯರ್ಥ್ಯಮಿತಿ ।

ಮೈವಮ್ । ಪ್ರಮಾಣದೃಷ್ಟತ್ವಪದೇನ ಪ್ರಾಮಾಣಿಕತ್ವಮಾತ್ರಸ್ಯಾ-ಭಿಮತತ್ವಾತ್ । ಅಥ ವಾ ದೃಗ್ವ್ಯಾವರ್ತಕತ್ವಮೇವಾತ್ರ ದೃಷ್ಟತ್ವಮಭಿಮತಮ್ । ತಚ್ಚ ಶುಕ್ತಿರಜತಾದಾವಸ್ತೀತಿ ಸಫಲಂ ವಿಶೇಷಣಮ್ ।

ಪೂರ್ವಾನುಮಾನೇ ವ್ಯಾಪ್ತಿಮನಭಿಧಾಯಾತ್ರ ಯದಿತ್ಥಂ ತತ್ತಥೇತಿ ತಾಮಭಿದಧತಾ ತದಭಿಧಾನನಿಯಮೋ ನಾಸ್ತೀತಿ ಸೂಚಿತಮ್ । ಆತ್ಮನಃ ಪ್ರಮಾಣದೃಷ್ಟತ್ವಾನಂಗೀಕಾರೇ ವೇದಾಂತವೈಯರ್ಥ್ಯಂ ಸ್ಯಾತ್ ।

ಅನುವಾದ :-

ಮೂಲ :- 'ವಿಮತಂ ಸತ್ಯಂ ಪ್ರಮಾಣದೃಷ್ಟತ್ವಾತ್ ಯದಿತ್ಥಂ ತತ್ತಥಾ ಯಥಾ ಆತ್ಮಾ' ಇತಿ ಪ್ರಯೋಗಾತ್ ಸಪ್ರತಿಸಾಧನಃ ।

(ಮೂಲಾರ್ಥ :- ''ವಿಯದಾದಿಪ್ರಪಂಚವು ಸತ್ಯವಾಗಿದೆ ಪ್ರಾಮಾಣಿಕವಾದ್ದರಿಂದ. ಯಾವುದು ಪ್ರಾಮಾಣಿಕವಾಗಿರುವುದೋ ಅದು ಸತ್ಯವಾಗಿರುತ್ತದೆ. ಆತ್ಮನು ಪ್ರಮಾಣಿಕನಾದ್ದರಿಂದ ಸತ್ಯನಾದಂತೆ.'' ಎಂಬುದಾಗಿ ಸತ್ಯತ್ವವನ್ನೂ ಸಾಧಿಸಲು ಬರುತ್ತದೆಯಾದ್ದರಿಂದ ನಿಮ್ಮ ದೃಶ್ಯತ್ವಾನುಮಾನವು ಸತ್ಪ್ರತಿಪಕ್ಷವಾಗುತ್ತದೆ.)

ಇಲ್ಲಿ ಪ್ರಮಾಣದೃಷ್ಟತ್ವವನ್ನು ಹೇತುವನ್ನಾಗಿ ಮಾಡಿದ್ದೀರಿ. ಆದರೆ ದೃಷ್ಟತ್ವ ಎಂದಷ್ಟೇ ಹೇತು ಮಾಡಿದರೆ ವ್ಯಭಿಚಾರ ಬರುತ್ತದೆಯೋ ? ಇಲ್ಲವೋ ? ವ್ಯಭಿಚಾರ ಬರುತ್ತದೆ ಎಂದಾದರೆ 'ವಿಮತಂ ಸತ್ಯಂ ದೃಶ್ಯತ್ವಾತ್ ಆತ್ಮವತ್' ಎಂಬ ಹಿಂದೆ ಮಾಡಿದ ಅನುಮಾನವು ವ್ಯಭಿಚರಿತವಾಗಬೇಕಾಗುತ್ತದೆ. (ಅಲ್ಲಿ ದೃಶ್ಯತ್ವ ಎಂದಷ್ಟೇ ಹೇತು ಮಾಡಿದ್ದರಿಂದ ವ್ಯಭಿಚಾರ ಬರಬೇಕಾಗುತ್ತದೆ.) ಇನ್ನು ವ್ಯಭಿಚಾರ ಬರುವುದಿಲ್ಲ ಎಂದರೆ, ಹಾಗಾದರೆ ಕೇವಲ ದೃಶ್ಯತ್ವ ಎಂದಷ್ಟೇ ಹೇತು ಸಾಕು, 'ಪ್ರಮಾಣ' ಎಂಬ ವಿಶೇಷಣ ಏಕೆ ಬೇಕು ? (ಪ್ರಮಾಣ ಎಂಬ ವಿಶೇಷಣಕ್ಕೆ ವೈಯರ್ಥ್ಯ ಬರುತ್ತದೆ.)




ಈ ರೀತಿಯಾಗಿ ಆಕ್ಷೇಪ ಮಾಡುವುದು ಸರಿಯಲ್ಲ. ಕಾರಣ ಪ್ರಮಾಣದೃಷ್ಟತ್ವ ಎಂದರೆ ಪ್ರಮಾಣಿಕತ್ವ ಎಂದಷ್ಟೇ ವಿವಕ್ಷಿಸುತ್ತೇವೆ. ಅಂತಹ ಪ್ರಾಮಾಣಿಕತ್ವ ಎನ್ನುವುದು ಏಕರೂಪವಾಗಿರುವುದರಿಂದ, ಅದರಲ್ಲಿ ಯಾವ ವಿಶೇಷಣವೂ ಇಲ್ಲವಾದ್ದರಿಂದ ವಿಶೇಷಣವೈಯರ್ಥ್ಯಶಂಕೆಗೆ ಅವಕಾಶವೇ ಇಲ್ಲ.

ಅವಯವಾರ್ಥವಿಚಾರ ಮಾಡದೇ ಹೇತು ಮಾಡಲಾಯಿತು. ಅಲ್ಲಿಯೂ ಅವಯವಾರ್ಥವಿಚಾರ ಮಾಡುವುದಾದರೆ ವಿಶೇಷಣವೈಯರ್ಥ್ಯವು ಬಂದೇ ಬರುತ್ತದೆ. ಹೇಗೆಂದರೆ - ಪ್ರಾಮಾಣಿಕತ್ವ ಎಂದರೆ ಪ್ರಮಾಣಜನ್ಯಜ್ಞಾನವಿಷಯತ್ವ. ಆದರಲ್ಲಿ ಜ್ಞಾನವಿಷಯತ್ವವನ್ನಷ್ಟೇ ಹೇತು ಮಾಡಿರಿ. ಪ್ರಮಾಣವಿಶೇಷಣ ಏಕೆ ಬೇಕು ? ಎಂಬುದಾಗಿ ವಿಶೇಷಣವೈಯರ್ಥ್ಯ ಬಂದೇ ಬರುತ್ತದೆ. ಈ ಕಾರಣಕ್ಕೆ ಪ್ರಾಮಾಣಿಕತ್ವ ಎಂಬ ಪಕ್ಷವನ್ನು ಬಿಟ್ಟು ಬೇರೆ ಪಕ್ಷಕ್ಕೆ ಹೋಗುತ್ತಾರೆ - ಅಥವಾ ಎಂಬುದಾಗಿ.

ಅಂದರೆ - ದೃಷ್ಟತ್ವ ಎಂದರೆ ದೃಗ್ವ್ಯಾವರ್ತಕತ್ವ ಎಂದು ವಿವಕ್ಷಿಸುತ್ತೇವೆ. ಈ ವಿಧವಾದ ದೃಗ್ವ್ಯಾವರ್ತಕತ್ವ ರೂಪವಾದ ದೃಷ್ಟತ್ವವು ಶುಕ್ತಿರಜತಾದಿಗಳಲ್ಲಿಯೂ ಇದೆಯಾದ್ದರಿಂದ ವ್ಯಭಿಚಾರ ಬರುತ್ತದೆ. ಆ ವ್ಯಭಿಚಾರಪರಿಹಾರಕ್ಕಾಗಿ ಪ್ರಮಾಣ ಎಂಬ ವಿಶೇಷಣ ಬೇಕು. ಆದ್ದರಿಂದ ಪ್ರಮಾಣವಿಶೇಷಣವು ಸಾರ್ಥಕವಾಗಿದೆ ಎಂದು ಭಾವ.

'ವಿಮತಂ ಸತ್ಯಂ ದೃಶ್ಯತ್ವಾತ್ ಆತ್ಮವತ್' ಎಂಬ ಹಿಂದಿನ ಅನುಮಾನದಲ್ಲಿ 'ಯದಿತ್ಥಂ ತತ್ತಥಾ' ಎಂಬುದಾಗಿ ವ್ಯಾಪ್ತಿಯನ್ನು ಹೇಳಲಿಲ್ಲ. ಈಗ ಪ್ರಮಾಣದೃಷ್ಟತ್ವಾನುಮಾನದಲ್ಲಿ ವ್ಯಾಪ್ತಿಯನ್ನು ಹೇಳುತ್ತಿದ್ದಾರೆ. ಇದರಿಂದ 'ವ್ಯಾಪ್ತಿಯನ್ನು ಹೇಳಲೇಬೇಕೆಂದು ನಿಯಮವಿಲ್ಲ' ಎಂದು ಸೂಚಿಸುತ್ತಿದ್ದಾರೆ ಆಚಾರ್ಯರು.

ಇಲ್ಲಿ ಆತ್ಮನನ್ನು ದೃಷ್ಟಾಂತ ಮಾಡಿದ್ದೀರಿ. ದೃಷ್ಟಾಂತನಾದ ಆತ್ಮನಲ್ಲಿ ಪ್ರಮಾಣದೃಷ್ಟತ್ವ ಇಲ್ಲವಾದ್ದರಿಂದ ಸಾಧನವೈಕಲ್ಯ ಬರುತ್ತದೆಯಲ್ಲವೇ ? ಎಂಬ ಶಂಕೆ ಸೂಕ್ತವಲ್ಲ. ಏಕೆಂದರೆ ಬ್ರಹ್ಮಜ್ಞಾನವನ್ನು ಹುಟ್ಟಿಸುವುದಕ್ಕಾಗಿಯೇ ವೇದಾಂತವು ಪ್ರವೃತ್ತವಾದ್ದರಿಂದ ಪ್ರಕೃತ ಆತ್ಮನಿಗೆ ಪ್ರಮಾಣದೃಷ್ಟತ್ವವನ್ನು ಅಂಗೀಕರಿಸದೇ ಹೋದರೆ, ವೇದಾಂತವೇ ವ್ಯರ್ಥವಾಗಬೇಕಾಗುತ್ತದೆ. ವೇದಾಂತವೈಯರ್ಥ್ಯ-ಪರಿಹಾರಕ್ಕಾಗಿ ಆತ್ಮನಿಗೆ ಪ್ರಮಾಣದೃಷ್ಟತ್ವವನ್ನು ಅಂಗೀಕರಿಸಲೇಬೇಕಾದ್ದರಿಂದ ಸಾಧನವೈಕಲ್ಯಕ್ಕೆ ಅವಕಾಶವಿಲ್ಲ ಎಂದು ಅಭಿಪ್ರಾಯ.

**ಟೀಕಾ :- ನನ್ವತ್ರ, ತತ್ತ್ವಾವೇದಕಪ್ರಮಾಣದೃಷ್ಟತ್ವಂ ಹೇತುಃ ? ಉತ ಅತತ್ತ್ವಾವೇದಕಪ್ರಮಾಣದೃಷ್ಟತ್ವಂ ? ಆದ್ಯೇಽಸಿದ್ಧಿಃ । ದ್ವಿತೀಯೇ ವಿರೋಧ ಇತಿ । ಮೈವಮ್ । 'ಅತತ್ತ್ವಾವೇದಕಂ ಪ್ರಮಾಣಂ' ಇತಿ ಚ ವಿಪ್ರತಿಷಿದ್ಧಮೇತತ್ ।**

**ಏವಂ ತರ್ಹಿ ಅಸಿದ್ಧಿರೇವಾಸ್ತ್ವಿತಿ ಚೇತ್ । ನ । 'ಪ್ರಪಂಚಮಿಥ್ಯಾತ್ವಸಿದ್ಧೌ ಪ್ರತ್ಯಕ್ಷಾದೀನಾಮಪ್ರಾಮಾಣ್ಯಸಿದ್ಧಿಃ ತತ್ಸಿದ್ಧೌ ಚ ತತ್ಸಿದ್ಧಿಃ' ಇತಿ ಪರಸ್ಪರಾಶ್ರಯ-ಪ್ರಸಂಗಾತ್ ।**

**ಅನುವಾದ :-** ಇಲ್ಲಿ ಪ್ರಮಾಣದೃಷ್ಟತ್ವ ಹೇತುವಾಗುವುದಾದರೆ, ತತ್ತ್ವಾವೇದಕಪ್ರಮಾಣದೃಷ್ಟತ್ವ ಹೇತು ಎನ್ನುತ್ತೀರೋ ? ಅತತ್ತ್ವಾವೇದಕಪ್ರಮಾಣದೃಷ್ಟತ್ವ ಹೇತು ಎನ್ನುತ್ತೀರೋ ?

ತತ್ತ್ವಾವೇದಕಪ್ರಮಾಣದೃಷ್ಟತ್ವ ಹೇತು ಎನ್ನಲು ಬರುವುದಿಲ್ಲ. ಕಾರಣ - ಪ್ರಪಂಚಾವೇದಕವಾದ ಪ್ರಮಾಣಗಳು ಅಂದರೆ ಪ್ರತ್ಯಕ್ಷಾದಿಗಳು ತತ್ತ್ವಾವೇದಕ-ವಾಗಿಲ್ಲವಾದ್ದರಿಂದ, ಪಕ್ಷವಾದ ಪ್ರಪಂಚದಲ್ಲಿ ತತ್ತ್ವಾವೇದಕಪ್ರಮಾಣದೃಷ್ಟತ್ವ ಹೇತು ಬಾರದ ಕಾರಣ ಸ್ವರೂಪಾಸಿದ್ಧಿ ಬರುತ್ತದೆ.

ಇನ್ನು ಅತತ್ತ್ವಾವೇದಕಪ್ರಮಾಣದೃಷ್ಟತ್ವ ಹೇತು ಎನ್ನಲೂ ಬರುವುದಿಲ್ಲ. ಏಕೆಂದರೆ- ಹೇತು ಸಾಧ್ಯದಿಂದ ವ್ಯಾಪ್ತವಾಗಬೇಕು. ಸಾಧ್ಯಾಭಾವದಿಂದ ವ್ಯಾಪ್ತವಾದರೆ ವಿರುದ್ಧ. ಪ್ರಕೃತ ಅತತ್ತ್ವಾವೇದಕಪ್ರಮಾಣದೃಷ್ಟತ್ವ ಹೇತುವು ಸತ್ಯತ್ವಾಭಾವದಿಂದಲೇ ವ್ಯಾಪ್ತವಾಗಿದ್ದರಿಂದ ವಿರೋಧ ದೋಷ ಬರುತ್ತದೆ.

ಈ ರೀತಿಯಾಗಿ ಪ್ರಶ್ನೆ ಬಂದರೆ, ಅತತ್ತ್ವಾವೇದಕ-ಪ್ರಮಾಣ ಎನ್ನುವುದು ವಿರುದ್ಧವಾದ ಮಾತು. ಯಥಾವಸ್ಥಿತಾರ್ಥಜ್ಞೇಯವಿಷಯೀಕಾರಿತ್ವ ಎನ್ನುವುದು ಪ್ರಮಾಣಶಬ್ದಾರ್ಥವಾದ್ದರಿಂದ, ಪ್ರಮಾಣ ಎಂದರೆ ತತ್ತ್ವಾವೇದಕ ಎಂದರ್ಥ. ಅತತ್ತ್ವಾವೇದಕ ಎಂದರೆ ಅಪ್ರಮಾಣ ಎಂದರ್ಥ. ಅತತ್ತ್ವಾವೇದಕ - ಪ್ರಮಾಣ ಎನ್ನುವುದು ವ್ಯಾಹತವಾಗುವುದರಿಂದ ಈ ವಿಧವಾದ ವಿಕಲ್ಪವೇ ಅನುಪಪನ್ನ ಎಂದು ಭಾವ.

ವ್ಯಾಹತವಾಗುವುದರಿಂದ ಹಿಂದಿನ ವಿಕಲ್ಪಗಳಿಂದ ದೋಷ ಹೇಳುವುದು ಅನುಪಪನ್ನವಾಗುವುದಾದರೆ, ತತ್ತ್ವಾವೇದಕಪ್ರಮಾಣದೃಷ್ಟತ್ವ ಎನ್ನುವುದೇ ಸರಿಯಾದದ್ದಾದರೆ, ಪ್ರಪಂಚಾವೇದಕವಾದ ಪ್ರತ್ಯಕ್ಷಾದಿಗಳು ತತ್ತ್ವಾವೇದಕ-

ಪ್ರಮಾಣವಲ್ಲದ ಕಾರಣ ಸ್ವರೂಪಾಸಿದ್ಧಿ ಬರುತ್ತದೆ ಎಂಬುದಾಗಿ ಏನು ಅಸಿದ್ಧಿ ದೋಷವನ್ನು ಹೇಳಿದ್ದೇವೆಯೋ ಅದೇ ದೋಷವೇ ಬರಲಿ ನಿಮಗೆ ?

ಈ ರೀತಿಯಾಗಿ ಶಂಕಿಸುವುದೂ ಸರಿಯಲ್ಲ. ಕಾರಣ ನೀವು ಹೇಳಿದ ಮಿಥ್ಯಾತ್ವಾನುಮಾನದಿಂದ ಪ್ರಪಂಚಕ್ಕೆ ಮಿಥ್ಯಾತ್ವವು ಸಿದ್ಧವಾದರೆ ಪ್ರಪಂಚಾಂತ-ರ್ಗತವಾದ್ದರಿಂದ ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯ ಸಿದ್ಧವಾಗುತ್ತದೆ. ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯ ಸಿದ್ಧವಾದರೆ, ನಮ್ಮ ಪ್ರಮಾಣದೃಷ್ಟತ್ವ ಹೇತು ಸ್ವರೂಪಾಸಿದ್ಧವಾಗುವ ಕಾರಣ ಪ್ರತಿಪಕ್ಷಾನುಮಾನ ದುಷ್ಟವಾಗುವುದರಿಂದ ಆ ಪ್ರತಿಪಕ್ಷಾನುಮಾನದ ವಿರೋಧ ಬಾರದೇ ನಿಮ್ಮ ಮಿಥ್ಯಾತ್ವಾನುಮಾನದಿಂದ ಪ್ರಪಂಚಕ್ಕೆ ಮಿಥ್ಯಾತ್ವವು ಸಿದ್ಧಿಸುತ್ತದೆ.

ಈ ರೀತಿ ಅನ್ಯೋನ್ಯಾಶ್ರಯದೋಷ ಬರುವುದರಿಂದ 'ಪಕ್ಷವಾದ ಪ್ರಪಂಚದಲ್ಲಿ ತತ್ವಾವೇದಕಪ್ರಮಾಣದೃಷ್ಟತ್ವ ಇಲ್ಲ' ಎನ್ನಲು ಬರುವುದಿಲ್ಲ. ಸತ್ಯತ್ವಾನುಮಾನಕ್ಕೆ ಯಾವ ದೋಷವೂ ಇಲ್ಲ.

**ಅವತಾರಿಕೆ :-** 'ವಿಮತಂ ಸತ್ಯಂ ಪ್ರಮಾಣದೃಷ್ಟತ್ವಾತ್' ಎಂಬ ನಮ್ಮ ಅನುಮಾನಕ್ಕೆ ಉಪಾಧಿದೋಷವನ್ನು ಶಂಕಿಸುತ್ತಾರೆ -

**ಟೀಕಾ :- ಆತ್ಮತ್ವಮತ್ರೋಪಾಧಿರಿತಿ ಚೇನ್ನ । ತಸ್ಯೈವಾನಿರೂಪಣಾತ್ । ನ ತಾವತ್ ಜ್ಞಾನತ್ವಮಾತ್ಮತ್ವಮ್ । ಜ್ಞಾತೃಜ್ಞೇಯಶೂನ್ಯಸ್ಯ ಜ್ಞಾನಸ್ಯಾಪಿ ಶೂನ್ಯತ್ವಾತ್ । ನಾಪಿ ಜ್ಞಾನಾಶ್ರಯತ್ವಮ್ । ನಿರ್ಗುಣತ್ವಾಂಗೀಕಾರಾತ್ । ನ ಚ ಸಾಮಾನ್ಯವಿಶೇಷ ಆತ್ಮತ್ವಮ್ । ಸಾಮಾನ್ಯಸ್ಯಾಪಿ ವಾಸ್ತವಸ್ಯ ಪರೇಣಾನಂಗೀಕಾರಾತ್ । ಕಲ್ಪಿತಸ್ಯ ತು ದೇಹಾದಾವಪಿ ಸದ್ಭಾವಾತ್ ।**

**ಅನುವಾದ :-** 'ವಿಮತಂ ಸತ್ಯಂ ಪ್ರಮಾಣದೃಷ್ಟತ್ವಾತ್' ಎಂಬ ನಿಮ್ಮ ಅನುಮಾನ ಸರಿಯಲ್ಲ. ಕಾರಣ - ನಿಮ್ಮ ಅನುಮಾನಕ್ಕೆ ಆತ್ಮತ್ವ ಎಂಬ ಉಪಾಧಿ ದೋಷ ಬರುತ್ತದೆ. ಆತ್ಮತ್ವವು ಉಪಾಧಿಯಾಗಬೇಕಾದರೆ ಸಾಧ್ಯವ್ಯಾಪಕವಾಗಿ ಸಾಧನಾವ್ಯಾಪಕವಾಗಬೇಕು. ದೃಷ್ಟಾಂತನಾದ ಆತ್ಮನಲ್ಲಿ ಸತ್ಯತ್ವಸಾಧ್ಯವೂ ಇದೆ. ಆತ್ಮತ್ವವೂ ಇದೆ. ಹಾಗಾಗಿ ಸಾಧ್ಯವ್ಯಾಪಕವಾಯಿತು. ಪಕ್ಷವಾದ ಪ್ರಪಂಚದಲ್ಲಿ ಪ್ರಮಾಣದೃಷ್ಟತ್ವ ಎಂಬ ಸಾಧನ ಇದ್ದರೂ ಆತ್ಮತ್ವ ಇಲ್ಲದ ಕಾರಣ ಸಾಧನಾವ್ಯಾಪಕವೂ

ಆಗಿದೆ. ಆದ್ದರಿಂದ ಆತ್ಮತ್ವ ಎಂಬ ಉಪಾಧಿಯುಳ್ಳದ್ದಾದ್ದರಿಂದ ನಿಮ್ಮ ಅನುಮಾನ ಸದನುಮಾನ ಅಲ್ಲ !

ಈ ರೀತಿಯಾಗಿ ಉಪಾಧಿಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ, ಆತ್ಮತ್ವವನ್ನು ಉಪಾಧಿಯನ್ನಾಗಿ ಕೊಡಬೇಕಾದರೆ ಮೊದಲು ಆ ಆತ್ಮತ್ವ ಎಂದರೆ ಏನು ? ಎಂದು ನಿರೂಪಿಸಬೇಕು. ಆದರೆ ಆತ್ಮತ್ವ ಎಂದರೆ ಏನು ಎನ್ನುವುದನ್ನೇ ನಿರೂಪಿಸಲು ಬರುವುದಿಲ್ಲ ನಿಮಗೆ.

ಆತ್ಮತ್ವವನ್ನು ನಿರೂಪಿಸಲು ಬರುವುದಿಲ್ಲ ಎಂದು ಏಕೆ ಹೇಳುತ್ತೀರಿ ? ಆತ್ಮತ್ವ ಎಂದರೆ ಜ್ಞಾನತ್ವ ಎಂದು ಹೇಳುತ್ತೇವೆ ಎಂದರೆ, ಅದು ಸರಿಯಲ್ಲ. ಏಕೆಂದರೆ ಲೋಕದಲ್ಲಿ ಜ್ಞಾನವು ಜ್ಞಾತೃ - ಜ್ಞೇಯಸಾಪೇಕ್ಷವಾಗಿ ಕಂಡಿದೆ. (ಜ್ಞಾನ ಇರಬೇಕಾದರೆ ಅದಕ್ಕೊಬ್ಬ ಜ್ಞಾತಾ, ಒಂದು ಜ್ಞೇಯ ಇದ್ದೇ ಇರುತ್ತದೆ.) ಪ್ರಕೃತದಲ್ಲಿ ಆತ್ಮಸ್ವರೂಪವಾದ ಜ್ಞಾನಕ್ಕೆ ತಾನೇ ಜ್ಞಾತಾ ಆಗುತ್ತಾನೆಯೋ ? ಬೇರೊಬ್ಬ ಜ್ಞಾತಾ ಆಗುತ್ತಾನೆಯೋ ? ತಾನೇ ಜ್ಞಾತಾ ಎನ್ನಲು ಬರುವುದಿಲ್ಲ. ಹಾಗೆ ಹೇಳಿದರೆ (ತಾನೇ ಜ್ಞಾನ, ತಾನೇ ಜ್ಞಾತಾ ಎಂದು ಹೇಳಿದರೆ) ಕ್ರಿಯಾ-ಕರ್ತೃಗಳಲ್ಲಿ ಐಕ್ಯ ಹೇಳಿದಂತಾಗುವುದರಿಂದ ಅದು ಬಾಧಿತ. ಆದ್ದರಿಂದ ತಾನೇ ಜ್ಞಾತಾ ಎನ್ನಲು ಬರುವುದಿಲ್ಲ. ಇನ್ನು ಬೇರೊಬ್ಬ ಜ್ಞಾತಾ ಎನ್ನಲೂ ಬರುವುದಿಲ್ಲ. ಕಾರಣ ಆತ್ಮನ ಹೊರತಾಗಿ ಬೇರೊಬ್ಬ ಯಾರೂ ಇಲ್ಲ.

ಇನ್ನು ಆತ್ಮಸ್ವರೂಪಕ್ಕೆ ಜ್ಞೇಯವನ್ನೂ ಹೇಳಲು ಬರುವುದಿಲ್ಲ. ಜ್ಞೇಯವನ್ನು ಹೇಳುವುದಾದರೆ ಆ ಆತ್ಮಸ್ವರೂಪಜ್ಞಾನವು ಸ್ವವಿಷಯ ಎನ್ನುತ್ತೀರೋ ? ಪರವಿಷಯ ಎನ್ನುತ್ತೀರೋ ?

ಸ್ವವಿಷಯ ಎನ್ನಲು ಬರುವುದಿಲ್ಲ. ಹಾಗೆ ಹೇಳಿದರೆ ಜ್ಞಾನರೂಪವಾದ ಒಂದೇ ಕ್ರಿಯೆಯಲ್ಲಿ ಕರ್ತೃತ್ವ-ಕರ್ಮತ್ವಗಳನ್ನು ಒಂದಕ್ಕೇ ಹೇಳಿದಂತಾಗುತ್ತದೆ. ಆದರೆ

**''ಸ್ವವಿಷಯತ್ವಂ ಹಿ ಕರ್ತೃಕರ್ಮವಿರೋಧಾತ್ ತೈರ್ನಾಂಗೀಕ್ರಿಯತೇ ''**

ಎಂಬುದಾಗಿ ಆಚಾರ್ಯರು ಹೇಳಿದರೆ ಕರ್ತೃ-ಕರ್ಮಗಳಿಗೆ ಏಕತ್ವವು ವಿರುದ್ಧವಾಗುವುದರಿಂದ ಒಪ್ಪಲು ಸಾಧ್ಯವಿಲ್ಲ. ಇನ್ನು ಪರವಿಷಯ ಎನ್ನಲೂ ಬರುವುದಿಲ್ಲ. ಕಾರಣ ಆತ್ಮಾತಿರಿಕ್ತವಾದ ಎಲ್ಲವೂ ಮಿಥ್ಯೆಯಾಗಿದೆ. ಸಂಸಾರಾವಸ್ಥೆಯಲ್ಲಿ ಮಿಥ್ಯಾಭೂತವಾದ ಜ್ಞಾತೃ-ಜ್ಞೇಯಗಳು ಇದ್ದರೂ ಸಹ




ಮೋಕ್ಷಾವಸ್ಥೆಯಲ್ಲಿ ಅವೆರಡೂ ಇರುವುದಿಲ್ಲವಾದ್ದರಿಂದ ಆಗ ಜ್ಞಾನತ್ವವೇ ಕೂಡದೇ ಹೋಗಬೇಕಾಗುತ್ತದೆ.

ಆದ್ದರಿಂದ ಆತ್ಮಸ್ವರೂಪಜ್ಞಾನಕ್ಕೆ ಜ್ಞಾತಾ-ಜ್ಞೇಯ ಎರಡೂ ಉಪಪನ್ನ-ವಾಗುವುದಿಲ್ಲವಾದ್ದರಿಂದ ಜ್ಞಾತೃ-ಜ್ಞೇಯಶೂನ್ಯವಾದ ಅಂತಹ ಜ್ಞಾನವೂ ಉಪಪನ್ನವಾಗುವುದಿಲ್ಲ. ಆದ್ದರಿಂದ ಆತ್ಮತ್ವ ಎಂದರೆ ಜ್ಞಾನತ್ವ ಎಂಬ ಪಕ್ಷ ಸರಿಯಲ್ಲ.

ಆತ್ಮತ್ವ ಎಂದರೆ ಜ್ಞಾನಾಶ್ರಯತ್ವ ಎಂದು ಹೇಳುತ್ತೇವೆ ಎಂದರೆ, ಅದೂ ಸರಿಯಲ್ಲ. ಕಾರಣ - ಆತ್ಮನನ್ನು ನಿರ್ಗುಣ ಎಂದು ಹೇಳುವುದರಿಂದ ಆತ್ಮನು ಜ್ಞಾನರೂಪಗುಣಕ್ಕೆ ಆಶ್ರಯನಾಗಿಲ್ಲ.

ಆತ್ಮತ್ವ ಎಂದರೆ ಅದೊಂದು ಜಾತಿವಿಶೇಷ ಎಂದು ಹೇಳುತ್ತೇವೆ ಎಂದರೆ, ಅದೂ ಸರಿಯಲ್ಲ. ಕಾರಣ -

**‘ ನಿತ್ಯಂ ಏಕಂ ಅನೇಕಾನುಗತಂ ಸಾಮಾನ್ಯಮ್ ’**

ಎಂಬುದಾಗಿ ಹೇಳಿದಂತೆ ಜಾತಿಯು ಅನೇಕಾನುಗತವಾಗಿರಬೇಕು. (ಅನೇಕ ಧರ್ಮಿಗಳಲ್ಲಿ ಇರುವ ಧರ್ಮ ಆಗಿರಬೇಕು.) ಪ್ರಕೃತ ಆತ್ಮತ್ವವನ್ನು ಜಾತಿ ಎಂದು ಹೇಳಿದರೆ ಆತ್ಮರು ಅನೇಕರಾಗಬೇಕಾಗುತ್ತದೆ. ಅದು ನಿಮಗೆ ಅನಿಷ್ಟ. ಹಾಗಾಗಿ ಆತ್ಮನು ಒಬ್ಬನೇ ಆದ್ದರಿಂದ ಆತ್ಮತ್ವವು ಜಾತಿ ಆಗುವುದಿಲ್ಲ.

ವಾಸ್ತವಿಕವಾಗಿ ಆತ್ಮ ಒಬ್ಬನೇ ಇದ್ದರೂ ಕಲ್ಪಿತರಾದ ಆತ್ಮರು ಬಹಳ ಜನ ಇರುವುದರಿಂದ, ಅಂತಹ ಕಲ್ಪಿತ ಅನೇಕಾತ್ಮನಿಷ್ಠವಾದ ಕಲ್ಪಿತ ಆತ್ಮತ್ವವು ಜಾತಿಯಾಗಬಹುದಲ್ಲ ? ಎಂಬುದಾಗಿ ಶಂಕಿಸುವುದು ಸರಿಯಲ್ಲ. ಕಾರಣ ''ಅನ್ಯೋನ್ಯಸ್ಮಿನ್ ಅನ್ಯೋನ್ಯಾತ್ಮಕತಾಂ ಅನ್ಯೋನ್ಯಧರ್ಮಾಂಶ್ಚ ಅಧ್ಯಸ್ಯ'' ಎಂದು ಹೇಳುವ ನೀವು ದೇಹೇಂದ್ರಿಯಾದಿಗಳಲ್ಲಿಯೂ ಆತ್ಮತ್ವಾರೋಪವನ್ನು ಒಪ್ಪಿದ್ದರಿಂದ, ಪಕ್ಷೈಕದೇಶವಾದ ದೇಹೇಂದ್ರಿಯಾದಿಗಳಲ್ಲಿ ಪ್ರಮಾಣದೃಷ್ಟತ್ವ ಇರುವಂತೆ ಆತ್ಮತ್ವವೂ ಇರುವುದರಿಂದ ಸಾಧನಾವ್ಯಾಪಕವಾಗದ ಕಾರಣ ಆತ್ಮತ್ವವು ಉಪಾಧಿಯಾಗುವುದಿಲ್ಲ ಎಂದು ಭಾವ.

**ಅವತಾರಿಕೆ :-** ‘ವಿಮತಂ ಸತ್ಯಂ ಪ್ರಮಾಣದೃಷ್ಟತ್ವಾತ್’ ಎಂಬ ಅನುಮಾನಕ್ಕೆ ತರ್ಕಪರಾಹತಿಯನ್ನು ಶಂಕಿಸುತ್ತಾರೆ.

**ಟೀಕಾ :- ಪ್ರಪಂಚಸ್ಯ ಸತ್ಯತ್ವೇ ದೃಗ್ದೃಶ್ಯಯೋಃ ಸಂಬಂಧಾನುಪಪತ್ತೇಃ ಕಥಂ ದೃಶ್ಯತ್ವಂ ? ಇತಿ ಚೇತ್,**

**ಅಂತರೇಣೈವ ಸಂಬಂಧಂ ದೃಶ್ಯತ್ವಮಸ್ತು । ಅತಿಪ್ರಸಂಗಂ ಚ ಪ್ರತೀತಿರೇವಾಪಾಕರಿಷ್ಯತಿ ।**

**ಅನುವಾದ :-** ಪ್ರಪಂಚಕ್ಕೆ ಸತ್ಯತ್ವವನ್ನು ಹೇಳಿದರೆ ತರ್ಕಪರಾಹತಿ ಬರುತ್ತದೆ. ಹೇಗೆಂದರೆ -

**''ಯದಿ ಪ್ರಪಂಚಃ ಸತ್ಯಃ ಸ್ಯಾತ್ ತರ್ಹಿ ದೃಗ್ದೃಶ್ಯಯೋಃ ಸಂಬಂಧಾನುಪಪತ್ತ್ಯಾ ದೃಶ್ಯತ್ವಮೇವ ನ ಸ್ಯಾತ್ ।''**

ಪ್ರಪಂಚವು ಒಂದುವೇಳೆ ಸತ್ಯವೇ ಆಗಿದ್ದರೆ ಆಗ ದೃಗ್-ದೃಶ್ಯಗಳಲ್ಲಿ ಸಂಬಂಧವು ಉಪಪನ್ನವಾಗದ ಕಾರಣ ದೃಶ್ಯತ್ವವೇ ಕೂಡದೇ ಹೋಗಬೇಕಾಗುತ್ತದೆ.

ಅದು ಹೇಗೆಂದರೆ - ವೃತ್ತಿಪ್ರತಿಬಿಂಬಿತಚೈತನ್ಯಾಭಿವ್ಯಕ್ತ ಅಧಿಷ್ಠಾನಚೈತನ್ಯ ರೂಪವಾದ ಯಾವ ಜ್ಞಾನವಿದೆಯೋ ಅದೇ ದೃಕ್ ಎನಿಸುತ್ತದೆ. ಅಂತಹ ದೃಕ್‌ಗೂ ದೃಶ್ಯವಾದ ಘಟಾದಿಗಳಿಗೂ ಯಾವ ಸಂಬಂಧವಿದೆ ?

ದೃಕ್-ದೃಶ್ಯಗಳಲ್ಲಿ ಸಂಯೋಗ ಸಂಬಂಧವನ್ನು ಹೇಳಲು ಬರುವುದಿಲ್ಲ. ಕಾರಣ- ಎರಡು ದ್ರವ್ಯಗಳಲ್ಲಿ ಮಾತ್ರವೇ ಸಂಯೋಗಸಂಬಂಧವನ್ನು ಹೇಳಲು ಸಾಧ್ಯ. ಪ್ರಕೃತ ದೃಶ್ಯವಾದ ಘಟಾದಿಗಳು ದ್ರವ್ಯವಾದರೂ ದೃಕ್ = ಜ್ಞಾನವು ದ್ರವ್ಯವಾಗಿಲ್ಲ. ಅದು ಗುಣವಾಗಿದೆ. ಅಂತಹ ಗುಣ-ದ್ರವ್ಯಗಳ ನಡುವೆ ಸಂಯೋಗ ಸಂಬಂಧವನ್ನು ಹೇಳಲು ಬರುವುದಿಲ್ಲ.

ದೃಕ್-ದೃಶ್ಯಗಳಲ್ಲಿ ಸಮವಾಯ ಸಂಬಂಧವನ್ನು ಹೇಳಲೂ ಬರುವುದಿಲ್ಲ. ಕಾರಣ - ಒಂದು ಗುಣಕ್ಕೂ ಅದಕ್ಕೆ ಆಶ್ರಯವಾದ ದ್ರವ್ಯಕ್ಕೂ ಸಮವಾಯ ಸಂಬಂಧ ಹೇಳಬೇಕು. ಜ್ಞಾನವು ಗುಣವಾದರೂ ಅದಕ್ಕೆ ಆಶ್ರಯ ಆತ್ಮನೇ ಹೊರತು ಘಟಾದಿಗಳಲ್ಲ. ಹಾಗಾಗಿ ಆತ್ಮಧರ್ಮವಾದ ಜ್ಞಾನಕ್ಕೂ ಘಟಾಗಳಿಗೂ ಸಮವಾಯ ಸಂಬಂಧವನ್ನು ಹೇಳಲು ಬರುವುದಿಲ್ಲ.

ವಿಷಯವಿಷಯೀಭಾವ ಎನ್ನುವುದು ಸಂಬಂಧವೇ ಆಗುವುದಿಲ್ಲ. ಕಾರಣ - ಅದು ಸಂಬಂಧಿಯಿಂದ ಭಿನ್ನವಾದದ್ದಲ್ಲ. ಮತ್ತು ಸಂಯೋಗ - ಸಮವಾಯಗಳಂತೆ

ಅದು ದ್ವಿಷ್ಠ ಅಲ್ಲ. (ಘಟ-ಪಟಗಳಲ್ಲಿ ಸಂಯೋಗ ಸಂಬಂಧ ಹೇಳಿದಾಗ ಘಟ-ಪಟ ಎರಡರಲ್ಲಿಯೂ ಒಂದೇ ಸಂಯೋಗ ಇರುವಂತೆ, ವಿಷಯ-ವಿಷಯೀಭಾವ ಎನ್ನುವುದು ಎರಡರಲ್ಲಿಯೂ ಒಂದೇ ಇರುವುದಿಲ್ಲ. ವಿಷಯತ್ವ ಘಟಾದಿಗಳಲ್ಲಿ ಇದ್ದರೆ, ವಿಷಯಿತ್ವ ಜ್ಞಾನದಲ್ಲಿ ಇರುತ್ತದೆ.) ಆದ್ದರಿಂದ ವಿಷಯ-ವಿಷಯೀಭಾವ ಎನ್ನುವುದು ಸಂಬಂಧವೇ ಆಗುವುದಿಲ್ಲ.

ಹಾಗಾದರೆ - ಪ್ರಪಂಚವು ಸತ್ಯವಾದರೆ ದೃಕ್-ದೃಶ್ಯಗಳಿಗೆ ಸಂಯೋಗಾದಿ ಸಂಬಂಧಗಳು ಉಪಪನ್ನವಾಗದ ಕಾರಣ ಪ್ರಪಂಚವು ದೃಕ್‌ನಲ್ಲಿ ಅಧ್ಯಸ್ತವಾಗಿದೆ ಎಂಬುದಾಗಿ ಆಧ್ಯಾತ್ಮಿಕಸಂಬಂಧವನ್ನೇ ಹೇಳಬೇಕು. ಪ್ರಪಂಚವು ಸತ್ಯವಾಗುವುದಾದರೆ ಆ ಆಧ್ಯಾತ್ಮಿಕಸಂಬಂಧ ಕೂಡುವುದಿಲ್ಲ.

ಆದ್ದರಿಂದ ''ಪ್ರಪಂಚವು ಒಂದುವೇಳೆ ಸತ್ಯವೇ ಆಗಿದ್ದರೆ ಆಗ ದೃಗ್-ದೃಶ್ಯಗಳಲ್ಲಿ ಸಂಬಂಧವು ಉಪಪನ್ನವಾಗದ ಕಾರಣ ದೃಶ್ಯತ್ವವೇ ಕೂಡದೇ ಹೋಗಬೇಕಾಗುತ್ತದೆ '' ಎಂಬುದಾಗಿ ನಿಮ್ಮ ಅನುಮಾನಕ್ಕೆ ತರ್ಕಪರಾಹತಿ ಬರುತ್ತದೆಯಲ್ಲವೇ ?

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ ದೃಕ್ - ದೃಶ್ಯಗಳಲ್ಲಿ ಸಂಬಂಧವನ್ನು ಒಪ್ಪದೆಯೇ ದೃಶ್ಯತ್ವವನ್ನು ಅಂಗೀಕರಿಸಲು ಸಾಧ್ಯ .

ಹಾಗಾದರೆ ಸಂಬಂಧವನ್ನು ಒಪ್ಪದೆಯೇ ದೃಶ್ಯತ್ವವನ್ನು ಅಂಗೀಕರಿಸುವುದಾದರೆ, ಘಟಜ್ಞಾನಕ್ಕೂ ಪಟಕ್ಕೂ ಯಾವ ಸಂಬಂಧ ಇಲ್ಲದಿದ್ದರೂ ಘಟಜ್ಞಾನಕ್ಕೆ ಪಟವು ವಿಷಯವಾಗಲಿ ಎಂಬುದಾಗಿ ಅತಿಪ್ರಸಂಗ ಬರುತ್ತದೆಯಲ್ಲವೇ ? ಎಂದರೆ, ಆ ವಿಧವಾದ ಅತಿಪ್ರಸಂಗವನ್ನು ಪ್ರತೀತಿಯೇ ಪರಿಹರಿಸುತ್ತದೆ. ಅಂದರೆ 'ಘಟಜ್ಞಾನವಾನ್ ಅಹಂ' ಎಂಬುದಾಗಿ ಅನುವ್ಯವಸಾಯರೂಪ ಪ್ರತೀತಿಯಿಂದ ಘಟಜ್ಞಾನಕ್ಕೆ ಘಟವಿಷಯತ್ವವೇ ತಿಳಿದುಬರುವುದರಿಂದ ಪಟವಿಷಯಕತ್ವ ಹೇಳಲು ಬರುವುದಿಲ್ಲ. ಆದ್ದರಿಂದ ಯಾವ ಅತಿಪ್ರಸಂಗವೂ ಇಲ್ಲ.

**ಟೀಕಾ :- ಸಂಯೋಗೋ ವಾಽಸ್ತು । ಗುಣತ್ವಾನ್ನೇತಿ ಚೇತ್ । ತ್ಯಜ್ಯತಾಂ ಗುಣತ್ವಮ್ । ಗುಣತ್ವೇ ವಾ ಗುಣಾದಿಪಂಚಕಸ್ಯ ನಿರ್ಗುಣತ್ವನಿಷ್ಕ್ರಿಯಾತ್ವ-ಪರಿಭಾಷಾ ನಾದರಣೀಯಾ ।**

**ಸಮವಾಯೋ ವಾಽಸ್ತು । ಪ್ರಕ್ರಿಯಾ ತು ಪ್ರಕಾರಾಂತರೇಣ ಕಲ್ಪ್ಯತಾಮ್ ।**

**ಅನುವಾದ :-** 'ಸಂಬಂಧವು ಇರದೆಯೇ ದೃಶ್ಯತ್ವ ಇರಲಿ' ಎಂಬುದಾಗಿ ಈ ಹಿಂದೆ ಸಮರ್ಥಿಸಿದರು. ಈಗ ಸಂಬಂಧವನ್ನು ಒಪ್ಪಿಯೂ ಉತ್ತರಿಸುತ್ತಾರೆ.

ದೃಕ್-ದೃಶ್ಯಗಳಲ್ಲಿ ಸಂಬಂಧ ಇರಲಿ. ಹಾಗಾದರೆ ಯಾವ ಸಂಬಂಧ ಹೇಳುತ್ತೀರಿ ? ಎಂದರೆ, ಸಂಬಂಧವು ಎರಡು ವಿಧವಾಗಿದೆ. 1) ಸಂಯೋಗ 2) ಸಮವಾಯ ಎಂದು. ಅದರಲ್ಲಿ ಸಂಯೋಗಸಂಬಂಧವೇ ಇರಲಿ.

ಹೌದು, ದ್ರವ್ಯಯೋಃ ಏವ ಸಂಯೋಗಃ = ಎರಡು ದ್ರವ್ಯಗಳಲ್ಲಿ ಮಾತ್ರವೇ ಸಂಯೋಗಸಂಬಂಧ ಹೇಳುವಂತಹದ್ದು. ಪ್ರಕೃತ ದೃಶ್ಯವಾದ ಘಟಾದಿಗಳು ದ್ರವ್ಯವಾದರೂ ದೃಕ್ = ಜ್ಞಾನ ಅದು ಗುಣವಾಗಿದೆ. ಅಂದಮೇಲೆ ಒಂದು ಗುಣ,ಒಂದು ದ್ರವ್ಯ ಈ ಎರಡರಲ್ಲಿ ಸಂಯೋಗಸಂಬಂಧವನ್ನು ಹೇಗೆ ಹೇಳುವುದು ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ ಜ್ಞಾನವು ಗುಣ ಎಂದು ಗೃಹೀತ ಇಟ್ಟುಕೊಂಡು ಈ ರೀತಿ ಶಂಕಿಸುತ್ತಿದ್ದೀರಿ. ಆದರೆ ಜ್ಞಾನಕ್ಕೆ ಗುಣತ್ವವನ್ನು ಅಂಗೀಕರಿಸುವುದು ಬೇಡ. ದ್ರವ್ಯತ್ವವನ್ನೇ ಅಂಗೀಕರಿಸಿರಿ. ಆಗ ಎರಡು ದ್ರವ್ಯಗಳಲ್ಲಿ ಸಂಯೋಗಸಂಬಂಧ ಹೇಳುವುದು ಸರಿಯಾಗುತ್ತದೆ.

ಅಥವಾ 'ತುಷ್ಯತು ದುರ್ಜನಃ' ಎಂಬ ನ್ಯಾಯದಿಂದ ಜ್ಞಾನಕ್ಕೆ ಗುಣತ್ವವನ್ನು ಅಂಗೀಕರಿಸೋಣ. ಜ್ಞಾನವು ಗುಣವಾದರೂ ಸಹ ಘಟಾದಿಗಳ ಜೊತೆ ಸಂಯೋಗಸಂಬಂಧವನ್ನೇ ಹೇಳೋಣ.

ಹೌದು, ಸಂಯೋಗ ಎನ್ನುವುದು ದ್ವಿಷ್ಠವಾಗಿರುವಂತಹದ್ದು. (ಒಂದೇ ಸಂಯೋಗ ಎರಡು ಧರ್ಮಿಗಳಲ್ಲಿಯೂ ಇರುವಂತಹದ್ದು.) ಪ್ರಕೃತ ಜ್ಞಾನಘಟಗಳಲ್ಲಿ ಸಂಯೋಗ ಸಂಬಂಧವನ್ನು ಅಂಗೀಕರಿಸಿದರೆ, ಜ್ಞಾನದಲ್ಲಿಯೂ ಸಂಯೋಗ ಎಂಬ ಗುಣ ಬಂದಂತಾಗುತ್ತದೆ. ಆದರೆ ಜ್ಞಾನ ಎಂಬ ಒಂದು ಗುಣದಲ್ಲಿ ಸಂಯೋಗ ಎಂಬ ಮತ್ತೊಂದು ಗುಣ ಒಪ್ಪಲು ಬರುವುದಿಲ್ಲ. ಕಾರಣ -

**'ಗುಣೇ ಗುಣಾನಂಗೀಕಾರಾತ್'**

ಇತ್ಯಾದಿಯಾಗಿ ಹೇಳಿದಂತೆ ಗುಣ-ಕರ್ಮ-ಸಾಮಾನ್ಯ-ವಿಶೇಷ-ಸಮವಾಯ ಈ ಐದು ಪದಾರ್ಥಗಳಲ್ಲಿ ಗುಣವನ್ನಾಗಲೀ ಕರ್ಮವನ್ನಾಗಲೀ ಒಪ್ಪುವುದಿಲ್ಲ. ಅಂದಮೇಲೆ ಜ್ಞಾನದಲ್ಲಿ ಸಂಯೋಗ ಹೇಳಲು ಬರುವುದಿಲ್ಲವಲ್ಲ ?

ಈ ರೀತಿಯಾಗಿ ಶಂಕೆ ಬಂದರೆ, ಅದೂ ಸರಿಯಲ್ಲ. ಏಕೆಂದರೆ, ಗುಣ-ಕರ್ಮ-ಸಾಮಾನ್ಯ-ವಿಶೇಷ -ಸಮವಾಯ ಎಂಬ ಐದು ಪದಾರ್ಥಗಳು ನಿರ್ಗುಣವಾಗಿವೆ ನಿಷ್ಕ್ರಿಯವಾಗಿವೆ ಎಂಬ ಪರಿಭಾಷೆಯೇ ಆದರಣೀಯವಾಗಿಲ್ಲ. (ನಾವು ಆ ಪರಿಭಾಷೆಯನ್ನು ಆದರಿಸುವುದಿಲ್ಲ.)

ಇಲ್ಲಿ ಅಭಿಪ್ರಾಯ ಇಷ್ಟು :- ಗುಣದಲ್ಲಿ ಗುಣವನ್ನು ಒಪ್ಪಲೇಬೇಕು. ''ಚತುರ್ವಿಂಶತಿ ಗುಣಾಃ'' ''ಕರ್ಮಾಣಿ ಪಂಚ'' ''ಸಾಮಾನ್ಯಂ ತ್ರಿವಿಧಂ'' ''ವಿಶೇಷಾಸ್ತ್ವನಂತಾಃ'' ''ಸಮವಾಯಸ್ತ್ವೇಕ ಏವ'' ಇತ್ಯಾದಿಯಾಗಿ ಪ್ರತೀತಿ ಬರುವುದರಿಂದ ಗುಣಾದಿ ಪಂಚಪದಾರ್ಥಗಳಿಗೆ ಸಗುಣತ್ವವು ಸಿದ್ಧಿಸುತ್ತದೆ. ಅದರಂತೆಯೇ ಪಟವು ಹೋದಾಗ ತದ್ಗತರೂಪದಲ್ಲಿಯೂ ಗತಿ ಕಂಡಿದ್ದರಿಂದ ಗುಣದಲ್ಲಿ ಕ್ರಿಯೆಯನ್ನೂ ಒಪ್ಪಲೇಬೇಕು. ಆದ್ದರಿಂದ ಜ್ಞಾನದಲ್ಲಿ ಸಂಯೋಗವನ್ನು ಒಪ್ಪಿದರೆ ಅನುಪಪತ್ತಿ ಇಲ್ಲ. ಹೀಗಾಗಿ ಜ್ಞಾನ-ಪಟಗಳಲ್ಲಿ (ದೃಕ್-ದೃಶ್ಯಗಳಲ್ಲಿ) ಸಂಯೋಗಸಂಬಂಧವನ್ನು ಹೇಳಬಹುದಾಗಿದೆ ಎಂದು ಭಾವ.

ಅಥವಾ, ಜ್ಞಾನ-ಘಟಗಳಲ್ಲಿ (ದೃಕ್-ದೃಶ್ಯಗಳಲ್ಲಿ) ಸಮವಾಯ ಸಂಬಂಧವನ್ನಾದರೂ ಹೇಳೋಣ.

ಹೌದು, ಜ್ಞಾನ-ಘಟಗಳಲ್ಲಿ ಸಮವಾಯವನ್ನು ಹೇಗೆ ಅಂಗೀಕರಿಸಲು ಬರುತ್ತದೆ ? ಏಕೆಂದರೆ -

**''ಅಯುತಸಿದ್ಧಯೋಃ ಸಂಬಂಧಃ ಸಮವಾಯಃ । ಸ ಚೈಕೋ ನಿತ್ಯಶ್ಚ''**

ಎಂಬುದಾಗಿ ಪ್ರಕ್ರಿಯೆ. ಅಂದರೆ - ಘಟದಲ್ಲಿರುವ ರೂಪವನ್ನು ಬೇರ್ಪಡಿಸಿ ತೋರಿಸಲು ಸಾಧ್ಯವಿಲ್ಲ. ಕ್ರಿಯೆಯನ್ನೂ ಬೇರ್ಪಡಿಸಿ ತೋರಿಸಲು ಸಾಧ್ಯವಿಲ್ಲ. ಹೀಗಾಗಿ ಗುಣ -ಗುಣಿಗಳು, ಕ್ರಿಯಾ-ದ್ರವ್ಯಗಳು ಇವು ಅಯುತಸಿದ್ಧವಾದವುಗಳು. ಇಂತಹ ಅಯುತಸಿದ್ಧವಾದವುಗಳಲ್ಲಿ ಇರುವ ಸಂಬಂಧ ಅದು ಸಮವಾಯ. ಆ ಸಮವಾಯ ಒಂದೇ ಆಗಿದೆ. ಜೊತೆಗೆ ನಿತ್ಯವೂ ಆಗಿದೆ ಎನ್ನುವುದು ಪ್ರಕ್ರಿಯೆ.

ಪ್ರಕೃತ ಜ್ಞಾನ ಹಾಗೂ ಆ ಜ್ಞಾನಕ್ಕೆ ಅಧಿಕರಣನಾಗುವ ಆತ್ಮಾ ಇವುಗಳು ಅಯುತಸಿದ್ಧವಾಗಿವೆ. ಹೊರತು ಜ್ಞಾನ-ಘಟಗಳು ಅಯುತಸಿದ್ಧವಾಗಿಲ್ಲ. ಅಂದಮೇಲೆ ಅಯುಸಿದ್ಧವಾಗದ ಜ್ಞಾನ-ಘಟಗಳಲ್ಲಿ ಸಮವಾಯ ಸಂಬಂಧವನ್ನು ಹೇಗೆ ಹೇಳುವುದು?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಕಾರಣ ''ಅಯುತಸಿದ್ಧಯೋಃ ಸಂಬಂಧಃ ಸಮವಾಯಃ ....'' ಎಂದೇ ಏಕೆ ಪ್ರಕ್ರಿಯೆ ಹೇಳಬೇಕು ? ಕಿಂತು -

**''ಸಂಯೋಗಾತಿರಿಕ್ತಃ ಸಂಬಂಧಃ ಸಮವಾಯಃ । ಸ ಚಾನಿತ್ಯಃ ಅನೇಕಶ್ಚ ''**

(ಸಂಯೋಗ ಸಂಬಂಧದಿಂದ ಭಿನ್ನವಾದ ಸಂಬಂಧ ಅದು ಸಮವಾಯ. ಆ ಸಮವಾಯ ಅನಿತ್ಯವಾಗಿದೆ ಹಾಗೂ ಅನೇಕವಾಗಿದೆ) ಎಂಬುದಾಗಿ ಮತ್ತೊಂದು ಪ್ರಕಾರದಿಂದ ಪ್ರಕ್ರಿಯೆಯನ್ನು ಕಲ್ಪಿಸಿರಿ. ಆದ್ದರಿಂದ ಜ್ಞಾನ-ಘಟಗಳಲ್ಲಿ ಸಮವಾಯ ಸಂಬಂಧವನ್ನು ಅಂಗೀಕರಿಸಿದರೂ ಯಾವ ಅನುಪಪತ್ತಿ ಇಲ್ಲ.

**ಟೀಕಾ :- ಕಿಂಚ ಗುಣಗುಣಿನೋಃ ಸಂಯೋಗಾನುಪಪತ್ತೌ ಸಮವಾಯ ಇವ ತಂತುದ್ವಯಸ್ಯ ಸಮವಾಯಾಸಂಭವೇ ಸಂಯೋಗ ಇವ ಚ ದೃಗ್ದೃಶ್ಯಯೋಃ ಪ್ರಸಿದ್ಧಸಂಬಂಧಾನುಪಪತ್ತಾವನ್ಯ ಏವ ಕಶ್ಚಿತ್ ವಾಸ್ತವಃ ಕಿಂ ನ ಕಲ್ಪನೀಯಃ ? ನ ಹಿ ಪ್ರಕ್ರಿಯಾಪರಿಕ್ಷಯೋ ವಸ್ತುಪರಿಕ್ಷಯಾತ್ ಗರೀಯಾನ್।**

**ಅನುವಾದ :-** ಮತ್ತು ಗುಣ-ಗುಣಿಗಳಲ್ಲಿ ಸಂಯೋಗ ಸಂಬಂಧ ಹೇಳಲು ಬರದಿದ್ದಾಗ ಸಮವಾಯ ಸಂಬಂಧವನ್ನು ಅಂಗೀಕರಿಸುವಂತೆ, ಎರಡು ತಂತುಗಳ ಮಧ್ಯದಲ್ಲಿ ಸಮವಾಯ ಸಂಬಂಧ ಹೇಳಲು ಬರದಿದ್ದಾಗ ಸಂಯೋಗ ಸಂಬಂಧವನ್ನು ಅಂಗೀಕರಿಸುವಂತೆ, ಪ್ರಕೃತ ದೃಕ್ - ದೃಶ್ಯಗಳಲ್ಲಿ (ಜ್ಞಾನ-ಘಟಗಳಲ್ಲಿ) ಪ್ರಸಿದ್ಧವಾದ ಸಂಯೋಗ-ಸಮವಾಯ ಎಂಬ ಎರಡು ಸಂಬಂಧಗಳನ್ನು ಹೇಳಲು ಬರದಿದ್ದಾಗ ಆ ಸಂಯೋಗ-ಸಮವಾಯಗಳಿಂದ ಭಿನ್ನವಾದ ವಾಸ್ತವವಾದ (ಆಧ್ಯಾಸಿಕ ಸಂಬಂಧವನ್ನು ಬಿಟ್ಟು ಬೇರೊಂದು) ಹೊಸ ಸಂಬಂಧವನ್ನು ಏಕೆ ಕಲ್ಪಿಸಬಾರದು ?

ದೃಕ್-ದೃಶ್ಯಗಳಲ್ಲಿ ಸಂಯೋಗ-ಸಮವಾಯಗಳಿಂದ ಭಿನ್ನವಾದ ವಾಸ್ತವವಾದ ಹೊಸ ಸಂಬಂಧವನ್ನು ಅಂಗೀಕರಿಸಿರಿ ಎಂದು ಭಾವ.

ಹೌದು, ದೃಕ್-ದೃಶ್ಯಗಳಲ್ಲಿ ವಾಸ್ತವವಾದ ಯಾವ ಸಂಬಂಧವನ್ನು ಕಲ್ಪಿಸುತ್ತೀರಿ ಆ ಸಂಬಂಧದ ಲಕ್ಷಣವೇನು ? ಅದರ ವಿಶೇಷವಾದ ಹೆಸರೇನು ? ಎಂದರೆ, ಅದು ಸರಿಯಲ್ಲ. ಕಾರಣ - ಜ್ಞಾನಜ್ಞೇಯಗಳಲ್ಲಿ ಸಂಯೋಗ-ಸಮವಾಯಗಳು ಅನುಪಪನ್ನ ಎಂದು ಸಿದ್ಧವಾದಾಗ ತದತಿರಿಕ್ತಸಂಬಂಧವಿಷಯದಲ್ಲಿ ಲಕ್ಷಣಾದಿಜಿಜ್ಞಾಸೆಯು ವ್ಯರ್ಥವಾಗಿದೆ. ಮತ್ತು

**''ಸಂಯೋಗಸಮವಾಯೇತರತ್ವೇ ಸತಿ ಸಂಬಂಧತ್ವಂ''**

(ಸಂಯೋಗ-ಸಮವಾಯಗಳಿಂದ ಭಿನ್ನವಾಗಿದ್ದು ಯಾವುದು ಸಂಬಂಧವಾಗಿರುವುದೋ ಅದೇ ಆ ದೃಕ್-ದೃಶ್ಯಗಳಲ್ಲಿರುವ ಸಂಬಂಧ)

ಎಂಬುದಾಗಿ ಲಕ್ಷಣವನ್ನು ಹೇಳಲೂ ಬರುತ್ತದೆ. ಜೊತೆಗೆ ವಿಷಯ-ವಿಷಯೀಭಾವರೂಪದಿಂದ ಯಥಾರುಚಿಯಾಗಿ ವಿಶೇಷ ಹೆಸರನ್ನೂ ಕಲ್ಪಿಸಬಹುದಾಗಿದೆ ಎಂದು ಭಾವ.

ಹಾಗಾದರೆ, (ಸಂಯೋಗ-ಸಮವಾಯಗಳಿಂದ ಭಿನ್ನವಾದ ವಾಸ್ತವವಾದ ಮತ್ತೊಂದು ಹೊಸ ಸಂಬಂಧವನ್ನು ಅಂಗೀಕರಿಸುವುದಾದರೆ) ''ಸಂಬಂಧವು ಎರಡು ವಿಧವಾಗಿದೆ 1) ಸಂಯೋಗ 2) ಸಮವಾಯ'' ಎಂಬ ಪ್ರಕ್ರಿಯೆ ಭಂಗವಾಗುತ್ತದೆಯಲ್ಲವೇ ? ಮತ್ತು ಹಾಗೆ ಸಂಯೋಗ-ಸಮವಾಯಗಳಿಂದ ಭಿನ್ನವಾದ ಹೊಸ ಸಂಬಂಧವನ್ನು ಕಲ್ಪಿಸಿದರೆ ಆ ಹೊಸ ಸಂಬಂಧವು ಕ್ಲೃಪ್ತವಾದ ಪದಾರ್ಥಗಳಲ್ಲಿ (ದ್ರವ್ಯ-ಗುಣ-ಕರ್ಮ ಇತ್ಯಾದಿ 9 ಪದಾರ್ಥಗಳಲ್ಲಿ) ಅಂತರ್ಭಾವ ಆಗುವುದಿಲ್ಲವಾದ್ದರಿಂದ ಆಧಿಕ್ಯವೂ ಬರುತ್ತದೆಯಲ್ಲವೇ ? (ಈ ಹೊಸ ಸಂಬಂಧರೂಪವಾದ ಹತ್ತನೇ ಅಧಿಕಪದಾರ್ಥವನ್ನು ಅಂಗೀಕರಿಸಿದಂತಾಗುತ್ತದೆ-ಯಲ್ಲವೇ?)

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಕಾರಣ ''ನ ಹಿ ಪ್ರಕ್ರಿಯಾಪರಿಕ್ಷಯೋ ವಸ್ತುಪರಿಕ್ಷಯಾತ್ ಗರೀಯಾನ್'' ವಸ್ತುಪರಿಕ್ಷಯಕ್ಕಿಂತಲೂ ಪ್ರಕ್ರಿಯಾಪರಿಕ್ಷಯ ದೊಡ್ಡದಲ್ಲ.

**ಅದರ ಅಭಿಪ್ರಾಯ ಇಷ್ಟು :-** ಪ್ರಮಿತವಾದ ವಸ್ತುವಿಗೆ ಅನುಸಾರವಾಗಿ ಪ್ರಕ್ರಿಯೆಯನ್ನು ಕಲ್ಪಿಸಬೇಕು. ಹೊರತು ತಾವು ಕಲ್ಪಿಸಿದ ಪ್ರಕ್ರಿಯೆಗೆ ಅನುಸಾರವಾಗಿ ಪ್ರಮಿತವಸ್ತುವನ್ನು ತ್ಯಾಗ ಮಾಡಲು ಸಾಧ್ಯವಿಲ್ಲ. ಪ್ರಕೃತದಲ್ಲಿ ಪ್ರಸಿದ್ಧ ಸಂಬಂಧಾನುಪಪತ್ತಿಯಿಂದಲೇ ಆ ಹೊಸ ಸಂಬಂಧವು ಪ್ರಮಿತವಾಗಿದೆ. ಇಂತಹ ಪ್ರಮಿತವಾದ ಸಂಬಂಧವನ್ನು ಹೊಂದಿಸುವುದಕ್ಕಾಗಿ ನಿಮ್ಮ (ಒಂಭತ್ತೇ ಪದಾರ್ಥಗಳು ಎಂಬ) ಪ್ರಕ್ರಿಯೆಯನ್ನು ಬದಲಿಸಿಕೊಳ್ಳಿರಿ. ಹತ್ತು ಪದಾರ್ಥಗಳು ಎಂದು ಅಂಗೀಕರಿಸಿರಿ. ಹೊರತು ಪ್ರಕ್ರಿಯೆ ಹೀಗಿದೆ ಎಂಬ ಕಾರಣಕ್ಕೆ ಪ್ರಮಿತವಾದ ವಸ್ತುವನ್ನು ತ್ಯಾಗ ಮಾಡುವುದು ಉಚಿತವಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-**''ಯದಿ ಜಗನ್ಮಿಥ್ಯಾ ಸ್ಯಾತ್ ತದಾಪಿ ದೃಗ್ದೃಶ್ಯಯೋಃ ಸಂಬಂಧೋ ನ ಸ್ಯಾತ್ '' (ಒಂದುವೇಳೆ ಜಗತ್ತು ಮಿಥ್ಯಾ ಎಂದಾದರೆ ಆಗಲೂ ಸಹ ದೃಕ್-ದೃಶ್ಯಗಳಲ್ಲಿ ಸಂಬಂಧವು ಉಪಪನ್ನವಾಗುವುದಿಲ್ಲ) ಎಂಬುದಾಗಿ ನಿಮ್ಮ ಕುರಿತೂ ಆಪಾದನೆ ಮಾಡಲು ಬರುವುದರಿಂದ ನೀವು ಹೇಳಿದ ತರ್ಕವು ''ಪರಸ್ಯ ಅನನುಕೂಲತ್ವ'' ಎಂಬ ಅಂಗರಹಿತವಾಗುವ ಕಾರಣ ತರ್ಕಾಭಾಸವಾಗುತ್ತದೆ ಎನ್ನುವುದನ್ನು ತೋರಿಸುತ್ತಾರೆ.

**ಟೀಕಾ :- ಕಿಂಚ ಮಿಥ್ಯಾತ್ವೇಽಪಿ ಕಥಂ ದೃಶ್ಯತ್ವಂ ? ಗಗನ ಇವ ಗಂಧರ್ವನಗರಸ್ಯ ದೃಶಿ ಪ್ರಪಂಚಸ್ಯಾರೋಪಿತತ್ವಾದಿತಿ ಚೇತ್ ತರ್ಹಿ ಸರ್ವೇಣ ಸರ್ವಂ ದೃಶ್ಯೇತ । ನ ವಾ ಕೇನಾಪಿ ಕಿಂಚಿತ್ । ಇಂದ್ರಿಯಸನ್ನಿಕರ್ಷಾದಿಕಂ ನಿಯಾಮಕಮಿತಿ ಚೇತ್ ತರ್ಹಿ ಕಿಮನೇನಾರೋಪಿತತ್ವೇನ ? ಕರಣಸಂಬಂಧಾದಿನಿಬಂಧನೋ ವಿಷಯವಿಷಯೀಭಾವ ಏವಾಸ್ತು ದೃಗ್ದೃಶ್ಯಯೋಃ ಸಂಬಂಧ ಇತಿ ಸಂಕ್ಷೇಪಃ ।**

**ಅನುವಾದ :-** ಜಗತ್ತಿಗೆ ನಾವು ಸತ್ಯತ್ವ ಹೇಳಿದಾಗ ದೃಶ್ಯತ್ವ (ದೃಕ್-ದೃಶ್ಯಗಳಲ್ಲಿ ಸಂಬಂಧ) ಹೇಗೆ ? ಎಂಬುದಾಗಿ ನೀವು ಕೇಳುವಂತೆ, ಜಗತ್ತು ಮಿಥ್ಯಾ ಎಂಬುದಾಗಿ ನೀವು ಹೇಳಿದಾಗಲೂ ಸಹ ದೃಶ್ಯತ್ವ (ದೃಕ್-ದೃಶ್ಯಗಳಲ್ಲಿ ಸಂಬಂಧ) ಹೇಗೆ ಉಪಪನ್ನವಾಗುತ್ತದೆ ? ಎಂಬುದಾಗಿ ನಾವೂ ಪ್ರಶ್ನಿಸುತ್ತೇವೆ.

ಯಾವ ರೀತಿಯಾಗಿ ಗಂಧರ್ವನಗರವು ಗಗನದಲ್ಲಿ ಆರೋಪಿತವಾಗಿದೆಯೋ ಅದೇ ರೀತಿಯಾಗಿ ದೃಕ್‌ನಲ್ಲಿ ಸಮಗ್ರ ಪ್ರಪಂಚವೂ ಆರೋಪಿತವಾಗಿದೆ. ಹೀಗೆ ಆಧ್ಯಾತ್ಮಿಕಸಂಬಂಧ ಇರುವುದರಿಂದ ಪ್ರಪಂಚವು ಮಿಥ್ಯಾ ಆದರೆ ದೃಕ್-ದೃಶ್ಯಗಳಲ್ಲಿ ಸಂಬಂಧವು ಉಪಪನ್ನವಾಗುತ್ತದೆ ಎಂದು ಉತ್ತರ ಹೇಳುವುದಾದರೆ,

ನಿಮ್ಮ ಮತದಲ್ಲಿ ಚೈತನ್ಯವೇ ದೃಕ್ ಆಗಿದ್ದರಿಂದ ಅಂತಹ ಚೈತನ್ಯದಲ್ಲಿ ಪ್ರಪಂಚ ಆರೋಪಿತ ಎನ್ನುವುದಾದರೆ, ನಾವು ಪ್ರಶ್ನಿಸುತ್ತೇವೆ. ಅಧಿಷ್ಠಾನವಾದಂತಹ ಚೈತನ್ಯವು ಈಗ ಸಂಸಾರಾವಸ್ಥೆಯಲ್ಲಿ ತೋರುತ್ತದೆ ಎನ್ನುತ್ತೀರೋ ? ಅಥವಾ ತೋರುವುದಿಲ್ಲ ಎನ್ನುತ್ತೀರೋ ?

ಅಧಿಷ್ಠಾನವಾದ ಚೈತನ್ಯವು ತೋರುತ್ತದೆ ಎನ್ನುವುದಾದರೆ ಎಲ್ಲರಿಗೂ ಎಲ್ಲವೂ ತೋರಲಿ. ಅಂದರೆ - ಶುಕ್ತಿಯು ತೋರಿದಾಗ ಮಾತ್ರ ರಜತಜ್ಞಾನ ಆಗುತ್ತದೆ. ಹೀಗಾಗಿ

ಆರೋಪಿತಜ್ಞಾನವಾಗಬೇಕಾದರೆ ಅಧಿಷ್ಠಾನಪ್ರಕಾಶ ಕಾರಣವಾಗಿದೆ. ಪ್ರಕೃತ ಪ್ರಪಂಚಾರೋಪಾಧಿಷ್ಠಾನವಾದ ಚೈತನ್ಯವು ಎಲ್ಲರಿಗೂ ಸಾಧಾರಣವಾಗಿಯೇ ತೋರುವುದರಿಂದ ಆ ಚೈತನ್ಯದಲ್ಲಿ ಆರೋಪಿತವಾದ ಎಲ್ಲವೂ ಎಲ್ಲರಿಗೂ ತೋರಲಿ ಎಂದು ಅತಿಪ್ರಸಂಗ ಬರುತ್ತದೆ. ಒಂದುವೇಳೆ ಶುಕ್ತಿರಜತಾದಿಗಳಂತೆ ಘಟಾದಿಗಳೆಲ್ಲವೂ ಆರೋಪಿತವಾಗುವುದಾದರೆ ಆಗ ಆರೋಪಿತತ್ವ ಎನ್ನುವುದು ಶುಕ್ತಿರಜತ-ಘಟಾದಿಗಳಲ್ಲಿ ಸಾಧಾರಣವಾದದ್ದರಿಂದ ಯಾವ ರೀತಿಯಾಗಿ ಘಟಾದಿಗಳು ಅನೇಕ ಪ್ರತಿಪತ್ತಿಸಾಧಾರಣವಾಗಿವೆಯೋ (ಸಾಧಾರಣವಾಗಿ ಎಲ್ಲರ ಜ್ಞಾನಕ್ಕೂ ವಿಷಯವಾಗಿವೆಯೋ) ಅದೇ ರೀತಿಯಾಗಿ ಶುಕ್ತಿರಜತಾದಿಗಳೂ ಸಹ ಅನೇಕ ಪ್ರತಿಪತ್ತಿಸಾಧಾರಣ ಆಗಲಿ (ಸಾಧಾರಣವಾಗಿ ಎಲ್ಲರ ಜ್ಞಾನಕ್ಕೂ ವಿಷಯವಾಗಲಿ) ಎಂದು ಭಾವ.

ಇನ್ನು ಅಧಿಷ್ಠಾನವಾದಂತಹ ಚೈತನ್ಯವು ತೋರುವುದಿಲ್ಲ ಎಂದಾದರೆ, ಆರೋಪಿತಜ್ಞಾನಕ್ಕೆ ಅಧಿಷ್ಠಾನಪ್ರಕಾಶ ಕಾರಣವಾದ್ದರಿಂದ ಪ್ರಕೃತ ಅಧಿಷ್ಠಾನಚೈತನ್ಯಪ್ರಕಾಶ ಇಲ್ಲ ಎಂದಾದರೆ ಆರೋಪಿತವಾದ ಪ್ರಪಂಚದಲ್ಲಿ ಯಾವ ವಸ್ತುವೂ ಯಾರಿಗೂ ತೋರದೇ ಹೋಗಬೇಕಾಗುತ್ತದೆ.

ಇದರ ಮೇಲೆ ಆಕ್ಷೇಪ :- ಸರ್ವೇಣ ಸರ್ವಂ ದೃಶ್ಯೇತ = ಎಲ್ಲರಿಗೂ ಎಲ್ಲವೂ ತೋರಲಿ ಎಂದು ಆಕ್ಷೇಪಿಸುವುದು ಸರಿಯಲ್ಲ. ಏಕೆಂದರೆ - ಯಾವನ ತೈಜಸ ಅಂತಃಕರಣವು ಚಕ್ಷುರಾದಿದ್ವಾರಾ ಹೊರಗೆ ಬಂದು ವಿಷಯವನ್ನು ವ್ಯಾಪಿಸಿ ತದಾಕಾರದಲ್ಲಿ ಪರಿಣಾಮವಾಗಿ, ಆ ವೃತ್ತಿಯಲ್ಲಿ ಉಪಾರೂಢವಾದ ಜೀವಚೈತನ್ಯವು ಘಟಾಧಿಷ್ಠಾನಚೈತನ್ಯದಿಂದ ಐಕ್ಯ ಹೊಂದಿ, ಘಟಾಧಿಷ್ಠಾನಚೈತನ್ಯಗತ ಅಜ್ಞಾನವನ್ನು ನಾಶಪಡಿಸುವುದೋ ಅಂತಹ ವ್ಯಕ್ತಿಗೆ ಮಾತ್ರ ಅಲ್ಲಿ ಆರೋಪಿತವಾದ ಘಟವು ತೋರುತ್ತದೆ. ಹೊರತು ಬೇರೆಯವರಿಗೆ ತೋರುವುದಿಲ್ಲ. ಈ ವಿಧವಾದ ನಿಯಮ ಇರುವುದರಿಂದ 'ಎಲ್ಲರಿಗೂ ಎಲ್ಲವೂ ತೋರಲಿ' ಎಂಬ ಅತಿಪ್ರಸಂಗ ಇಲ್ಲ.

ಈ ರೀತಿಯಾಗಿ ಆಕ್ಷೇಪ ಬಂದರೆ, ಅದು ಸರಿಯಲ್ಲ. ಕಾರಣ ಹೀಗೆ 'ಇಂದ್ರಿಯಸನ್ನಿಕರ್ಷವು ನಿಯಾಮಕ' ಎಂದು ಅಂಗೀಕರಿಸುವುದಾರೆ ದೃಕ್-ದೃಶ್ಯಗಳಲ್ಲಿ ಆಧ್ಯಾಸಿಕಸಂಬಂಧವನ್ನು ಅಂಗೀಕರಿಸುವ ಅಗತ್ಯವೇನು ? ದೃಕ್-ದೃಶ್ಯಗಳಲ್ಲಿ ವಿಷಯ-ವಿಷಯೀಭಾವ ಸಂಬಂಧವೇ ಇರಲಿ ಎಂದು ಅಭಿಪ್ರಾಯ.

ದೃಕ್-ದೃಶ್ಯಗಳಲ್ಲಿ (ಜ್ಞಾನ-ಜ್ಞೇಯಗಳಲ್ಲಿ) ವಿಷಯ-ವಿಷಯೀಭಾವ ಸಂಬಂಧವನ್ನು ಅಂಗೀಕರಿಸುವುದಾದರೆ ಘಟಜ್ಞಾನದಲ್ಲಿ ಪಟವೂ ವಿಷಯವಾಗಲಿ ಎಂಬ ಅತಿಪ್ರಸಂಗ ಬರುವುದಲ್ಲ ?

ಈ ವಿಧವಾದ ಶಂಕೆಯೇ ಸೂಕ್ತವಲ್ಲ. ಏಕೆಂದರೆ ''ಯತ್ಸನ್ನಿಕೃಷ್ಟಕರಣೇನ ಯತ್ ಜ್ಞಾನಂ ಜಾಯತೇ ಸ ತಸ್ಯ ವಿಷಯಃ'' ''ಯಾವ ವಸ್ತುವಿನಿಂದ ಸನ್ನಿಕೃಷ್ಟವಾದ ಇಂದ್ರಿಯದಿಂದ ಯಾವ ಜ್ಞಾನವು ಉಂಟಾಗುವುದೋ ಆ ಜ್ಞಾನಕ್ಕೆ ಆ ವಸ್ತುವೇ ವಿಷಯ'' ಎಂಬ ನಿಯಮವನ್ನು ಒಪ್ಪಿರುವ ಕಾರಣ, ಘಟಸನ್ನಿಕೃಷ್ಟವಾದ ಇಂದ್ರಿಯದಿಂದ ಘಟಜ್ಞಾನ ಹುಟ್ಟಿದ್ದರಿಂದ ಘಟಜ್ಞಾನಕ್ಕೆ ಘಟವೇ ವಿಷಯವಾಗುತ್ತದೆ, ಹೊರತು ಪಟವು ವಿಷಯವಾಗುವುದಿಲ್ಲ. ಅತಿಪ್ರಸಂಗ ಇಲ್ಲ.

ಆದ್ದರಿಂದ ದೃಕ್-ದೃಶ್ಯಗಳಲ್ಲಿ ವಿಷಯ-ವಿಷಯೀಭಾವ ಸಂಬಂಧವನ್ನು ಅಂಗೀಕರಿಸಬಹುದಾದ್ದರಿಂದ , ದೃಶ್ಯವಾದ ಪ್ರಪಂಚಕ್ಕೆ ಸತ್ಯತ್ವವನ್ನು ಹೇಳಿದರೆ ಯಾವ ಅನುಪಪತ್ತಿ ಇಲ್ಲ ಎಂದು ಸಿದ್ಧವಾಗುತ್ತದೆ.

**ಟೀಕಾ :- ಅಥಾವಸರತೋ ದೃಷ್ಟಾಂತಂ ದೂಷಯಿಷ್ಯನ್ ಸಾಧ್ಯಸಿದ್ಧ್ಯರ್ಥಂ ಸಾಧನಾನ್ವೇಷಣಮಿತಿ ಪ್ರಾಧಾನ್ಯಾತ್ ಸಾಧ್ಯವೈಕಲ್ಯಂ ತಾವದಾಹ -**

**ಮೂಲ :- ಶುಕ್ತಿರಜತಸ್ಯಾಪ್ಯನಿರ್ವಚನೀಯತ್ವಾಭಾವಾತ್**
**ಸಾಧ್ಯವಿಕಲೋ ದೃಷ್ಟಾಂತಃ ।**

**'ಕಿಮು ತದ್ದೃಷ್ಟಾಂತೇನ ಜಗತಃ' ಇತಿ ಅಪಿಶಬ್ದಾರ್ಥಃ । ಅಸತ್ವಸ್ಯ ಪರೇಣ ಜಗತ್ಯಸಿಸಾಧಯಿಷಿತತ್ವಾತ್ ಸದ್ವಿವಿಕ್ತತ್ವಾದೀನಾಂ ಚ ಅನಿರ್ವಚನೀಯತ್ವಾ-ಬಹಿರ್ಭಾವಂ ಸಿದ್ಧವತ್ ಕೃತ್ಯ 'ಅನಿರ್ವಚನೀಯತ್ವಾಭಾವಾತ್' ಇತ್ಯುಕ್ತಮ್ । 'ಸಾಧ್ಯವಿಕಲಃ' ಇತಿ ಸಾಧ್ಯಸಮಾನಧರ್ಮವಿಕಲ ಉಚ್ಯತೇ ।**

**ಅನುವಾದ :-** ಪ್ರತಿಜ್ಞಾನಿರಾಕರಣೆ - ಹೇತುನಿರಾಕರಣೆಗಳನ್ನು ಮಾಡಿದ ನಂತರ ದೃಷ್ಟಾಂತನಿರಾಕರಣೆ ಮಾಡುವುದು ಅವಸರಪ್ರಾಪ್ತವಾದ ಕಾರಣ ದೃಷ್ಟಾಂತವನ್ನು ನಿರಾಕರಿಸಲು ಹೊರಟವರಾಗಿ, ಸಾಧ್ಯದ ಸಿದ್ಧಿಗಾಗಿ ಸಾಧನದ ಅನ್ವೇಷಣೆ ಆದ್ದರಿಂದ ಸಾಧ್ಯ-ಸಾಧನಗಳಲ್ಲಿ ಸಾಧ್ಯಕ್ಕೇ ಪ್ರಾಧಾನ್ಯ , ಈ ನಿಟ್ಟಿನಲ್ಲಿ ಸಾಧನವೈಕಲ್ಯಕ್ಕಿಂತಲೂ ಸಾಧ್ಯವೈಕಲ್ಯ ಹೆಚ್ಚಿನದ್ದಾದ್ದರಿಂದ ಮೊದಲಿಗೆ ಸಾಧ್ಯವೈಕಲ್ಯ ದೋಷವನ್ನು ಹೇಳುತ್ತಾರೆ-

**ಮೂಲ :-** ಶುಕ್ತಿರಜತಸ್ಯಾಪ್ಯನಿರ್ವಚನೀಯತ್ವಾಭಾವಾತ್ ಸಾಧ್ಯವಿಕಲೋ ದೃಷ್ಟಾಂತಃ ।

**ಮೂಲಾರ್ಥ :-** ದೃಷ್ಟಾಂತ ಮಾಡಿದ ಶುಕ್ತಿರಜತದಲ್ಲಿಯೂ ಸಾಧ್ಯವಾದ ಅನಿರ್ವಚನೀಯತ್ವ ಇಲ್ಲದ ಕಾರಣ (ಸಾಧ್ಯವೈಕಲ್ಯ ಬರುತ್ತದೆ) ದೃಷ್ಟಾಂತವು ಸಾಧ್ಯವಿಕಲವಾಗುತ್ತದೆ.

ದೃಷ್ಟಾಂತವಾದ ಶುಕ್ತಿರಜತದಲ್ಲಿಯೇ ಅನಿರ್ವಚನೀಯತ್ವ ಇಲ್ಲ ಎಂದಮೇಲೆ (ಆದರ ದೃಷ್ಟಾಂತದಿಂದ ಜಗತ್ತಿನಲ್ಲಿ ಅನಿರ್ವಚನೀಯತ್ವವನ್ನು ಸಾಧಿಸಲು ಬರುವುದಿಲ್ಲ) ಪಕ್ಷವಾದ ಜಗತ್ತಿನಲ್ಲಿ ಅನಿರ್ವಚನೀಯತ್ವ ಇಲ್ಲ ಎಂದು ಏನು ಹೇಳುವುದು ? ಈ ವಿಧವಾದ ಕೈಮುತ್ಯವನ್ನು ಸೂಚಿಸುತ್ತಿದೆ 'ಶುಕ್ತಿರಜತಸ್ಯಾಪಿ' ಎನ್ನುವಲ್ಲಿರುವ ಅಪಿಶಬ್ದ.

ಹೌದು, ಮಿಥ್ಯಾತ್ವ ಎಂದರೆ ಅಸತ್ವ ಎಂದಾಗಲೀ ಸದ್ವಿವಿಕ್ತತ್ವ ಎಂದಾಗಲೀ ಪರರಿಗೆ ಅಭಿಪ್ರೇತವಾಗಿದ್ದರೆ, ಆಗ ಪರರನ್ನು ಕುರಿತು ಸಾಧ್ಯವೈಕಲ್ಯವನ್ನು ಆಪಾದಿಸಲು ಹೇಗೆ ಸಾಧ್ಯವಾಗುತ್ತದೆ ? ಕಾರಣ - ನಿಮ್ಮ ಸಿದ್ಧಾಂತದಲ್ಲಿ (ದ್ವೈತವೇದಾಂತದಲ್ಲಿ) ದೃಷ್ಟಾಂತವಾದ ಶುಕ್ತಿರಜತದಲ್ಲಿ ಅಸತ್ವ-ಸದ್ವಿವಿಕ್ತತ್ವಗಳೇ ಅಂಗೀಕೃತವಾದ್ದರಿಂದ 'ಅಸತ್ವ ಇಲ್ಲ ಸದ್ವಿವಿಕ್ತತ್ವ ಇಲ್ಲ ಆದ್ದರಿಂದ ಸಾಧ್ಯವೈಕಲ್ಯ' ಎಂಬುದಾಗಿ ಹೇಳಿದರೆ ಅಪಸಿದ್ಧಾಂತ ಬರುತ್ತದೆಯಲ್ಲವೇ ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ - ಶುಕ್ತಿರೂಪ್ಯವನ್ನು ಪರರು ಅಸದ್ವಿಲಕ್ಷಣ ಎಂದೇ ಅಂಗೀಕರಿಸಿದ್ದಾರೆಯಾದ್ದರಿಂದ (ಶುಕ್ತಿರೂಪ್ಯದಲ್ಲಿ ಅಸತ್ವವನ್ನು ಒಪ್ಪಿಲ್ಲವಾದ್ದರಿಂದ) ಮಿಥ್ಯಾತ್ವ ಎಂದರೆ ಅಸತ್ವ ಎಂದು ಪರರೇ ಹೇಳಲು ಸಾಧ್ಯವಿಲ್ಲ. ಇನ್ನು ಅಸದ್ವಿಲಕ್ಷಣಸ್ವರೂಪಾನುಪಮರ್ದೇನ ಸದ್ವಿವಿಕ್ತತ್ವವನ್ನು ಹೇಳುವುದಾದರೆ ಅದು ಅನಿರ್ವಚನೀಯತ್ವದಲ್ಲಿಯೇ ಪರ್ಯವಸಾನ ಆಗುವುದರಿಂದ ಅದನ್ನು ಸಿದ್ಧವಾಗಿಟ್ಟುಕೊಂಡು,

**'ಶುಕ್ತಿರಜತಸ್ಯಾಪಿ ಅನಿರ್ವಚನೀಯತ್ವಾಭಾವಾತ್'**

ಎಂದಿದ್ದಾರೆ ಆಚಾರ್ಯರು. ಅಸದ್ವಿಲಕ್ಷಣಾಸ್ವರೂಪಾನುಪಮರ್ದೇನ ಸದ್ವಿವಿಕ್ತತ್ವ ಅಂದರೆ ಅನಿರ್ಚವೀಯತ್ವ. ಅದು ಶುಕ್ತಿರೂಪ್ಯದಲ್ಲಿ ಇಲ್ಲವಾದ್ದರಿಂದ ಸಾಧ್ಯವೈಕಲ್ಯ ಬರುತ್ತದೆ ಎಂದು ಭಾವ.

ಹೌದು, ಸಾಧಿಸಲು ಯೋಗ್ಯವಾದದ್ದು ಅಂದರೆ ಸಂದಿಗ್ಧವಾದದ್ದು ಸಾಧ್ಯ . ಅಂತಹ ಸಂದಿಗ್ಧವಾದ ಸಾಧ್ಯ ಇಲ್ಲ ಎಂದರೆ ಅದು ದೃಷ್ಟಾಂತಕ್ಕೆ ಭೂಷಣವೇ. ಕಾರಣ-ನಿಶ್ಚಿತಸಾಧ್ಯಸಮಾನಧರ್ಮ ಉಳ್ಳದ್ದಾಗಿರಬೇಕು ದೃಷ್ಟಾಂತ ಎಂದು ನಿಯಮ. ಹಾಗಾಗಿ ಸಂದಿಗ್ಧವಾದ ಸಾಧ್ಯ ಇಲ್ಲ ಎಂದರೆ ಅದು ದೋಷವಾಗುವುದಿಲ್ಲವಲ್ಲ ?

ಈ ರೀತಿಯಾದ ಶಂಕೆಗೆ ಅವಕಾಶವಿಲ್ಲ. ಕಾರಣ - ಸಾಧ್ಯವಿಕಲಃ ಎಂದರೆ ಸಾಧ್ಯಸಮಾನಧರ್ಮವಿಕಲಃ ಎಂದು ವಿವಕ್ಷಿತವಾದ ಅರ್ಥ. ಅಂತಹ ಸಾಧ್ಯಸಮಾನಧರ್ಮವೈಕಲ್ಯ ಎನ್ನುವುದು ದೃಷ್ಟಾಂತಕ್ಕೆ ದೋಷವೇ ಆಗುತ್ತದೆ ಎಂದು ಭಾವ.

**ಅವತಾರಿಕೆ :-** ''ಶುಕ್ತಿರಜತದಲ್ಲಿ ಅನಿರ್ವಚನೀಯತ್ವ ಇಲ್ಲದ ಕಾರಣ ಸಾಧ್ಯವೈಕಲ್ಯ'' ಎಂದು ಹೇಳಿದಿರಿ. ಆದರೆ ಅದು ಸರಿಯಲ್ಲ. ಕಾರಣ - ಖ್ಯಾತಿ-ಬಾಧಾನ್ಯಥಾನುಪಪತ್ತಿಯಿಂದ ಶುಕ್ತಿರಜತಕ್ಕೆ ಅನಿರ್ವಚನೀಯತ್ವವೇ ಸಿದ್ಧವಾಗಿದೆ ಎಂಬುದಾಗಿ ಶಂಕಿಸುತ್ತಾರೆ -

**ಟೀಕಾ :- ನ ತಾವತ್ ಶುಕ್ತಿರಜತಂ ಸತ್ । ಬಾಧವಿರೋಧಾತ್ । ನಾಪ್ಯಸತ್ । ಅಪರೋಕ್ಷತಯಾ ಪ್ರತೀತ್ಯನುಪಪತ್ತೇಃ । ತತೋಽರ್ಥಾದ-ನಿರ್ವಚನೀಯಂ ತದಿತಿ ಚೇನ್ನ । ಸತ್ತ್ವಾತ್ ಪ್ರತೀತಿಃ ಅಸತ್ತ್ವಾಚ್ಚ ಬಾಧಃ , ಇತಿ ಸದಸದಾತ್ಮಕತ್ವೇನಾಪಿ ಉಪಪತ್ತೇಃ।**

**ಅನುವಾದ :-** ಸಚ್ಚೇನ್ನ ಬಾಧ್ಯೇತ, ಯತ್ ಸತ್ ತನ್ನ ಬಾಧ್ಯತೇ । ಯಥಾ ಆತ್ಮಾ । ಬಾಧ್ಯತೇ ಚೇದಂ, ತಸ್ಮಾನ್ನ ಸತ್ ।

ಸತ್ ಆದದ್ದು ಬಾಧ್ಯವಾಗುವುದಿಲ್ಲ. ಆತ್ಮನು ಸತ್ಯನಾದ್ದರಿಂದ ಬಾಧ್ಯನಾಗಿಲ್ಲ ಹೇಗೋ ಅದರಂತೆ ಶುಕ್ತಿರಜತವು ಸತ್ ಆಗಿದ್ದರೆ ಬಾಧ್ಯವಾಗಬಾರದಿತ್ತು . ಈಗಲಾದರೂ ಬಾಧ್ಯವಾಗುತ್ತಿದೆ. ಆದ್ದರಿಂದ ಸತ್ ಅಲ್ಲ.

ಅಸಚ್ಚೇನ್ನ ಪ್ರತೀಯೇತ । ಯತ್ ಅಸತ್ ತನ್ನ ಅಪರೋಕ್ಷತಯಾ ಪ್ರತೀಯತೇ । ಯಥಾ ನರವಿಷಾಣಮ್ । ಪ್ರತೀಯತೇ ಚೇದಂ ರಜತಂ ಅಪರೋಕ್ಷತಯಾ, ತಸ್ಮಾತ್ ಅಸತ್ ನ ಭವತಿ ।




ಯಾವುದು ಅಸತ್ ಆಗಿರುವುದೋ ಅದು ಅಪರೋಕ್ಷಪ್ರತೀತಿಯಲ್ಲಿ ವಿಷಯವಾಗುವುದಿಲ್ಲ. ನರವಿಷಾಣವು ಅಸತ್ ಆದ್ದರಿಂದ ಅಪರೋಕ್ಷಪ್ರತೀತಿ-ವಿಷಯವಾಗುವುದಿಲ್ಲ ಹೇಗೋ ಅದರಂತೆಯೇ ಶುಕ್ತಿರಜತವೂ ಅಸತ್ ಆಗಿದ್ದರೆ ಅಪರೋಕ್ಷವಾಗಿ ಪ್ರತೀತವಾಗಬಾರದಿತ್ತು. ಈಗಲಾದರೋ ಅಪರೋಕ್ಷವಾಗಿ ಪ್ರತೀತವಾಗುತ್ತಿದೆಯಾದ್ದರಿಂದ ಅದು ಅಸತ್ ಅಲ್ಲ.

ಈ ರೀತಿಯಾಗಿ ಖ್ಯಾತಿ - ಬಾಧ ಉಭಯಾನ್ಯಥಾನುಪಪತ್ತಿಯಿಂದ ಶುಕ್ತಿರಜತಕ್ಕೆ ಸದಸದ್ವಿಲಕ್ಷಣತ್ವರೂಪ ಅನಿರ್ವಚನೀಯತ್ವವೇ ಸಿದ್ಧಿಸುವುದರಿದ, ''ಶುಕ್ತಿರಜತದಲ್ಲಿ ಅನಿರ್ವಚನೀಯತ್ವ ಇಲ್ಲ ಸಾಧ್ಯವೈಕಲ್ಯ'' ಎಂಬುದಾಗಿ ಹೇಗೆ ಹೇಳುತ್ತೀರಿ ?

ಹೀಗೆ ಅರ್ಥಾಪತ್ತಿಪ್ರಮಾಣದಿಂದ ಶುಕ್ತಿರಜತಕ್ಕೆ (ಅನಿರ್ವಚನೀಯತ್ವವನ್ನು) ಸದಸದ್ವಿಲಕ್ಷಣತ್ವವನ್ನು ಶಂಕಿಸಿದರೆ, ಆ ಅರ್ಥಾಪತ್ತಿಗೆ ಅನ್ಯಥಾಪ್ಯುಪಪತ್ತಿಯನ್ನು ಹೇಳುವ ಮೂಲಕ ಅದನ್ನು ನಿರಾಕರಿಸುತ್ತಾರೆ - 'ಸತ್ವಾತ್ ಪ್ರತೀತಿಃ' ಇತ್ಯಾದಿಯಾಗಿ.

''ಅಸಚ್ಚೇನ್ನ ಪ್ರತೀಯೇತ ಪ್ರತೀಯತೇ ಚೇದಂ ತಸ್ಮಾತ್ ಅಸತ್ ನ'' ''ಶುಕ್ತಿರಜತವು ಅಸತ್ ಆಗಿದ್ದರೆ ತೋರಬಾರದಿತ್ತು. ಈಗಲಾದರೂ ತೋರುತ್ತದೆ. ಆದ್ದರಿಂದ ಅಸತ್ ಅಲ್ಲ'' ಎಂಬುದಾಗಿ ಪ್ರತೀತ್ಯನ್ಯಥಾನುಪಪತ್ತಿಯಿಂದ ಶುಕ್ತಿರಜತಕ್ಕೆ ಅಸದ್ವೈಲಕ್ಷಣ್ಯವನ್ನೇ ಏಕೆ ಹೇಳಬೇಕು ? ಸತ್ವವನ್ನು ಅಂಗೀಕರಿಸಿಯೂ ಪ್ರತೀತಿಯನ್ನು ಕೂಡಿಸಬಹುದಾದ್ದರಿಂದ ಪ್ರತೀತ್ಯನ್ಯಥಾನುಪಪತ್ತಿಯಿಂದ ಸತ್ವವನ್ನೇ ಹೇಳಿರಿ.

ಅದೇ ರೀತಿಯಾಗಿ ''ಸಚ್ಚೇನ್ನ ಬಾಧ್ಯೇತ ಬಾಧ್ಯತೇ ಚೇದಂ ತಸ್ಮಾತ್ ಸತ್ ನ'' ''ಶುಕ್ತಿರಜತವು ಸತ್ ಆಗಿದ್ದರೆ ಬಾಧ್ಯವಾಗಬಾರದಿತ್ತು. ಈಗಲಾದರೂ ಬಾಧ್ಯವಾಗುತ್ತದೆ. ಆದ್ದರಿಂದ ಸತ್ ಅಲ್ಲ'' ಎಂಬುದಾಗಿ ಬಾಧಾನ್ಯಥಾನುಪಪತ್ತಿ-ಯಿಂದಾಗಿ ಶುಕ್ತಿರೂಪ್ಯಕ್ಕೆ ಸದ್ವೈಲಕ್ಷಣ್ಯವನ್ನೇ ಏಕೆ ಹೇಳಬೇಕು. ಅಸತ್ವವನ್ನು ಅಂಗೀಕರಿಸಿಯೂ ಬಾಧವನ್ನು ಕೂಡಿಸಬಹುದಾದ್ದರಿಂದ ಬಾಧಾನ್ಯಥಾನುಪಪತ್ತಿ-ಯಿಂದ ಅಸತ್ವವನ್ನೇ ಹೇಳಿರಿ.

ಹಾಗಾದರೆ ಶುಕ್ತಿರಜತವು ಅತ್ಯಂತಸತ್ ಆದರೆ ಬಾಧ ಉಪಪನ್ನವಾಗುವುದಿಲ್ಲ. ಅತ್ಯಂತಾಸತ್ ಆದರೆ ಪ್ರತೀತಿ ಉಪಪನ್ನವಾಗುವುದಿಲ್ಲ. ಆದ್ದರಿಂದ ಬಾಧ-ಪ್ರತೀತಿ ಉಭಯಾನ್ಯಥಾನುಪಪತ್ತಿಯಿಂದ ಶುಕ್ತಿರಜತಕ್ಕೆ (ಸತ್ವ-ಅಸತ್ವ ಎರಡನ್ನೂ) ಸದಸದಾತ್ಮಕತ್ವವನ್ನು ಅಂಗೀಕರಿಸಬಹುದಾಗಿದೆ. (ಹೊರತು ಸದಸದ್ವೈಲಕ್ಷಣ್ಯವನ್ನು

ಅಂಗೀಕರಿಸಬೇಕಾದ ಅಗತ್ಯ ಇಲ್ಲ.) ಹೀಗೆ ಖ್ಯಾತಿ-ಬಾಧಗಳನ್ನು ಅನ್ಯಥಾಪಿ = ಸದಸದಾತ್ಮಕತ್ವವನ್ನು ಅಂಗೀಕರಿಸಿಯೂ ಕೂಡಿಸಬಹುದಾದ್ದರಿಂದ, ಅರ್ಥಾಪತ್ತಿಗೆ ಅನ್ಯಥಾಪ್ಯುಪಪತ್ತಿ ಬರುವುದರಿಂದ, ಅರ್ಥಾಪತ್ತಿಯಿಂದ (ಸದಸದ್ವೈಲಕ್ಷಣ್ಯವನ್ನು) ಅನಿರ್ವಚನೀಯತ್ವವನ್ನು ಸಾಧಿಸಲು ಬರುವುದಿಲ್ಲ.

**ಟೀಕಾ :- ತತ್ ವಿರುದ್ಧಮಿತಿ ಚೇತ್ । ಕೋಽಯಂ ವಿರೋಧಃ ಅರ್ಥಾಪತ್ತಿಶ್ಚೇತ್ ತಥಾಭಾವಂ ಗಮಯೇತ್ । ಅನ್ಯಥಾ ಸದಸದ್ವೈಲಕ್ಷಣ್ಯ-ಮಪಿ ನಾಂಗೀಕಾರ್ಯಂ ಸ್ಯಾತ್ । ವಿರುದ್ಧವಿಧಿಸಮುಚ್ಚಯವತ್ ವಿರುದ್ಧನಿಷೇಧಸಮುಚ್ಚಯಸ್ಯಾಪಿ ವಿರುದ್ಧತ್ವಾತ್ ।**

**ನಿಷೇಧಸಮುಚ್ಚಯಸ್ಯಾತಾತ್ವಿಕತ್ವಾನ್ನ ವಿರೋಧ ಇತಿ ಚೇತ್ । ತರ್ಹಿ ವಿಧಿ ಸಮುಚ್ಚಯೋಽಪ್ಯತಾತ್ವಿಕ ಏವಾಂಗೀಕ್ರಿಯತಾಮ್ । ಲಾಘವಾತ್ ।**

**ಅನುವಾದ :-** ನಮ್ಮ ಅರ್ಥಾಪತ್ತಿಗೆ ಅನ್ಯಥಾಪ್ಯುಪಪತ್ತಿಯನ್ನು ಹೇಳುವಾಗ ''ಶುಕ್ತಿರಜತಕ್ಕೆ ಸದಸದಾತ್ಮಕತ್ವವನ್ನು (ಸತ್ವ-ಅಸತ್ವ ಎರಡನ್ನೂ) ಅಂಗೀಕರಿಸಬಹುದು'' ಎಂದು ಹೇಳಿದಿರಿ. ಆದರೆ (ಸತ್ವ - ಅಸತ್ವಗಳು ವಿರುದ್ಧವಾದ್ದರಿಂದ) ಒಂದೇ ವಸ್ತುವಿಗೆ ಸದಸದಾತ್ಮಕತ್ವವನ್ನು ಹೇಳುವುದು ವಿರುದ್ಧವಾಗುತ್ತದೆಯಲ್ಲವೇ ?

ಈ ರೀತಿಯಾಗಿ ಶಂಕೆ ಬಂದರೆ, ಹಾಗಾದರೆ ಅರ್ಥಾಪತ್ತಿಯು ಪ್ರವೃತ್ತವಾದ ನಂತರ (ಸತ್ವ-ಅಸತ್ವಗಳು) ಸದಸತ್ವ ವಿರುದ್ಧ ಎಂದು ಹೇಳುತ್ತೀರೋ ? ಅಥವಾ ಸದಸತ್ವ ವಿರುದ್ಧವಾದ್ದರಿಂದ ಇಂತಹ ವಿರುದ್ಧ ಪ್ರಮೇಯವನ್ನು ನಿರ್ಣಯ ಮಾಡುವುದಕ್ಕಾಗಿ ಅರ್ಥಾಪತ್ತಿಯೇ ಪ್ರವೃತ್ತವಾಗದು ಎಂದು ಹೇಳುತ್ತೀರೋ ?

ಅರ್ಥಾಪತ್ತಿಯು ಪ್ರವೃತ್ತವಾದ ನಂತರ ಸದಸತ್ವ ವಿರುದ್ಧ ಎಂದು ಹೇಳುವುದು ಸರಿಯಲ್ಲ. ಏಕೆಂದರೆ - ಹಾಗೆ ಹೇಳಿದರೆ ವಿರೋಧ ಏನು ? ಅರ್ಥಾಪತ್ತಿರೂಪ ಪ್ರಮಾಣವೇ ಸದಸತ್ವವನ್ನು ತಿಳಿಸುತ್ತದೆ ಎಂದಾದರೆ, ಸದಸತ್ವವು ಪ್ರಾಮಾಣಿಕ (ಪ್ರಮಾಣಸಿದ್ಧ) ಎಂದಾಗುವುದರಿಂದ ಅಂತಹ ಪ್ರಾಮಾಣಿಕವಾದ ವಸ್ತುವಿಷಯದಲ್ಲಿ ವಿರೋಧವು ಅಕಿಂಚಿತ್ಕರವಾಗಿದೆ ಎಂದು ಭಾವ.

ಸದಸತ್ವವು ವಿರುದ್ಧವಾದ್ದರಿಂದ ಅಂತಹ ವಿರುದ್ಧಪ್ರಮೇಯನಿರ್ಣಯಕ್ಕಾಗಿ ಅರ್ಥಾಪತ್ತಿಯೇ ಪ್ರವೃತ್ತವಾಗುವುದಿಲ್ಲ ಎನ್ನುವುದಾದರೆ, ಹಾಗಾದರೆ ಸತ್ವ - ಅಸತ್ವ

ಎಂಬ ಎರಡು ಧರ್ಮಗಳು ಮಾತ್ರವೇ ಎಲ್ಲರಿಂದ ಅನುಭೂಯಮಾನವಾದ್ದರಿಂದ ಸತ್ವ - ಅಸತ್ವಗಳು ವಿರುದ್ಧವಾದಂತೆ ಸದಸದ್ವೈಲಕ್ಷಣ್ಯವೂ ವಿರುದ್ಧವೇ ಆದ್ದರಿಂದ ಅಂತಹ ಸದಸದ್ವೈಲಕ್ಷಣ್ಯರೂಪ ವಿರುದ್ಧಪ್ರಮೇಯನಿರ್ಣಯಕ್ಕಾಗಿ ನಿಮ್ಮ ಅರ್ಥಾಪತ್ತಿಯೂ ಪ್ರವೃತ್ತವಾಗದೇ ಹೋಗಬೇಕಾಗುತ್ತದೆ ಎಂದು ಅರ್ಥ.

ನಿಷೇಧಸಮುಚ್ಚಯವು (ಸದಸದ್ವೈಲಕ್ಷಣ್ಯವು) ಅತಾತ್ವಿಕವಾದ್ದರಿಂದ ವಿರೋಧ ಇಲ್ಲ ಎನ್ನುವುದಾದರೆ, ಲಾಘವ ಇರುವ ಕಾರಣ ವಿಧಿಸಮುಚ್ಚಯವೂ ಅತಾತ್ವಿಕವೇ ಆಗಿದೆ ಎಂದೇ ಅಂಗೀಕರಿಸಿ. ವಿರುದ್ಧ-ಅತಾತ್ವಿಕ-ಸದಸದ್ವೈಲಕ್ಷಣ್ಯವನ್ನು ಅಂಗೀಕಾರ ಮಾಡುವುದಕ್ಕಿಂತಲೂ ಅವಿರುದ್ಧ-ಅತಾತ್ವಿಕ-ಸದಸತ್ವವನ್ನು ಅಂಗೀಕಾರ ಮಾಡುವುದೇ ಲಘುಭೂತವಾಗುತ್ತದೆ. ಆದ್ದರಿಂದ ಸದಸತ್ವ ವಿರುದ್ಧ ಎನ್ನುವುದಾದರೆ ಸದಸದ್ವೈಲಕ್ಷಣ್ಯವೂ ವಿರುದ್ಧವೇ ಆಗುವುದರಿಂದ ಅದರ ವಿಷಯದಲ್ಲಿ ಅರ್ಥಾಪತ್ತಿ ಪ್ರಮಾಣವಾಗಲಾರದು ಎಂದು ಅಭಿಪ್ರಾಯ.

**ಟೀಕಾ :- ಕಿಂಚ ಅಪರೋಕ್ಷಪ್ರತೀತಿವಿಷಯತ್ವಮುಕ್ತವಿಧಯಾ ನ ಶುಕ್ತಿರಜತಸ್ಯಾಸ್ತೀತಿ ಕಸ್ಯಾನುಪಪತ್ತಿಃ ? ಉಲ್ಲೇಖಮಾತ್ರಂ ತ್ವಸತೋಽಪಿ ಚೇತ್ ಕಾ ಅನುಪಪತ್ತಿಃ ? ವಿಸ್ತುತಮೇತದನ್ಯತ್ರೇತ್ಯಲಂ ಪಲ್ಲವಿತೇನ ।**

**ಅನುವಾದ :-** ''ಅಸತ್ ಚೇತ್ ಅಪರೋಕ್ಷತಯಾ ನ ಪ್ರತೀಯೇತ, ಪ್ರತೀಯತೇ ಚೇದಂ, ತಸ್ಮಾತ್ ಅಸತ್ ನ ''

''ಶುಕ್ತಿರಜತವು ಅಸತ್ ಆಗಿದ್ದರೆ ಆಗ ಅಪರೋಕ್ಷವಾಗಿ ಪ್ರತೀತವಾಗ-ಬಾರದಿತ್ತು. ಈಗಲಾದರೂ ಪ್ರತೀತವಾಗುತ್ತಿದೆ. ಅಂದಮೇಲೆ ಅಸತ್ ಅಲ್ಲ ''

ಎಂಬುದಾಗಿ ಅರ್ಥಾಪತ್ತಿಯನ್ನು ಹೇಳಲು ಬರುವುದೂ ಇಲ್ಲ. ಏಕೆಂದರೆ ಒಂದುವೇಳೆ ಶುಕ್ತಿರಜತವು ಅಪರೋಕ್ಷವಾಗಿ ಪ್ರತೀತವಾಗುತ್ತಿದ್ದರೆ ಆಗ ತದನ್ಯಥಾನುಪಪತ್ತಿಯಿಂದ ಅಸದ್ವೈಲಕ್ಷಣ್ಯವನ್ನು ಹೇಳಬಹುದಾಗಿತ್ತು. ಆದರೆ ಶುಕ್ತಿರಜತವು ಅಪರೋಕ್ಷವಾಗಿ ಪ್ರತೀತವಾಗಲು ಸಾಧ್ಯವಿಲ್ಲ. ಕಾರಣ

''ಅಪರೋಕ್ಷತಯಾ ಪ್ರತೀಯಮಾನತ್ವಂ ನಾಮ ಇಂದ್ರಿಯಸನ್ನಿಕರ್ಷಜನ್ಯ-ಜ್ಞಾನವಿಷಯತ್ವಂ'' ಅಪರೋಕ್ಷವಾಗಿ ಪ್ರತೀತವಾಗುವುದು ಎಂದರೆ ಇಂದ್ರಿಯಸನ್ನಿಕರ್ಷಜನ್ಯಜ್ಞಾನದಲ್ಲಿ ವಿಷಯವಾಗುವುದು ಎಂದರ್ಥ.

''ಯತ್ಸನ್ನಿಕೃಷ್ಟಕರಣೇನ ಯತ್ ಜ್ಞಾನಂ ಜಾಯತೇ ಸ ತಸ್ಯ ವಿಷಯಃ'' ಎಂದು ಹೇಳಿದಂತೆ ರಜತಸನ್ನಿಕೃಷ್ಟವಾದ ಇಂದ್ರಿಯದಿಂದ ರಜತಜ್ಞಾನ ಬಂದಿದ್ದರೆ ರಜತಜ್ಞಾನಕ್ಕೆ ಶುಕ್ತಿರಜತವು ವಿಷಯವಾಗುತ್ತಿತ್ತು. ಆದರೆ ಅತ್ಯಂತ ಅಸತ್ ಆದ ರಜತದ ಜೊತೆ ಇಂದ್ರಿಯಸನ್ನಿಕರ್ಷವಾಗಲು ಸಾಧ್ಯವಿಲ್ಲವಾದ್ದರಿಂದ ಶುಕ್ತಿರಜತದಲ್ಲಿ ಸನ್ನಿಕೃಷ್ಟೇಂದ್ರಿಯಜನ್ಯಜ್ಞಾನವಿಷಯತ್ವ ಇಲ್ಲದ ಕಾರಣ ಅಪರೋಕ್ಷತಯಾ ಪ್ರತೀಯಮಾನತ್ವ ಇಲ್ಲ. ಅಂದಮೇಲೆ ಶುಕ್ತಿರಜತದಲ್ಲಿ ಅಪರೋಕ್ಷತಯಾ ಪ್ರತೀಯಮಾನತ್ವವೇ ಇಲ್ಲ ಎಂದಮೇಲೆ ಏನು ಅನುಪಪತ್ತಿ ಇದೆ ? ಯಾವ ಅನುಪಪತ್ತಿಯಿಂದ ಅಸದ್ವೈಲಕ್ಷಣ್ಯ ಹೇಳುತ್ತೀರಿ ?

ಹಾಗಾದರೆ -

**''ಅಸತ್ ಚೇತ್ ಅಪರೋಕ್ಷತಯಾ ನ ಪ್ರತೀಯೇತ, ಪ್ರತೀಯತೇ ಚೇದಂ, ತಸ್ಮಾತ್ ಅಸತ್ ನ ''**

ಎಂಬುದಾಗಿ ವಿಪರ್ಯಯ ಪರ್ಯವಸಾನ ಮಾಡುವಾಗ ''ಪ್ರತೀಯತೇ ಚೇದಂ'' ಎಂಬ ಅಂಶ ಬಾರದ ಕಾರಣ ಸ್ವರೂಪಾಸಿದ್ಧಿ ಬರುತ್ತದೆ ಎಂದು ಭಾವ.

ಹೌದು, ಅಪರೋಕ್ಷತಯಾ ಪ್ರತೀಯಮಾನತ್ವ ಎಂದರೆ ಇಂದ್ರಿಯಜನ್ಯ-ಜ್ಞಾನವಿಷಯತ್ವ ಎಂದಲ್ಲ. ಹಾಗೆ ಹೇಳಿದರೆ ಹಿಂದಿನ ದೋಷ ಬರುತ್ತಿತ್ತು. ಕಿಂತು ಉಲ್ಲೇಖ್ಯತ್ವ ಮಾತ್ರವೇ ಆಗಿದೆ. ಆದ್ದರಿಂದ ದೋಷವಿಲ್ಲ !

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ - ಅಪರೋಕ್ಷತಯಾ ಪ್ರತೀಯಮಾನತ್ವ ಎಂದರೆ ಉಲ್ಲೇಖ್ಯತ್ವ ಎಂದು ಹೇಳುವುದಾದರೆ, 'ಉಲ್ಲೇಖ್ಯತ್ವ ಇರುವುದರಿಂದ ಅಸತ್ ಅಲ್ಲ' ಎಂಬುದಾಗಿ ಉಲ್ಲೇಖ್ಯತ್ವಾನ್ಯಥಾನುಪಪತ್ತಿಯಿಂದ ಅಸದ್ವೈಲಕ್ಷಣ್ಯವನ್ನು ಸಾಧಿಸಿದಂತಾಗುತ್ತದೆ. ಆದರೆ ಅದು ಸರಿಯಲ್ಲ. ಕಾರಣ - ಜ್ಞಾನವ್ಯಾವರ್ತಕತ್ವ ರೂಪವಾದ ಉಲ್ಲೇಖ್ಯತ್ವವು ಅಸತ್‌ಗೂ ಸಂಭವಿಸುವುದರಿಂದ ಅನುಪಪತ್ತಿಯೇ ಇಲ್ಲ ! ಯಾವ ಅನುಪಪತ್ತಿಯಿಂದ ಅಸತ್‌ವೈಲಕ್ಷಣ್ಯವನ್ನು ಸಾಧಿಸುತ್ತೀರಿ?

ಉಲ್ಲೇಖ್ಯತ್ವ ಎಂದರೆ ಜ್ಞಾನವ್ಯಾವರ್ತಕತ್ವ ಎಂದು ಹೇಳುವುದಿಲ್ಲ. ಕಿಂತು ವ್ಯಾವೃತ್ತಿಧೀಜನಕತ್ವ ಎಂದು ಹೇಳುತ್ತೇವೆ. ಆ ವಿಧವಾದ ಉಲ್ಲೇಖ್ಯತ್ವವು ಅಸತ್ ಆಗಿ

ಸಕಲಸಾಮರ್ಥ್ಯರಹಿತವಾದ ಶುಕ್ತಿರಜತಕ್ಕೆ ಹೇಗೆ ಕೂಡುತ್ತದೆ ? ಇತ್ಯಾದಿ ಪ್ರಶ್ನೆಗಳಿಗೆ ಉತ್ತರವನ್ನು 'ತರ್ಕೋದ್ಯೋತ' ಮುಂತಾದ ಗ್ರಂಥಗಳಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿದೆ.

**ಮೂಲ :- ಉಕ್ತಪ್ರಕಾರೇಣ ದೃಶ್ಯತ್ವಾಭಾವಾತ್ ಸಾಧನವಿಕಲಶ್ಚ ।**

**ಟೀಕಾ :- 'ರಜತಂ ದೃಷ್ಟಮಿತಿ ಭ್ರಮಮಾತ್ರತ್ವಾತ್' ಇತಿ ಉಕ್ತಪ್ರಕಾರೇಣ । 'ಶುಕ್ತಿರಜತಸ್ಯ' ಇತ್ಯನುವರ್ತತೇ । 'ಚ'ಕಾರೋ ದೃಷ್ಟಾಂತ ಇತ್ಯಸ್ಯಾನುಕರ್ಷಣಾರ್ಥಃ।**

**ಅನುವಾದ :-** ಉಕ್ತಪ್ರಕಾರೇಣ ಎಂದರೆ 'ರಜತಂ ದೃಷ್ಟಮಿತಿ ಭ್ರಮಮಾತ್ರತ್ವಾತ್' ಎಂದು ಹಿಂದೆ ಹೇಳಿದ ಪ್ರಕಾರವಾಗಿ ಎಂದರ್ಥ. 'ಶುಕ್ತಿರಜತಸ್ಯಾಪಿ........' ಎಂಬ ಹಿಂದಿನ ವಾಕ್ಯದಲ್ಲಿರುವ 'ಶುಕ್ತಿರಜತಸ್ಯ' ಎನ್ನುವುದು ಅನುವರ್ತನವಾಗುತ್ತದೆ. (ಶುಕ್ತಿರಜತಸ್ಯ ದೃಶ್ಯತ್ವಾಭಾವಾತ್ ಎಂದು ಅನ್ವಯ ಮಾಡಿಕೊಳ್ಳಬೇಕು.) 'ಸಾಧ್ಯವಿಕಲೋ ದೃಷ್ಟಾಂತಃ' ಎಂಬ ಹಿಂದಿನ ವಾಕ್ಯದಲ್ಲಿರುವ 'ದೃಷ್ಟಾಂತ' ಎನ್ನುವುದನ್ನು ಅನುಕರ್ಷಣ ಮಾಡುತ್ತದೆ ಚಶಬ್ದ.

'ರಜತಂ ದೃಷ್ಟಮಿತಿ ಭ್ರಮಮಾತ್ರತ್ವಾತ್' ಎಂಬ ಹಿಂದಿನ ವಾಕ್ಯದಲ್ಲಿ ಹೇಳಿದಂತೆ, ದೃಶ್ಯತ್ವ ಎಂದರೆ ದೃಗ್ವಿಷಯತ್ವ. ದೃಗ್ವಿಷಯತ್ವ ಎನ್ನುವುದಕ್ಕೆ 'ಯತ್ಸನ್ನಿಕೃಷ್ಟಕರಣೇನ ಯತ್ ಜ್ಞಾನಂ ಜಾಯತೇ ಸ ತಸ್ಯ ವಿಷಯಃ' ಎಂಬ ನಿಯಮಾನುಸಾರ ಸನ್ನಿಕೃಷ್ಟೇಂದ್ರಿಯಜನ್ಯಜ್ಞಾನವಿಷಯತ್ವ ಎಂದು ವಿವಕ್ಷಿತವಾದ ಅರ್ಥ. ಈ ವಿಧವಾದ ದೃಶ್ಯತ್ವವು ಅಸತ್ ಆದ ಶುಕ್ತಿರಜತಕ್ಕೆ ಇಲ್ಲವಾದ್ದರಿಂದ ದೃಷ್ಟಾಂತವು ಸಾಧನವಿಕಲವೂ ಆಗುತ್ತದೆ. (ಸಾಧ್ಯವೈಕಲ್ಯದಂತೆ ಸಾಧನವೈಕಲ್ಯವೂ ಬರುತ್ತದೆ) ಎಂದು ಭಾವ.

**ಟೀಕಾ :- ಕೇಚಿತ್ ಉಪಾಧಿದೋಷಮಸಿದ್ಧಾವಂತರ್ಭಾವಯಂತಿ । ಅನ್ಯೇ ಅನೈಕಾಂತಿಕೇ । ಪರೇ ಕಾಲಾತ್ಯಯಾಪದಿಷ್ಟತಾಯಾಮ್ । ಏಕೇ ಸತ್ಪ್ರತಿಪಕ್ಷತಾಯಾಮ್ । ಕೇಚಿತ್ತು ದೃಷ್ಟಾಂತದೋಷ ಇತಿ । ತತ್ರ ಗುಣದೋಷಚಿಂತಾಯಾಂ ನಾಯಮವಸರ ಇತಿ ಸರ್ವಾವಸಿತೌ ಉಪಾಧಿ ದೋಷಮಾಹ -**

**ಮೂಲ :- ಪ್ರಮಾಣವಿರುದ್ಧತ್ವಮುಪಾಧಿಃ ।**

**ಅನುವಾದ :-** ಆಚಾರ್ಯರು ಮಿಥ್ಯಾತ್ವಾನುಮಾನಕ್ಕೆ ಉಪಾಧಿದೋಷವನ್ನು ಹೇಳುವವರಿದ್ದಾರೆ. ಆದರೆ ಅದು ಸರಿಯಲ್ಲ. ಕಾರಣ - ಉಪಾಧಿಯು ದೋಷವೇ ಆಗಿಲ್ಲ ಎಂಬುದಾಗಿ ಶಂಕೆ ಬಂದರೆ, ಆ ವಿಧವಾದ ಶಂಕೆಯೇ ಸರಿಯಾದದ್ದಲ್ಲ. ಏಕೆಂದರೆ - ಒಂದುವೇಳೆ ಉಪಾಧಿಯು ದೋಷವೇ ಅಲ್ಲ ಎಂದಾಗಿದ್ದರೆ, ಎಲ್ಲ ವಾದಿಗಳು ಆ ಉಪಾಧಿಯನ್ನು ಹೇತ್ವಾಭಾಸಾದಿಗಳಲ್ಲಿ ಏನು ಅಂತರ್ಭಾವ ಮಾಡುತ್ತಾರೆ ಅದು ಮಾಡಬಾರದಾಗುತ್ತದೆ. ದೋಷವಲ್ಲದ್ದನ್ನು ದೋಷಗಳಲ್ಲಿ ಅಂತರ್ಭಾವ ಮಾಡುವುದು ಅಸಮಂಜವಾಗುತ್ತದೆ. ಈಗಲಾದರೋ ಎಲ್ಲ ವಾದಿಗಳೂ ಉಪಾಧಿಯನ್ನು ದೋಷಗಳಲ್ಲಿ ಅಂತರ್ಭಾವ ಮಾಡುತ್ತಾರೆ ಎಂದಮೇಲೆ ಉಪಾಧಿಗೆ ದೋಷತ್ವವು ಸಮ್ಮತವಾಗಿದೆ ಎಂದು ತಿಳಿದುಬರುತ್ತದೆ.

ಹಾಗಾದರೆ ಉಪಾಧಿಯನ್ನು ಯಾವ ಯಾವ ವಾದಿಗಳು ಯಾವ ಯಾವ ದೋಷದಲ್ಲಿ ಅಂತರ್ಭಾವ ಮಾಡುತ್ತಾರೆ ? ಅದನ್ನು ವಿವರಿಸುತ್ತಾರೆ -

**ಅಸಿದ್ಧಿಯಲ್ಲಿ ಅಂತರ್ಭಾವ ಮಾಡುತ್ತಾರೆ ಕೆಲವರು**

'ನಿರುಪಾಧಿಕಃ ಸಾಧ್ಯಸಂಬಂಧಃ ವ್ಯಾಪ್ತಿಃ' ಎಂದು ಹೇಳಿದಂತೆ ನಿರುಪಾಧಿಕಸಾಧ್ಯಸಂಬಂಧವೇ ವ್ಯಾಪ್ತಿ. ಪ್ರಕೃತ ಅನುಮಾನಕ್ಕೆ ಉಪಾಧಿದೋಷ ಬಂದರೆ ನಿರುಪಾಧಿಕಸಾಧ್ಯಸಂಬಂಧರೂಪವಾದ ವ್ಯಾಪ್ತಿ ಇಲ್ಲ ಎಂದಾಗುತ್ತದೆ. ಹೀಗೆ ವ್ಯಾಪ್ತ್ಯಭಾವಾಪಾದಕವಾದ್ದರಿಂದ (ವ್ಯಾಪ್ತ್ಯಭಾವವನ್ನು ತಂದುಕೊಡುವುದರಿಂದ) ಉಪಾಧಿಯು ವ್ಯಾಪ್ಯತ್ವಾಸಿದ್ಧಿಯಲ್ಲಿ ಅಂತರ್ಭಾವವಾಗುತ್ತದೆ. ಅದನ್ನೇ

**''ವ್ಯಾಪ್ಯತ್ವಾಸಿದ್ಧೋ ದ್ವಿವಿಧಃ । ಏಕೋ ವ್ಯಾಪ್ತಿಗ್ರಾಹಕ-**
**ಪ್ರಮಾಣಾಭಾವಾತ್ ಅಪರಸ್ತು ಉಪಾಧಿಸದ್ಭಾವಾತ್''**

ಎಂಬುದಾಗಿ ಹೇಳಿದ್ದಾರೆ ಎಂದು ಕೆಲವರ ಅಭಿಪ್ರಾಯವಾಗಿದೆ.

**ವ್ಯಭಿಚಾರದಲ್ಲಿ ಅಂತರ್ಭಾವ ಹೇಳುತ್ತಾರೆ ಬೇರೆಯವರು**

ಉಪಾಧಿಯು ಸಾಧನಾವ್ಯಾಪಕವಾಗಿ ಸಾಧ್ಯವ್ಯಾಪಕವೂ ಆಗಿರುತ್ತದೆ. ಸಾಧನಾವ್ಯಾಪಕ ಎಂದರೆ ಸಾಧನ ಇರುವ ಪಕ್ಷದಲ್ಲಿ ಉಪಾಧಿ ಇರುವುದಿಲ್ಲ ಎಂದರ್ಥ. ಸಾಧ್ಯವ್ಯಾಪಕ ಎಂದರೆ ಸಾಧ್ಯ ಇದ್ದಲ್ಲೆಲ್ಲಾ ಉಪಾಧಿ ಇರುತ್ತದೆ ಎಂದು ಅರ್ಥ.

ವ್ಯಾಪಕವಾದ ಉಪಾಧಿಯು ಪಕ್ಷದಲ್ಲಿ ಇಲ್ಲ ಎಂದರೆ, ವ್ಯಾಪಕವಾದ ತಾನು ಪಕ್ಷದಿಂದ ಹೊರಬಂದು ತನಗೆ ವ್ಯಾಪ್ಯವಾದ ಸಾಧ್ಯವನ್ನೂ ಪಕ್ಷದಿಂದ ಹೊರತರುತ್ತದೆ. ಪಕ್ಷದಲ್ಲಿ ಸಾಧ್ಯ ಇಲ್ಲ ಎಂದಾದರೆ ಪಕ್ಷವೇ ವಿಪಕ್ಷವಾಯಿತು. ಅಂತಹ ವಿಪಕ್ಷದಲ್ಲಿ ಸಾಧನ (ಹೇತು) ಇರುವುದರಿಂದ ವ್ಯಭಿಚಾರ ಬರುತ್ತದೆ. ಹೀಗೆ ಉಪಾಧಿಯನ್ನು ವ್ಯಭಿಚಾರದಲ್ಲಿ ಅಂತರ್ಭಾವ ಮಾಡುತ್ತಾರೆ ಬೇರೆಯವರು.

### ಬಾಧದಲ್ಲಿ ಅಂತರ್ಭಾವ ಹೇಳುತ್ತಾರೆ ಹಲವರು

ವ್ಯಾಪಕವಾದ ಉಪಾಧಿಯು ತಾನು ಪಕ್ಷದಿಂದ ಹೊರಬಂದದ್ದಾಗಿ ತನಗೆ ವ್ಯಾಪ್ಯವಾದ ಸಾಧ್ಯವನ್ನೂ ಪಕ್ಷದಿಂದ ಹೊರತರುತ್ತದೆ. ಹೀಗೆ ಪಕ್ಷದಲ್ಲಿ ವ್ಯಾಪಕಾಭಾವದಿಂದ ವ್ಯಾಪ್ಯಾಭಾವ (ಸಾಧ್ಯಾಭಾವ) ನಿರ್ಣೀತವಾಗುವುದರಿಂದ ಬಾಧ ಬರುತ್ತದೆ. ಅರ್ಥಾತ್ ಉಪಾಧಿಯು ಬಾಧದಲ್ಲಿ ಅಂತರ್ಭಾವವಾಗುತ್ತದೆ ಎಂದು ಹಲವರ ಅಭಿಪ್ರಾಯ.

### ಸತ್ಪ್ರತಿಪಕ್ಷತ್ವದಲ್ಲಿ ಅಂತರ್ಭಾವ ಹೇಳುತ್ತಾರೆ ಇತರರು

ವ್ಯಾಪಕವಾದ ಉಪಾಧಿಯು ತಾನು ಪಕ್ಷದಿಂದ ಹೊರಬಂದ್ದಾಗಿ ತನಗೆ ವ್ಯಾಪ್ಯವಾದ ಸಾಧ್ಯವನ್ನೂ ಪಕ್ಷದಿಂದ ಹೊರತರುತ್ತದೆ. ಅನಂತರ ''ಪಕ್ಷಃ ಸಾಧ್ಯಾಭಾವವಾನ್ ಸಾಧ್ಯವ್ಯಾಪಕೋಪಾಧ್ಯಭಾವಾತ್ '' ಎಂಬುದಾಗಿ ಅದೇ ಪಕ್ಷದಲ್ಲಿ ಉಪಾಧ್ಯಭಾವದಿಂದ ಸಾಧ್ಯಾಭಾವವನ್ನು ಸಾಧಿಸಲಾಗುತ್ತದೆ. ಅಂದರೆ ಮೊದಲಿನ ಅನುಮಾನಕ್ಕೆ ಪ್ರತಿಪಕ್ಷಾನುಮಾನ ಹೇಳಿದಂತಾಗುತ್ತದೆ. ಈ ರೀತಿಯಾಗಿ ಉಪಾಧಿಯು ಸತ್ಪ್ರತಿಪಕ್ಷತ್ವದಲ್ಲಿ ಅಂತರ್ಭಾವವಾಗುತ್ತದೆ ಎನ್ನುತ್ತಾರೆ ಇತರರು.

### ದೃಷ್ಟಾಂತದೋಷದಲ್ಲಿ ಅಂತರ್ಭಾವ ಹೇಳುತ್ತಾರೆ ಭಿನ್ನರು

''ವ್ಯಾಪ್ತಿಸಂವೇದನಸ್ಥಾನಂ ದೃಷ್ಟಾಂತ ಇತಿ ಗೀಯತೇ ।'' ಎಂಬುದಾಗಿ ಹೇಳಿದಂತೆ ವ್ಯಾಪ್ತಿಸಂವೇದನಸ್ಥಾನವು ದೃಷ್ಟಾಂತ ಎನಿಸುತ್ತದೆ. ಅನುಮಾನಕ್ಕೆ ಉಪಾಧಿ ಬಂದರೆ ಹೇತು-ಸಾಧ್ಯಗಳಲ್ಲಿ ನಿರುಪಾಧಿಕಸಾಧ್ಯಸಂಬಂಧರೂಪವಾದ ವ್ಯಾಪ್ತಿ ಇರುವುದಿಲ್ಲವಾದ್ದರಿಂದ, ವ್ಯಾಪ್ತಿಸಂವೇದನಸ್ಥಾನತ್ವ ಎಂಬ ದೃಷ್ಟಾಂತಲಕ್ಷಣ ಬಾರದ ಕಾರಣ ದೃಷ್ಟಾಂತ ಕೂಡುವುದಿಲ್ಲ. ಆಶ್ರಯವೈಕಲ್ಯ ಬರುತ್ತದೆ. ಹೀಗೆ ಉಪಾಧಿಯು ಆಶ್ರಯವೈಕಲ್ಯವನ್ನು ತಂದುಕೊಡುವುದರಿಂದ ಆಶ್ರಯವೈಕಲ್ಯರೂಪ-ದೃಷ್ಟಾಂತದೋಷದಲ್ಲಿ ಅಂತರ್ಭಾವವಾಗುತ್ತದೆ ಎನ್ನುತ್ತಾರೆ ಭಿನ್ನರು.

ಈ ರೀತಿಯಾಗಿ ಅನೇಕರು ಅನೇಕವಿಧವಾಗಿ ಉಪಾಧಿಯ ಅಂರ್ತಭಾವವನ್ನು ಹೇಳುವಾಗ, ಈ ವಿಧವಾದ ಅನೇಕ ಪಕ್ಷಗಳಲ್ಲಿ ಯಾವ ಪಕ್ಷ ಸಮಂಜಸವಾಗುತ್ತದೆ ? ಯಾವ ಪಕ್ಷ ಅಸಮಂಜಸವಾಗುತ್ತದೆ ? ಎಂಬುದಾಗಿ ಆ ಆ ಪಕ್ಷಗಳ ಗುಣ-ದೋಷಗಳ ಚಿಂತನೆ ಮಾಡಲು ಇಲ್ಲಿ ಅವಸರವಿಲ್ಲ. ಬಾಲಕರ ವ್ಯುತ್ಪಾದನೆಗಾಗಿ ಹೊರಟದ್ದು ಈ ಪ್ರಕರಣ. ಪ್ರಕರಣವು ಶಾಸ್ತ್ರೈಕದೇಶ- ಸಂಬದ್ಧವಾಗಿರುತ್ತದೆ. ಹಾಗಾಗಿ ಯಾವ ಪಕ್ಷ ಸಮಂಜಸ ? ಯಾವ ಪಕ್ಷ ಅಸಮಂಜಸ ? ಎಂಬ ವಿಚಾರವನ್ನು ಶಾಸ್ತ್ರದಲ್ಲಿಯೇ ಮಾಡುವುದು ಉಚಿತ. ಇಲ್ಲಿ ಅದರ ಅವಸರ ಇಲ್ಲವಾದ್ದರಿಂದ ಅದರ ಬಗ್ಗೆ ಇಲ್ಲಿ ವಿಚಾರ ಮಾಡುವುದು ಅನುಚಿತ. ಆದ್ದರಿಂದ ಅದರ ಬಗ್ಗೆ ಹೆಚ್ಚಿನ ಚರ್ಚೆಯನ್ನು ಇಲ್ಲಿ ಮಾಡುವುದಿಲ್ಲ ಎಂದು ಭಾವ.

ಹಾಗಾದರೆ ಎಲ್ಲ ವಾದಿಗಳೂ ಅನೇಕವಿಧವಾಗಿ ಉಪಾಧಿಯ ಅಂರ್ತಭಾವವನ್ನು ಹೇಳುತ್ತಾರೆ ಎಂದರೆ, ದೋಷವಲ್ಲದ್ದನ್ನು ದೋಷಗಳಲ್ಲಿ ಅಂತರ್ಭಾವ ಮಾಡಲು ಬರುವುದಿಲ್ಲವಾದ್ದರಿಂದ, ಅಂತರ್ಭಾವಕಥನಾ- ನ್ಯಥಾನುಪಪತ್ತಿಯಿಂದ ಉಪಾಧಿಗೆ ದೋಷತ್ವವು ಸರ್ವಸಮ್ಮತವಾಗಿದೆ ಎಂದು ಸಿದ್ಧವಾಗುತ್ತದೆ.

ಈ ರೀತಿಯಾಗಿ ಉಪಾಧಿಗೆ ದೋಷತ್ವವು ಸರ್ವವಾದಿಸಮ್ಮತವಾಗುತ್ತಿರಲು, ಅಥವಾ ಅಸಿದ್ಧಿ ಮೊದಲಾದ ಉಳಿದೆಲ್ಲ ಅನುಮಾನದೋಷಗಳನ್ನು ಹೇಳಿ ಮುಗಿಸುತ್ತಿರಲು ಕೊನೆಯಲ್ಲಿ ಪರರ ಮಿಥ್ಯಾತ್ವಾನುಮಾನಕ್ಕೆ ಉಪಾಧಿದೋಷವನ್ನು ಹೇಳುತ್ತಾರೆ ಆಚಾರ್ಯರು -

**ಮೂಲ :-** ಪ್ರಮಾಣವಿರುದ್ಧತ್ವಂ ಉಪಾಧಿಃ ।

**ಮೂಲಾರ್ಥ :-** ಮಿಥ್ಯಾತ್ವಾನುಮಾನಕ್ಕೆ ಪ್ರಮಾಣವಿರುದ್ಧತ್ವ ಎಂಬ ಉಪಾಧಿ ದೋಷವೂ ಬರುತ್ತದೆ.

**ಟೀಕಾ :- ನನ್ವತ್ರ ಬಾಧ್ಯತ್ವಂ ಸಾಧ್ಯಮ್ । ತದೇವ ಚ ಪ್ರಮಾಣ- ವಿರುದ್ಧತ್ವಮ್ । ನ ಹಿ ಸ್ವಸ್ಮಿನ್ ಸ್ವಯಮುಪಾಧಿಃ । ವ್ಯಾಪ್ಯವ್ಯಾಪಕಭಾವಸ್ಯ ಭಿನ್ನಾಶ್ರಯತ್ವಾದಿತಿ । ಮೈವಮ್ । ಅನ್ಯಥಾಪ್ರತಿಪತ್ತಿಪೂರ್ವಕಂ ತದುನ್ಮೂಲನೇನ ಸಮ್ಯಗ್‌ಬೋಧೋ ಬಾಧಃ । ಪ್ರಮಾಣವಿರೋಧಸ್ತು ವಿಪರೀತಪ್ರಮಾಣವಿಷಯತ್ವಮಾತ್ರಮಿತಿ ಭೇದಾತ್।**

**ಅನುವಾದ :-** 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬ ನಮ್ಮ ಅನುಮಾನಕ್ಕೆ ಪ್ರಮಾಣವಿರುದ್ಧತ್ವ ಎಂಬ ಉಪಾಧಿಯನ್ನು ಹೇಳುತ್ತಿದ್ದೀರಿ. ಇಲ್ಲಿ ಮಿಥ್ಯಾತ್ವ ಸಾಧ್ಯ . ಮಿಥ್ಯಾತ್ವ ಎಂದರೆ ಬಾಧ್ಯತ್ವ. ಪ್ರಮಾಣವಿರುದ್ಧತ್ವ ಎಂದರೂ ಅದೇ (ಬಾಧ್ಯತ್ವವೇ). ಅಂದಮೇಲೆ ತನಗೆ ತಾನೇ ಉಪಾಧಿ ಆಗುವುದು ಹೇಗೆ ? ಉಪಾಧಿ ಆಗಬೇಕಾದರೆ ಸಾಧ್ಯಕ್ಕೆ ವ್ಯಾಪಕವಾಗಬೇಕು. ವ್ಯಾಪ್ಯ-ವ್ಯಾಪಕಭಾವ ಇರಬೇಕಾದರೆ ಭೇದ ಇರಲೇಬೇಕು. ವ್ಯಾಪ್ಯವಾದ ಸಾಧ್ಯವೇ ಬೇರೆ, ವ್ಯಾಪಕವಾದ ಉಪಾಧಿಯೇ ಬೇರೆ. ಹೀಗೆ ಭಿನ್ನ ವ್ಯಕ್ತಿಗಳಲ್ಲಿ ವ್ಯಾಪ್ಯ-ವ್ಯಾಪಕಭಾವ ಕೂಡುತ್ತದೆ.

ಪ್ರಕೃತ ಬಾಧ್ಯತ್ವವೇ ಸಾಧ್ಯ , ಬಾಧ್ಯತ್ವವೇ (ಪ್ರಮಾಣವಿರುದ್ಧತ್ವ) ಉಪಾಧಿ ಎಂದು ಹೇಳಿದಂತಾಗುವುದರಿಂದ (ಸಾಧ್ಯದಿಂದ ಭಿನ್ನವಾಗುವುದಿಲ್ಲವಾದ್ದರಿಂದ) ಪ್ರಮಾಣವಿರುದ್ಧತ್ವವು ಉಪಾಧಿ ಆಗುವುದಿಲ್ಲ ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಕಾರಣ - ಬಾಧ್ಯತ್ವವೇ ಬೇರೆ. ಪ್ರಮಾಣವಿರುದ್ಧತ್ವವೇ ಬೇರೆ. ಅದು ಹೇಗೆಂದರೆ -

**''ಅನ್ಯಥಾಪ್ರತಿಪತ್ತಿಪೂರ್ವಕಂ ತದುನ್ಮೂಲನೇನ ಸಮ್ಯಕ್ ಬೋಧೋ ಬಾಧಃ''**

ಮೊದಲು ಅನ್ಯಥಾಪ್ರತಿಪತ್ತಿ (ಭ್ರಮಜ್ಞಾನ) ಬಂದು, ಅದನ್ನು ನಿವಾರಿಸುವ ಮೂಲಕ ಯಥಾರ್ಥಜ್ಞಾನ ಆದರೆ ಅದೇ ಬಾಧ. ಮೊದಲು 'ಇದಂ ರಜತಂ' ಎಂಬುದಾಗಿ ಅನ್ಯಥಾಪ್ರತಿಪತ್ತಿ ಬಂದು, ಅನಂತರ ಅದನ್ನು ನಿವಾರಿಸುವ ಮೂಲಕ ''ನೇದಂ ರಜತಂ ಕಿಂತು ಶುಕ್ತಿರೇವ'' ಎಂಬುದಾಗಿ ಯಥಾರ್ಥಜ್ಞಾನ ಏನು ಉಂಟಾಗುತ್ತದೆಯೋ ಅದೇ ಬಾಧ. ಅಂತಹ ಬಾಧಜ್ಞಾನದಲ್ಲಿ ವಿಷಯವಾಗುವ ರಜತವು ಬಾಧ್ಯ ಎನಿಸುತ್ತದೆ. ಇದು ಬಾಧ್ಯತ್ವದ ಸ್ವರೂಪ.

ಇನ್ನು ಪ್ರಮಾಣವಿರುದ್ಧತ್ವ ಎಂದರೆ -

**''ವಿಪರೀತಪ್ರಮಾಣವಿಷಯತ್ವಮಾತ್ರಂ ಪ್ರಮಾಣವಿರುದ್ಧತ್ವಂ ''**

ಮೊದಲು ಅನ್ಯಥಾಪ್ರತಿಪತ್ತಿ ಏನೂ ಇಲ್ಲದೇ, ಅಂತೆಯೇ ಅದರ ನಿವಾರಣೆಯೂ ಇಲ್ಲದೇ, ಕೇವಲ ವಿಪರೀತಪ್ರಮಾಣದಲ್ಲಿ ವಿಷಯವಾಗುವುದು. ಅದೇ ಪ್ರಮಾಣವಿರುದ್ಧತ್ವ. ಉದಾ - ಶುಕ್ತಿಯನ್ನು ನೋಡಿ ಮೊದಲೇ 'ನೇದಂ

ರಜತಂ' ಇದು ರಜತ ಅಲ್ಲ ಎಂಬುದಾಗಿ ರಜತಾಭಾವಜ್ಞಾನ ಉಂಟಾಗುತ್ತದೆ. (ಭ್ರಮ ಬರದೇ ಮೊದಲಿಗೇನೇ ಯಥಾರ್ಥಜ್ಞಾನ ಆಗುತ್ತದೆ.) ಇಲ್ಲಿ ರಜತದ ವಿಪರೀತ = ರಜತಾಭಾವ, ಅದನ್ನು ಗ್ರಹಿಸುವ ಕಾರಣ 'ನೇದಂ ರಜತಂ' ಎನ್ನುವುದು ವಿಪರೀತಪ್ರಮಾಣ. ಈ ವಿಪರೀತಪ್ರಮಾಣಕ್ಕೆ ಪ್ರತಿಯೋಗಿಯಾಗಿ ವಿಷಯವಾಗುವ ರಜತ ಪ್ರಮಾಣವಿರುದ್ಧ ಎನಿಸುತ್ತದೆ.

ಈ ರೀತಿಯಾಗಿ ಬಾಧ್ಯತ್ವ-ಪ್ರಮಾಣವಿರುದ್ಧತ್ವಗಳಲ್ಲಿ ಭೇದ (ವ್ಯತ್ಯಾಸ) ಇರುವುದರಿಂದ, ಬಾಧ್ಯತ್ವ ಸಾಧ್ಯವಾಗಿ ಪ್ರಮಾಣವಿರುದ್ಧತ್ವ ಉಪಾಧಿಯಾಗಲು ಯಾವ ಅನುಪಪತ್ತಿಯೂ ಇಲ್ಲದ ಕಾರಣ ನಿಮ್ಮ ಮಿಥ್ಯಾತ್ವಾನುಮಾನಕ್ಕೆ ಪ್ರಮಾಣವಿರುದ್ಧತ್ವ ಉಪಾಧಿ ಬಂದೇ ಬರುತ್ತದೆ. ಹೀಗೆ ಸೋಪಾಧಿಕವಾಗುವುದರಿಂದ ದೃಶ್ಯತ್ವವು ಮಿಥ್ಯಾತ್ವಸಾಧಕವಾಗುವುದಿಲ್ಲ ಎಂದು ಭಾವ.

**ಟೀಕಾ :- ತರ್ಹಿ ಅನುಪಸಂಜಾತಬಾಧಭ್ರಮೇ ಪ್ರಮಾಣವಿರುದ್ಧತ್ವಂ ನಾಸ್ತೀತ್ಯವ್ಯಾಪ್ತಿರಿತಿ ಚೇನ್ನ । ತತ್ರಾಪಿ ಬಾಧಾರ್ಹತ್ವಸ್ಯ ಸತ್ವಾತ್ ।**

**ಪ್ರಪಂಚಸ್ಯಾಪಿ ಪ್ರಮಾಣವಿರುದ್ಧತ್ವಾತ್ ಸಾಧನವ್ಯಾಪಕೋऽಮಿತಿ ಚೇನ್ನ। ಪ್ರತೀತಪ್ರಮಾಣಾನಾಮನ್ಯಥಾ ವ್ಯಾಖ್ಯಾತತ್ವಾತ್ । ದೃಶ್ಯತ್ವೇನ ಸಾಧನೇ ಮಿಥ್ಯಾತ್ವಸ್ಯೋಪಾಧಿತ್ವಾತ್ । ಅನ್ಯೋನ್ಯೋಪಾಧಿಭಾವೇನಾಪಿ ಅನುಮಾನಸ್ಯಾಭಾಸತ್ವಾತ್ ।**

**ಲೋಕೇ ಚ ಕಸ್ಯಚಿದರ್ಥಸ್ಯ ಸತ್ಯತ್ವಮಿಥ್ಯಾತ್ವಯೋರ್ವಿಪ್ರತಿಪತ್ತೌ ದರ್ಶನಂ ಸತ್ಯತಾಯಾಂ, ಪ್ರಮಾಣವಿರೋಧಂ ಮಿಥ್ಯಾತ್ವೇऽನುಸರಂತಿ । ತತೋ ಮಿಥ್ಯಾತ್ವೇ ತದೇವ ಪ್ರಯೋಜಕಮಿತಿ ಜ್ಞಾಯತೇ ।**

**ಅನುವಾದ :-** ಪ್ರಮಾಣವಿರುದ್ಧತ್ವವನ್ನು ಉಪಾಧಿಯನ್ನಾಗಿ ಕೊಡಲು ಸಾಧ್ಯವಿಲ್ಲ. ಏಕೆಂದರೆ -

**''ಸಾಧನಾವ್ಯಾಪಕಾಃ ಸಾಧ್ಯಸಮವ್ಯಾಪ್ತಾ ಹ್ಯುಪಾಧಯಃ ।''**

ಎಂಬುದಾಗಿ ಹೇಳಿದಂತೆ ಉಪಾಧಿಯು ಸಮವ್ಯಾಪ್ತವಾಗಬೇಕು. ಅಂದರೆ ''ಯತ್ರ ಸಾಧ್ಯಂ ತತ್ರ ಉಪಾಧಿಃ'' ಎಂದು ವ್ಯಾಪ್ತಿ ಇರುವಂತೆ ''ಯತ್ರ ಉಪಾಧಿಃ ತತ್ರ ಸಾಧ್ಯಂ'' ಎಂಬುದಾಗಿಯೂ ವ್ಯಾಪ್ತಿ ಇರಬೇಕು. ಪ್ರಕೃತ ''ಯತ್ರ ಮಿಥ್ಯಾತ್ವಂ

(ಬಾಧ್ಯತ್ವಂ) ತತ್ರ ಪ್ರಮಾಣವಿರುದ್ಧತ್ವಂ'' ಎಂದು ವ್ಯಾಪ್ತಿ ಉಪಪನ್ನವಾದರೂ ಸಹ ''ಯತ್ರ ಪ್ರಮಾಣವಿರುದ್ಧತ್ವಂ ತತ್ರ ಮಿಥ್ಯಾತ್ವಂ (ಬಾಧ್ಯತ್ವಂ)'' ಎಂಬ ವ್ಯಾಪ್ತಿಯು ಕೂಡುವುದಿಲ್ಲ.

ಏಕೆಂದರೆ - ಭ್ರಮಜ್ಞಾನ ಉಂಟಾದಾಗ ಕೆಲವೊಮ್ಮೆ ಬಾಧಜ್ಞಾನ ಬರುತ್ತದೆ. ಕೆಲವೊಮ್ಮೆ ಬರುವುದಿಲ್ಲ. ಹಾಗೆ ಭ್ರಮಜ್ಞಾನ ಉಂಟಾದಾಗಲೂ ಬಾಧಜ್ಞಾನ ಬರದಿದ್ದಾಗ ಅಂತಹ ಅನುಪಸಂಜಾತಬಾಧಭ್ರಮ ವಿಷಯದಲ್ಲಿ (ಬಾಧಜ್ಞಾನ ಬಾರದ ಭ್ರಮಜ್ಞಾನಕ್ಕೆ ವಿಷಯವಾದದ್ದರಲ್ಲಿ ) ಭ್ರಮವಿಷಯವಾದ್ದರಿಂದಲೇ ಯೋಗ್ಯತಯಾ ಪ್ರಮಾಣವಿರುದ್ಧತ್ವ (ವಿಪರೀತಪ್ರಮಾಣವಿಷಯತ್ವ) ಇದ್ದರೂ ಸಹ ಬಾಧಜ್ಞಾನ ಬಂದಿಲ್ಲವಾದ್ದರಿಂದ ಬಾಧಜ್ಞಾನವಿಷಯತ್ವ ರೂಪವಾದ ಬಾಧ್ಯತ್ವ ಇಲ್ಲ. ಹಾಗಾಗಿ

**ಯತ್ರ ಪ್ರಮಾಣವಿರುದ್ಧತ್ವಂ ತತ್ರ ಮಿಥ್ಯಾತ್ವಂ (ಬಾಧ್ಯತ್ವಂ)**

ಎಂಬುದಾಗಿ ಸಮವ್ಯಾಪ್ತಿ ಇಲ್ಲವಾದ್ದರಿಂದ, ಪ್ರಮಾಣವಿರುದ್ಧತ್ವವು ಉಪಾಧಿ ಆಗುವುದಿಲ್ಲ ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ-ಕಾರಣಾಂತರಗಳಿಂದ ಅಲ್ಲಿ ಬಾಧಜ್ಞಾನ ಬರದಿದ್ದರೂ ಸಹ ಬಾಧಜ್ಞಾನಕ್ಕೆ ವಿಷಯವಾಗಲು (ಬಾಧ್ಯವಾಗಲು) ಅರ್ಹವಾಗಿದೆಯಾದ್ದರಿಂದ (ಯೋಗ್ಯತೆ ಇರುವುದರಿಂದ) ಪ್ರಮಾಣವಿರುದ್ಧತ್ವ-ಬಾಧ್ಯತ್ವ ಎರಡೂ ಇರುವ ಕಾರಣ ಸಮವ್ಯಾಪ್ತಿಗೆ ಅನುಪಪತ್ತಿ ಇಲ್ಲ.

ಆದರೂ ಸಹ ಸಾಧ್ಯವ್ಯಾಪಕತ್ವಕ್ಕೆ ಅನುಪಪತ್ತಿ ಇಲ್ಲದಿದ್ದರೂ ಸಹ ಸಾಧ್ಯನಾವ್ಯಾಪಕತ್ವಕ್ಕೆ ಅನುಪಪತ್ತಿ ಇದೆ. ಏಕೆಂದರೆ - ಪಕ್ಷವಾದ ಘಟಪಟಾದಿಗಳಲ್ಲಿ ದೃಶ್ಯತ್ವಹೇತು ಇದ್ದರೂ ಸಹ ಪ್ರಮಾಣವಿರುದ್ಧತ್ವ ಇಲ್ಲವಾದ್ದರಿಂದ ಸಾಧನಾವ್ಯಾಪಕವಾಗಿದೆ ಎಂದು ಹೇಳಬೇಕು. ಆದರೆ ಘಟಪಟಾದಿ ಪ್ರಪಂಚವು

**''ನೇಹ ನಾನಾಸ್ತಿ ಕಿಂಚನ ''**

ಇತ್ಯಾದಿ ಸತ್ಯತ್ವವಿಪರೀತಮಿಥ್ಯಾತ್ವಪ್ರತಿಪಾದಕಪ್ರಮಾಣಗಳಿಗೆ ವಿಷಯವಾದ್ದರಿಂದ (ಪಕ್ಷದಲ್ಲಿ ವಿಪರೀತಪ್ರಮಾಣವಿಷಯತ್ವ = ಪ್ರಮಾಣವಿರುದ್ಧವೇ ಇರುವುದರಿಂದ) ಉಪಾಧಿಯು (ಸಾಧನಾವ್ಯಾಪಕವಾಗುವುದಿಲ್ಲ) ಸಾಧನವ್ಯಾಪಕವೇ ಆಗುತ್ತದೆಯಲ್ಲವೇ?

ಈ ರೀತಿ ಶಂಕಿಸುವುದು ಸರಿಯಲ್ಲ. ಕಾರಣ - ಪ್ರಪಂಚಕ್ಕೆ ಮಿಥ್ಯಾತ್ವಪ್ರತಿಪಾದಕವಾಗಿ ಪ್ರತೀತವಾಗುವ ''ನೇಹ ನಾನಾಸ್ತಿ ಕಿಂಚನ'' ಮೊದಲಾದ ಪ್ರಮಾಣಗಳಿಗೆ ಬೇರೆ ಅರ್ಥವನ್ನೇ (ಪರಮಾತ್ಮನಿಗೂ ಅವನ ಗುಣಾದಿಗಳಿಗೂ ಭೇದವಿಲ್ಲ ಎಂಬ ಅರ್ಥವನ್ನೇ) ವ್ಯಾಖ್ಯಾನಿಸಲಾಗಿದೆ.

ಪ್ರಪಂಚಕ್ಕೆ ಪ್ರಮಾಣವಿರುದ್ಧತ್ವವು ''ನೇಹ ನಾನಾಸ್ತಿ ಕಿಂಚನ'' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗದೇ ಹೋದರೂ

**'ವಿಮತಂ ಪ್ರಮಾಣವಿರುದ್ಧಂ ದೃಶ್ಯತ್ವಾತ್'**

ಎಂಬುದಾಗಿ ಮಿಥ್ಯಾತ್ವಸಾಧಕವಾದ ಅದೇ ದೃಶ್ಯತ್ವಹೇತುವಿನಿಂದಲೇ ಪ್ರಪಂಚಕ್ಕೆ ಪ್ರಮಾಣವಿರುದ್ಧತ್ವವನ್ನು ಸಾಧಿಸುತ್ತೇವೆ ಎಂದರೆ, ಅದೂ ಸರಿಯಲ್ಲ. ಕಾರಣ ದೃಶ್ಯತ್ವಹೇತುವಿನಿಂದ ಮಿಥ್ಯಾತ್ವವನ್ನು ಸಾಧಿಸುವಾಗ ಪ್ರಮಾಣವಿರುದ್ಧತ್ವ ಉಪಾಧಿ ಯಾಗುವಂತೆ, ದೃಶ್ಯತ್ವಹೇತುವಿನಿಂದ ಪ್ರಮಾಣವಿರುದ್ಧತ್ವವನ್ನು ಸಾಧಿಸುವಾಗ ಮಿಥ್ಯಾತ್ವವು ಉಪಾಧಿಯಾಗುತ್ತದೆ.

''ಯತ್ರ ಪ್ರಮಾಣವಿರುದ್ಧತ್ವಂ ತತ್ರ ಮಿಥ್ಯಾತ್ವಂ'' ಎಂಬ ವ್ಯಾಪ್ತಿ ಶುಕ್ತಿರಜತಾದಿಗಳಲ್ಲಿ ಕಂಡಿದ್ದರಿಂದ ಸಾಧ್ಯವ್ಯಾಪಕವಾಗಿದೆ. ಪಕ್ಷವಾದ ಪ್ರಪಂಚದಲ್ಲಿ ದೃಶ್ಯತ್ವಹೇತು ಇದ್ದರೂ ಪ್ರಮಾಣವಿರುದ್ಧತ್ವ ಇಲ್ಲವಾದ್ದರಿಂದ ಸಾಧನಾವ್ಯಾಪಕವೂ ಆಗಿದೆ. ಹೀಗಾಗಿ ಮಿಥ್ಯಾತ್ವವು ಉಪಾಧಿಯಾಗುತ್ತದೆ.

ಈ ರೀತಿಯಾಗಿ ಮಿಥ್ಯಾತ್ವವನ್ನು ಸಾಧಿಸುವಾಗ ಪ್ರಮಾಣವಿರುದ್ಧತ್ವ ಉಪಾಧಿ ಯಾಗುವುದಾದರೆ, ಪ್ರಮಾಣವಿರುದ್ಧತ್ವವನ್ನು ಸಾಧಿಸುವಾಗ ಮಿಥ್ಯಾತ್ವವು ಉಪಾಧಿ ಯಾಗುತ್ತದೆ. ಹೀಗೆ ಎರಡು ಅನುಮಾನಗಳಿಗೂ ಪರಸ್ಪರ ಉಪಾಧಿದೋಷ ಬರುವುದರಿಂದ ಮಿಥ್ಯಾತ್ವ - ಪ್ರಮಾಣವಿರುದ್ಧತ್ವ ಎರಡರಲ್ಲಿ ಯಾವುದೊಂದೂ ಸಿದ್ಧವಾಗುವುದಿಲ್ಲ ಎಂದು ಭಾವ.

ಮತ್ತು, ಲೋಕದಲ್ಲಿ ಯಾವುದೇ ಒಂದು ವಸ್ತುವಿನ ಸತ್ಯತ್ವ-ಮಿಥ್ಯಾತ್ವಗಳ ವಿಷಯವಾಗಿ ವಿಪ್ರತಿಪತ್ತಿ ಉಂಟಾದಾಗ, ಸತ್ಯತ್ವವಿಷಯದಲ್ಲಿ ದೃಶ್ಯತ್ವವನ್ನು (ದರ್ಶನವನ್ನು) ಅನುಸರಿಸುತ್ತಾರೆ. ಮಿಥ್ಯಾತ್ವವಿಷಯದಲ್ಲಿ ಪ್ರಮಾಣವಿರೋಧವನ್ನು ಅನುಸರಿಸುತ್ತಾರೆ.

ಅಂದಮೇಲೆ ಮಿಥ್ಯಾತ್ವವನ್ನು ಕುರಿತು ಪ್ರಮಾಣವಿರುದ್ಧತ್ವರೂಪ ಉಪಾಧಿಯೇ ಪ್ರಯೋಜಕವಾಗಿದೆ. ದೃಶ್ಯತ್ವವು ಪ್ರಯೋಜಕವಲ್ಲ ಎಂಬುದಾಗಿ ಲೋಕಾನುಭವ-ದಿಂದಲೂ ಸಿದ್ಧವಾಗಿದೆಯಾದ್ದರಿಂದ ನಿಮ್ಮ ದೃಶ್ಯತ್ವಹೇತು ಅಪ್ರಯೋಜಕವೂ ಆಗಿದೆ ಎಂದು ಭಾವ.

**ಅವತಾರಿಕೆ :-** ಆಚಾರ್ಯರು ಮುಂದೆ ಪಕ್ಷ ಮೊದಲಾದವುಗಳ ಲಕ್ಷಣಗಳನ್ನು ಹೇಳುತ್ತಾರೆ. ಆದರೆ ಹಿಂದೆ ಪಕ್ಷಾದಿಗಳು ಪ್ರಸಕ್ತವಾಗಿಲ್ಲವಾದ್ದರಿಂದ ಪಕ್ಷಾದಿಗಳ ಲಕ್ಷಣಗಳನ್ನು ಹೇಳುವುದು ಅಸಂಗತವಾಗುತ್ತದೆ ಎಂಬುದಾಗಿ ಅಸಂಗತಿಶಂಕೆ ಬಂದರೆ, ಆ ಅಸಂಗತಿಯನ್ನು ಪರಿಹರಿಸುವುದಕ್ಕಾಗಿ ಪಕ್ಷಾದಿಗಳ ಪ್ರಸಕ್ತಿಯನ್ನು ತೋರಿಸಿಕೊಡುತ್ತಾರೆ-

**ಟೀಕಾ :- ಅತ್ರ ''ಆಶ್ರಯಾಸಿದ್ಧಃ ಪಕ್ಷಃ'' ''ಸಪಕ್ಷಾಭಾವಾದ್ವಿರುದ್ಧಃ'' ''ಅಸಿದ್ಧೋ ಹೇತುಃ'' ''ಸಾಧ್ಯವಿಕಲೋ ದೃಷ್ಟಾಂತಃ'' ಇತಿ ಪಕ್ಷಸಪಕ್ಷವಿಪಕ್ಷಾಃ ಪ್ರತಿಜ್ಞಾಹೇತುದೃಷ್ಟಾಂತಾಶ್ಚ ವ್ಯವಹೃತಾಃ । ನ ಚ ಪಕ್ಷಾದಿಸ್ವರೂಪಾನವಗತೌ ಉಕ್ತದೋಷಸ್ಫೂರ್ತಿಃ ಭವತೀತಿ ಕ್ರಮೇಣ ತಲ್ಲಕ್ಷಣಾನ್ಯಾಹ -**

**ಮೂಲ :- ಸಾಧ್ಯಧರ್ಮವಿಶಿಷ್ಟಃ ಪಕ್ಷಃ ।**

**'ಯತ್ಪ್ರತೀತಿರ್ಲಿಂಗೇನ ಜನಯಿತವ್ಯಾ ಸ ಸಾಧ್ಯಧರ್ಮಃ' ಇತಿ ನಾಸ್ತಿ ಕಶ್ಚಿತ್ ಕ್ಷುದ್ರೋಪದ್ರವಃ ।**

**ಅನುವಾದ :-** ಈ ಗ್ರಂಥದಲ್ಲಿ ಆಚಾರ್ಯರು ''ಆಶ್ರಯಾಸಿದ್ಧಃ ಪಕ್ಷಃ'' ''ಸಪಕ್ಷಾಭಾವಾತ್ ವಿರುದ್ಧಃ'' ''ಅಸಿದ್ಧೋ ಹೇತುಃ'' ''ಸಾಧ್ಯವಿಕಲೋ ದೃಷ್ಟಾಂತಃ'' ಎಂಬುದಾಗಿ ಪಕ್ಷ -ಸಪಕ್ಷ-ವಿಪಕ್ಷಗಳನ್ನು ಹಾಗೂ ಪ್ರತಿಜ್ಞಾ-ಹೇತು-ದೃಷ್ಟಾಂತಗಳನ್ನು ವ್ಯವಹರಿಸಿದ್ದಾರೆ.

ಆದರೆ ಪಕ್ಷ-ಸಪಕ್ಷಾದಿಗಳ ಸ್ವರೂಪವೇ ಗೊತ್ತಿಲ್ಲವೆಂದಾದರೆ ಆಶ್ರಯಾಸಿದ್ಧಿ-ವಿರೋಧ-ಸಾಧ್ಯವೈಕಲ್ಯ-ಅಸಿದ್ಧಿ ಮೊದಲಾದ ದೋಷಗಳ ಸ್ಫೂರ್ತಿಯೇ ಆಗುವುದಿಲ್ಲ. ಆ ಕಾರಣ ಕ್ರಮವಾಗಿ ಪಕ್ಷ-ಸಪಕ್ಷಾದಿಗಳ ಲಕ್ಷಣಗಳನ್ನು ಹೇಳುತ್ತಾರೆ (ತಿಳಿಸುತ್ತಾರೆ) -

**ಮೂಲ :-** ಸಾಧ್ಯಧರ್ಮವಿಶಿಷ್ಟಃ ಪಕ್ಷಃ ।

**ಮೂಲಾರ್ಥ :-** ಲಿಂಗಜನ್ಯಪ್ರತೀತಿವಿಷಯವಾದ ಧರ್ಮವು ಸಾಧ್ಯಧರ್ಮ ಎನಿಸುತ್ತದೆ. ಅಂತಹ ಸಾಧ್ಯಧರ್ಮದಿಂದ ವಿಶಿಷ್ಟವಾದದ್ದು ಪಕ್ಷ ಎನಿಸುತ್ತದೆ.

ಸಾಧ್ಯ ಎಂದರೆ ಸಂದಿಗ್ಧವಾದ ಧರ್ಮ ಎಂದು ವಿವಕ್ಷಿಸುತ್ತೀರೋ ? ಅಥವಾ ಮತ್ತೊಬ್ಬರಿಗೆ ಜ್ಞಾಪನೀಯವಾದ ಧರ್ಮ ಎಂದು ವಿವಕ್ಷಿಸುತ್ತೀರೋ ?

ಸಂದಿಗ್ಧವಾದ ಧರ್ಮ ಎಂದು ವಿವಕ್ಷಿಸುವುದು ಸರಿಯಲ್ಲ. ಏಕೆಂದರೆ - ಮಹಾನಸದಲ್ಲಿ ವಹ್ನಿಯು ಪ್ರತ್ಯಕ್ಷದಿಂದ ಸಿದ್ಧವಾಗಿದ್ದರೂ ಸಹ

**'ಪ್ರತ್ಯಕ್ಷಸಿದ್ಧಮಪಿ ವಹ್ನಿಂ ಅನುಮಿನುಯಾಂ'**

'ವಹ್ನಿಯು ಪ್ರತ್ಯಕ್ಷಸಿದ್ಧವಾಗಿದ್ದರೂ ಸಹ ಅನುಮಾನದಿಂದ ಸಾಧಿಸುತ್ತೇನೆ' ಎಂಬುದಾಗಿ ಅನುಮಾನದಿಂದ ತಿಳಿಯುವ ಉದ್ದೇಶದಿಂದ ಅನುಮಾನಪ್ರಯೋಗ ಯಾವಾಗ ಮಾಡುತ್ತಾನೆಯೋ ಆಗ ಆ ಅನುಮಾನದಲ್ಲಿ ಪಕ್ಷವಾದ ಮಹಾನಸದಲ್ಲಿ (ಪ್ರತ್ಯಕ್ಷಸಿದ್ಧವಹ್ನಿವಿಶಿಷ್ಟತ್ವವೇ ಇರುವುದರಿಂದ) ಸಂದಿಗ್ಧಧರ್ಮವಿಶಿಷ್ಟತ್ವ ರೂಪವಾದ ಪಕ್ಷತ್ವ ಬಾರದ ಕಾರಣ ಅವ್ಯಾಪ್ತಿ ಬರುತ್ತದೆ.

ಇನ್ನು ಮತ್ತೊಬ್ಬರಿಗೆ ಜ್ಞಾಪನೀಯವಾದ ಧರ್ಮ ಎಂದು ವಿವಕ್ಷಿಸುವುದೂ ಸರಿಯಲ್ಲ. ಕಾರಣ - ಸ್ವಾರ್ಥಾನುಮಾನ ಮಾಡಿಕೊಂಡಾಗ ಅಲ್ಲಿ ಪರನೇ (ಮತ್ತೊಬ್ಬ ವ್ಯಕ್ತಿಯೇ) ಇಲ್ಲವಾದ್ದರಿಂದ ಪರಂ ಪ್ರತಿ ಜ್ಞಾಪನೀಯಧರ್ಮವಿಶಿಷ್ಟತ್ವ ರೂಪವಾದ ಪಕ್ಷತ್ವ ಬಾರದ ಕಾರಣ ಸ್ವಾರ್ಥಾನುಮಾನದ ಪಕ್ಷದಲ್ಲಿ ಅವ್ಯಾಪ್ತಿ ಬರುತ್ತದೆ.

ಈ ರೀತಿಯಾಗಿ ಸಮಸ್ಯೆ ಬಂದರೆ, ಅದರ ಪರಿಹಾರಕ್ಕಾಗಿ ಪಕ್ಷದ ನಿಷ್ಕೃಷ್ಟ ಲಕ್ಷಣವನ್ನು ಹೇಳುತ್ತಾರೆ -

**ಯತ್ಪ್ರತೀತಿಃ ಲಿಂಗೇನ ಜನಯಿತವ್ಯಾ ಸ ಸಾಧ್ಯಧರ್ಮಃ ।**

ಯಾವುದರ ಜ್ಞಾನ ಲಿಂಗದಿಂದ ಉಂಟಾಗುತ್ತದೆಯೋ ಅದು ಸಾಧ್ಯಧರ್ಮ. ಒಟ್ಟಿನಲ್ಲಿ 'ಲಿಂಗಜನ್ಯಪ್ರತೀತಿವಿಷಯಧರ್ಮಃ ಸಾಧ್ಯಧರ್ಮಃ' ಎಂಬುದಾಗಿ ಲಕ್ಷಣ ಹೇಳಿದಂತಾಗುತ್ತದೆ.

ವಹ್ನಿಯು ಪ್ರತ್ಯಕ್ಷಸಿದ್ಧವಾಗಿದ್ದರೂ ಅನುಮಾನದಿಂದ ಸಾಧಿಸುವಾಗ ಮಹಾನಸದಲ್ಲಿ ಲಿಂಗದಿಂದಲೂ ವಹ್ನಿಜ್ಞಾನ ಮಾಡಿಕೊಳ್ಳುವುದರಿಂದ ಲಿಂಗಜನ್ಯಪ್ರತೀತಿವಿಷಯತ್ವವು ವಹ್ನಿಗೆ ಬರುವುದರಿಂದ ಸಾಧ್ಯಧರ್ಮವಾಗುತ್ತದೆ. ಮಹಾನಸವು ಸಾಧ್ಯಧರ್ಮವಿಶಿಷ್ಟವಾಗುವುದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ. ಇನ್ನು ಸ್ವಾರ್ಥಾನುಮಾನದಲ್ಲಿ ಪರವ್ಯಕ್ತಿ ಇಲ್ಲದಿದ್ದರೂ ಸಹ ಲಿಂಗಜನ್ಯಪ್ರತೀತಿವಿಷಯತ್ವಕ್ಕೆ ಅನುಪಪತ್ತಿ ಇಲ್ಲವಾದ್ದರಿಂದ ಪಕ್ಷತ್ವಕ್ಕೆ ಸಮಸ್ಯೆ ಇಲ್ಲ.

ಆದ್ದರಿಂದ ''ಲಿಂಗಜನ್ಯಪ್ರತೀತಿವಿಷಯಧರ್ಮಃ ಸಾಧ್ಯಧರ್ಮಃ, ತಾದೃಶಸಾಧ್ಯಧರ್ಮವಿಶಿಷ್ಟಃ ಪಕ್ಷಃ '' ಎನ್ನುವುದು ನಿಷ್ಕೃಷ್ಟ ಲಕ್ಷಣವಾಗುತ್ತದೆ.

**ಟೀಕಾ :- ಸಾಧ್ಯಗ್ರಹಣಂ ಸಪಕ್ಷಾದಿವ್ಯಾವೃತ್ತ್ಯರ್ಥಮ್ । 'ಸಾಧ್ಯವಿಶಿಷ್ಟಃ' ಇತ್ಯೇವೋಕ್ತೇ ವಸ್ತುತೋಽಗ್ನಿವಿಶಿಷ್ಟಸ್ಯ ಪರ್ವತಸ್ಯ ಸಾಧ್ಯತ್ವಾತ್ ತದ್ವಿಶಿಷ್ಟಸ್ಯಾನ್ಯಸ್ಯ ಪಕ್ಷತ್ವಂ ಸ್ಯಾತ್ತದರ್ಥಂ ಧರ್ಮಗ್ರಹಣಮ್ ।**

**ಧರ್ಮಮಾತ್ರಸ್ಯ ಪ್ರಾಗೇವ ಸಿದ್ಧತ್ವಾತ್ ಸಾಧ್ಯತ್ವಾನುಪಪತ್ತೇಃ ವಿಶಿಷ್ಟಗ್ರಹಣಮ್।**

**ತಥಾ ಚ ಸಾಧ್ಯತ್ವಂ ಧರ್ಮಸ್ಯ ತತ್ಸಂಬಂಧಿತಯೈವ ಸಿದ್ಧ್ಯತಿ । ವಿಶಿಷ್ಟತ್ವಂ ಚ ಧರ್ಮಧರ್ಮಿಭಾವೇನೈವ ವಿವಕ್ಷಿತಮ್ । ನ ತು ಸಂಬಂಧಮಾತ್ರೇಣ । ತೇನ ಸಾಧನಧರ್ಮಾದಾವತಿಪ್ರಸಂಗಾಭಾವಾನ್ನ ತದರ್ಥಂ ಧರ್ಮೀತಿ ವಕ್ತವ್ಯಮ್ ।**

**ಅನುವಾದ :-** ಪಕ್ಷಲಕ್ಷಣದಲ್ಲಿ ಸ್ವಲ್ಪ ದಳಕೃತ್ಯವಿಚಾರ ಮಾಡುತ್ತಾರೆ.

**ಕೃತ್ಯ 1) ಸಾಧ್ಯ ಪದ ಏಕೆ ?**

ಇಲ್ಲಿ ''ಧರ್ಮವಿಶಿಷ್ಟಃ ಪಕ್ಷಃ'' ಎಂದಷ್ಟೇ ಹೇಳಿದರೆ ಸಪಕ್ಷವಾದ ಮಹಾನಸವು ಮಹಾನಸತ್ವರೂಪಧರ್ಮವಿಶಿಷ್ಟವಾಗಿದ್ದರಿಂದ ಮತ್ತು ವಿಪಕ್ಷವಾದ ಹ್ರದವು ಹ್ರದತ್ವಾದಿಧರ್ಮವಿಶಿಷ್ಟವಾಗಿದ್ದರಿಂದ ಸಪಕ್ಷ - ವಿಪಕ್ಷಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಆ ಅತಿವ್ಯಾಪ್ತಿಯ ಪರಿಹಾರಕ್ಕಾಗಿ 'ಸಾಧ್ಯ' ಎಂದು ಹೇಳಬೇಕು. ಮಹಾನಸದಲ್ಲಿ ಮಹಾನಸತ್ವಧರ್ಮ ಇದ್ದರೂ ಆ ಮಹಾನಸತ್ವಧರ್ಮವು ಲಿಂಗಜನ್ಯಪ್ರತೀತಿವಿಷಯ-ಸಾಧ್ಯಧರ್ಮವಾಗಿಲ್ಲವಾದ್ದರಿಂದ, ಮಹಾನಸವು ಅಂತಹ ಸಾಧ್ಯಧರ್ಮವಿಶಿಷ್ಟವಾಗದ ಕಾರಣ ಸಪಕ್ಷದಲ್ಲಿ ಅತಿವ್ಯಾಪ್ತಿ ಬರುವುದಿಲ್ಲ.

ಅದೇ ರೀತಿಯಾಗಿ ವಿಪಕ್ಷವಾದ ಹ್ರದದಲ್ಲಿ ಹ್ರದತ್ವಾದಿಧರ್ಮಗಳಿದ್ದರೂ ಅವು ಲಿಂಗಜನ್ಯಪ್ರತೀತಿವಿಷಯಧರ್ಮಗಳಾಗದ ಕಾರಣ, ಹ್ರದವು ಸಾಧ್ಯಧರ್ಮ-ವಿಶಿಷ್ಟವಾಗದ ಕಾರಣ ವಿಪಕ್ಷದಲ್ಲಿಯೂ ಅತಿವ್ಯಾಪ್ತಿ ಬರುವುದಿಲ್ಲ. ಹೀಗೆ ಸಪಕ್ಷ - ವಿಪಕ್ಷಗಳಲ್ಲಿ ಬರುವ ಅತಿವ್ಯಾಪ್ತಿಪರಿಹಾರಕ್ಕಾಗಿ 'ಸಾಧ್ಯ' ಪದ ಆವಶ್ಯಕ.

**ಕೃತ್ಯ -2) ಧರ್ಮ ಪದ ಏಕೆ ?**

ಸಾಧ್ಯಧರ್ಮವಿಶಿಷ್ಟಃ ಎಂದು ಏಕೆ ಹೇಳಬೇಕು ? ಧರ್ಮ ಪದವನ್ನು ಬಿಟ್ಟು ಕೇವಲ ''ಸಾಧ್ಯವಿಶಿಷ್ಟಃ ಪಕ್ಷಃ'' ಎಂದಷ್ಟೇ ಹೇಳಬಹುದಲ್ಲ ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ - ಸಾಧ್ಯವಿಶಿಷ್ಟಃ ಪಕ್ಷಃ ಎಂದಷ್ಟೇ ಹೇಳಿದರೆ ಅತಿವ್ಯಾಪ್ತಿ ಬರುತ್ತದೆ. ಹೇಗೆಂದರೆ - ಅಗ್ನಿ ಹಾಗೂ ಪರ್ವತ ಎರಡೂ ಸ್ವರೂಪತಃ ಸಿದ್ಧವಾಗಿವೆಯಾದರೂ ಅಗ್ನಿವಿಶಿಷ್ಟವಾಗಿ ಪರ್ವತ, ಪರ್ವತವಿಶಿಷ್ಟವಾಗಿ ಅಗ್ನಿ ಸಿದ್ಧವಾಗಿಲ್ಲವಾದ್ದರಿಂದ ಯಾವ ರೀತಿಯಾಗಿ ಪರ್ವತಸಂಬಂಧಿಯಾಗಿ ಅಗ್ನಿಯು ಸಾಧ್ಯವಾಗಿದೆಯೋ ಅದೇ ರೀತಿಯಾಗಿ ಅಗ್ನಿಸಂಬಂಧಿಯಾಗಿ ಪರ್ವತವೂ ಸಾಧ್ಯವಾಗಿದೆ. ಅಂತಹ ಸಾಧ್ಯವಾದ ಪರ್ವತದಿಂದ ವಿಶಿಷ್ಟವಾಗಿದೆ ಅದರ ಅವಯವ. ಹೀಗಾಗಿ ಪಕ್ಷಕ್ಕೆ ಹೇಳಿದ ಸಾಧ್ಯವಿಶಿಷ್ಟತ್ವ ಎಂಬ ಲಕ್ಷಣವು ಪರ್ವತಾವಯವದಲ್ಲಿ ಬರುವುದರಿಂದ ಅತಿವ್ಯಾಪ್ತಿ .

ಆ ಅತಿವ್ಯಾಪ್ತಿಯ ಪರಿಹಾರಕ್ಕಾಗಿ 'ಧರ್ಮ' ಎಂಬ ಪದ ಬೇಕು. ಪ್ರಕೃತ ಅಗ್ನಿವಿಶಿಷ್ಟವಾಗಿ ಪರ್ವತವು ಸಾಧ್ಯವಾಗಿದ್ದರೂ ಸಹ ಅದು ಧರ್ಮಿಯಾಗಿದೆಯೇ ಹೊರತು ಧರ್ಮ ಆಗಿಲ್ಲ. ಹಾಗಾಗಿ ಸಾಧ್ಯಧರ್ಮವಿಶಿಷ್ಟತ್ವ ಎನ್ನುವುದು ಪರ್ವತಾವಯವದಲ್ಲಿ ಬಾರದ ಕಾರಣ ಅತಿವ್ಯಾಪ್ತಿ ಬರುವುದಿಲ್ಲ.

**ಕೃತ್ಯ -3) ವಿಶಿಷ್ಟ ಪದ ಏಕೆ ?**

ಇನ್ನು 'ವಿಶಿಷ್ಟ' ಎಂದು ಏಕೆ ಹೇಳಬೇಕು ? ಕೇವಲ ''ಸಾಧ್ಯಧರ್ಮಃ ಪಕ್ಷಃ'' ಎಂದಷ್ಟೇ ಹೇಳಬಹುದಲ್ಲ ? ಎಂದರೆ, ಅದೂ ಸರಿಯಲ್ಲ. ಏಕೆಂದರೆ ವಹ್ನಿರೂಪವಾದ ಧರ್ಮವು ಅನುಮಾನಕ್ಕಿಂತಲೂ ಪೂರ್ವದಲ್ಲಿ ಎಲ್ಲಿಯಾದರೂ (ಪಕ್ಷ ಬಿಟ್ಟು ಬೇರೆಡೆ) ಸಿದ್ಧವಾಗಿದೆಯಾದ್ದರಿಂದ ಅದಕ್ಕೆ ಸಾಧ್ಯತ್ವ (ಲಿಂಗಜನ್ಯಪ್ರತೀತಿವಿಷಯತ್ವ ) ಕೂಡುವುದಿಲ್ಲ. ಹೀಗಾಗಿ ಸಾಧ್ಯವಾದ ಧರ್ಮ ಎಂಬುದಾಗಿ ಸಾಧ್ಯಪದ-ಧರ್ಮಪದಗಳಲ್ಲಿ ವಿಶೇಷಣ-ವಿಶೇಷ್ಯಭಾವ ಕೂಡುವುದಿಲ್ಲ.




ಆದ್ದರಿಂದ ಈ ಅನುಪಪತ್ತಿಪರಿಹಾರಕ್ಕಾಗಿ ವಿಶಿಷ್ಟ ಎಂದು ಹೇಳಬೇಕು. ವಹ್ನಿರೂಪವಾದ ಧರ್ಮವು ಅನುಮಾನಕ್ಕಿಂತಲೂ ಪೂರ್ವದಲ್ಲಿ ಸ್ವರೂಪತಃ ಸಿದ್ಧವಾಗಿದ್ದರೂ, ವಹ್ನಿಗೆ ಸ್ವರೂಪತಃ ಸಾಧ್ಯತ್ವವನ್ನು ವಿವಕ್ಷಿಸಿಲ್ಲ. ಕಿಂತು ಪರ್ವತಸಂಬಂಧಿತ್ವೇನ ಸಾಧ್ಯತ್ವವನ್ನು ವಿವಕ್ಷಿಸಿದ್ದೇವೆ. ವಹ್ನಿಯು ಪರ್ವತಸಂಬಂಧಿಯಾಗಿ ಪೂರ್ವದಲ್ಲಿ ಸಿದ್ಧವಾಗಿಲ್ಲವಾದ್ದರಿಂದ ವಹ್ನಿಗೆ ಲಿಂಗಜನ್ಯಪ್ರತೀತಿವಿಷಯತ್ವರೂಪವಾದ ಸಾಧ್ಯತ್ವವು ಉಪಪನ್ನವಾಗುತ್ತದೆ. ಅಂತೆಯೇ ವಿಶೇಷಣ-ವಿಶೇಷ್ಯಭಾವವೂ ಕೂಡುತ್ತದೆ. ಆದ್ದರಿಂದ ವಿಶಿಷ್ಟಪದ ಸಾರ್ಥಕ.

**ಕೃತ್ಯ -4) ಧರ್ಮೀ ಎಂದು ಪ್ರತ್ಯೇಕ ಹೇಳುವ ಅಗತ್ಯವಿಲ್ಲ**

ಇಲ್ಲಿ ಸಾಧ್ಯಧರ್ಮವಿಶಿಷ್ಟಃ ಎಂಬುದಾಗಿ ಹೇಳಿದರೂ ಸಹ ಸಾಧ್ಯಧರ್ಮವಿಶಿಷ್ಟತ್ವ ಎಂದರೆ ಸಾಧ್ಯಧರ್ಮಸಂಬಂಧಿತ್ವ ಎಂದರ್ಥ. ಇಂತಹ ಸಾಧ್ಯಧರ್ಮಸಂಬಂಧಿತ್ವವು ವ್ಯಾಪ್ಯವ್ಯಾಪಕಭಾವಸಂಬಂಧದಿಂದ ಸಾಧನಕ್ಕೂ ಇದೆ.

(ಸಾಧನವು ಸಾಧ್ಯವ್ಯಾಪ್ಯವಾಗಿರುವುದರಿಂದ ವ್ಯಾಪ್ಯವ್ಯಾಪಕಭಾವ-ಸಂಬಂಧದಿಂದ ಸಾಧ್ಯಸಂಬಂಧಿಯಾಗುತ್ತದೆ ಸಾಧನ.) ಹೀಗಾಗಿ (ಸಾಧ್ಯಧರ್ಮ-ವಿಶಿಷ್ಟತ್ವ) ಸಾಧ್ಯಧರ್ಮಸಂಬಂಧಿತ್ವ ಎಂದಷ್ಟೇ ಲಕ್ಷಣ ಮಾಡಿದರೆ ಸಾಧನದಲ್ಲಿ ಅತಿವ್ಯಾಪ್ತಿ ಬರುತ್ತದೆ. ಆ ಅತಿವ್ಯಾಪ್ತಿಪರಿಹಾರಕ್ಕಾಗಿ ಧರ್ಮೀ ಎಂದು ಹೇಳಬೇಕು ಎಂಬ ಅಭಿಪ್ರಾಯದಿಂದ ಧರ್ಮಿಗ್ರಹಣ ಮಾಡುತ್ತಾರೆ ಕೆಲವರು. ಅಂತೆಯೇ -

**''ಸಂದಿಗ್ಧಸಾಧ್ಯಧರ್ಮಾ ಧರ್ಮೀ ಪಕ್ಷಃ''**

ಎಂದೇ ಲಕ್ಷಣ ಹೇಳುತ್ತಾರೆ. ಧರ್ಮಧರ್ಮಿಭಾವದಿಂದಲೇ ಸಾಧ್ಯಧರ್ಮ-ಸಂಬಂಧಿತ್ವವು ವಿವಕ್ಷಿತವಾದ್ದರಿಂದ ಸಾಧನಕ್ಕೆ ಸಾಧ್ಯದೊಂದಿಗೆ ಧರ್ಮಧರ್ಮಿಭಾವ-ಸಂಬಂಧ ಇಲ್ಲವಾದ್ದರಿಂದ 'ಧರ್ಮೀ' ಎಂದು ಹೇಳುವುದರಿಂದ ಸಾಧನದಲ್ಲಿ ಬಂದ ಅತಿವ್ಯಾಪ್ತಿ ಪರಿಹಾರವಾಗುತ್ತದೆ ಎಂಬುದಾಗಿ ಅವರು ಅಭಿಪ್ರಾಯಪಡುತ್ತಾರೆ.

ಆದರೆ ಧರ್ಮೀ ಎಂದು ಪ್ರತ್ಯೇಕವಾಗಿ ಹೇಳದೇ ಕೇವಲ ''ಸಾಧ್ಯಧರ್ಮ-ವಿಶಿಷ್ಟಃ'' ಎಂದಷ್ಟೇ ಹೇಳಿದಾಗಲೂ ಸಹ ವಿಶಿಷ್ಟತ್ವವನ್ನು ಧರ್ಮಧರ್ಮಿಭಾವ ಸಂಬಂಧದಿಂದಲೇ ವಿವಕ್ಷಿಸಿರುವ ಕಾರಣ, ವ್ಯಾಪ್ಯವ್ಯಾಪಕಭಾವ ಮೊದಲಾದ ಸಂಬಂಧಗಳಿಂದ ವಿವಕ್ಷಿಸಿಲ್ಲವಾದ್ದರಿಂದ, ಧರ್ಮಧರ್ಮಿಭಾವಸಂಬಂಧದಿಂದ ಸಾಧ್ಯಧರ್ಮವಿಶಿಷ್ಟತ್ವ ಎನ್ನುವುದು ಸಾಧನದಲ್ಲಿ ಬರುವುದಿಲ್ಲವಾದ್ದರಿಂದ ಅತಿವ್ಯಾಪ್ತಿ

ಬರುವುದೇ ಇಲ್ಲ. ಅಂದಮೇಲೆ ಅತಿವ್ಯಾಪ್ತಿಪರಿಹಾರಕ್ಕಾಗಿ ಧರ್ಮೀ ಎಂದು ಪ್ರತ್ಯೇಕ ಹೇಳುವ ಅಗತ್ಯವಿಲ್ಲ ಎಂದು ಆಚಾರ್ಯರ ಅಭಿಪ್ರಾಯ.

**ಮೂಲ :- ಸಾಧ್ಯಸಮಾನಧರ್ಮವಿಶಿಷ್ಟಃ ಸಪಕ್ಷಃ ।**

**ಟೀಕಾ :- ಪಕ್ಷವಿಪಕ್ಷಯೋರಪಿ ಸಮಾನಧರ್ಮವಿಶಿಷ್ಟತ್ವಾತ್ ತದ್ವ್ಯುದಾಸಾರ್ಥಂ ಸಾಧ್ಯಗ್ರಹಣಮ್ । ಸಮಾನಗ್ರಹಣಂ ಚ ಪಕ್ಷವ್ಯುದಾಸಾರ್ಥಮ್ । ಸಮಾನತ್ವಂ ಚ ಸಾಧ್ಯತ್ವಮುಪಹಾಯ ಸಾಕ್ಷಾದೇವೇತಿ ನಾತಿಪ್ರಸಂಗಃ । ಶೇಷಂ ಪೂರ್ವವತ್ ।**

**ಅನುವಾದ :-**

**ಮೂಲ :- ಸಾಧ್ಯಸಮಾನಧರ್ಮವಿಶಿಷ್ಟಃ ಸಪಕ್ಷಃ ।**

**ಮೂಲಾರ್ಥ :-** ಸಾಕ್ಷಾತ್ತಾಗಿ ವಹ್ನಿತ್ವೇನ ಸಾಧ್ಯಧರ್ಮಕ್ಕೆ (ಪರ್ವತೀಯವಹ್ನಿಗೆ) ಸಮಾನವಾದ ಧರ್ಮ ಎಂದರೆ ಮತ್ತೊಂದು ವಹ್ನಿ. (ಮಹಾನಸೀಯ ವಹ್ನಿ.) ತದ್ವಿಶಿಷ್ಟವಾದದ್ದು ಸಪಕ್ಷ ಎನಿಸುತ್ತದೆ.

ಇಲ್ಲಿ ಸಾಧ್ಯ ಎಂಬ ಪದ ಏಕೆ ಬೇಕು ? ಕೇವಲ

**''ಸಮಾನಧರ್ಮವಿಶಿಷ್ಟಃ ಸಪಕ್ಷಃ''**

ಎಂದಷ್ಟೇ ಹೇಳಬಹುದಲ್ಲ ? ಎಂದು ಶಂಕಿಸುವುದು ಸರಿಯಲ್ಲ. ಏಕೆಂದರೆ ಸಮಾನಧರ್ಮವಿಶಿಷ್ಟಃ ಸಪಕ್ಷಃ ಎಂದಷ್ಟೇ ಹೇಳಿದರೆ ಪಕ್ಷ - ವಿಪಕ್ಷಗಳೂ ಸಹ ದ್ರವ್ಯತ್ವ ಪ್ರಮೇಯತ್ವಾದಿರೂಪವಾದ ಸಪಕ್ಷಸಮಾನಧರ್ಮಗಳಿಂದ ವಿಶಿಷ್ಟವಾದ್ದರಿಂದ ಪಕ್ಷ - ವಿಪಕ್ಷಗಳಲ್ಲಿ ಅತಿವ್ಯಾಪ್ತಿ ಬರುತ್ತದೆ . ಆ ಅತಿವ್ಯಾಪ್ತಿಪರಿಹಾರಕ್ಕಾಗಿ 'ಸಾಧ್ಯ' ಎಂದು ಹೇಳಬೇಕು. ಯಾವುದಕ್ಕೋ ಸಮಾನವಾದ ಧರ್ಮ ಎಂದು ವಿವಕ್ಷೆಯಲ್ಲ. ಕಿಂತು ಸಾಧ್ಯಧರ್ಮಕ್ಕೆ ಸಮಾನವಾದ ಧರ್ಮದಿಂದ ವಿಶಿಷ್ಟವಾಗಿರಬೇಕು ಎಂದು ನಿಮ್ಮ ವಿವಕ್ಷೆ. ಪಕ್ಷ -ವಿಪಕ್ಷಗಳು ಪ್ರಮೇಯತ್ವಾದಿ ಸಪಕ್ಷಸಮಾನಧರ್ಮದಿಂದ ವಿಶಿಷ್ಟವಾದರೂ ಸಾಧ್ಯಕ್ಕೆ ಸಮಾನವಾದ ಧರ್ಮದಿಂದ (ವಹ್ನಿಯಿಂದ) ವಿಶಿಷ್ಟವಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಬರುವುದಿಲ್ಲ.

ಇನ್ನು ಸಮಾನ ಎಂಬ ಪದ ಏಕೆ ಬೇಕು ? ಕೇವಲ




**''ಸಾಧ್ಯಧರ್ಮವಿಶಿಷ್ಟಃ ಸಪಕ್ಷಃ''**

ಎಂದಷ್ಟೇ ಹೇಳಿರಿ ಎಂದರೆ, ಅಷ್ಟೇ ಹೇಳಿದರೆ ಹಿಂದೆ ಹೇಳಿದ ಪ್ರಕಾರ ಸಾಧ್ಯಧರ್ಮವಿಶಿಷ್ಟತ್ವವು ಪಕ್ಷದಲ್ಲಿ ಇರುವುದರಿಂದ ಪಕ್ಷದಲ್ಲಿ ಅತಿವ್ಯಾಪ್ತಿ ಬರುತ್ತದೆ. ಆ ಅತಿವ್ಯಾಪ್ತಿಪರಿಹಾರಕ್ಕಾಗಿ ಸಮಾನ ಎಂಬ ಪದ ಬೇಕು. ಪಕ್ಷವು ಸಾಧ್ಯಧರ್ಮದಿಂದಲೇ ವಿಶಿಷ್ಟವಾಗಿದೆ, ಹೊರತು ಸಾಧ್ಯಸಮಾನಧರ್ಮದಿಂದ ವಿಶಿಷ್ಟವಾಗಿಲ್ಲ. ಆದ್ದರಿಂದ ಅತಿವ್ಯಾಪ್ತಿ ಬರುವುದಿಲ್ಲ.

ಹೌದು, ಪಕ್ಷವಿಪಕ್ಷಗಳಲ್ಲಿ ಬರುವ ಅತಿವ್ಯಾಪ್ತಿಪರಿಹಾರಕ್ಕಾಗಿ ಸಾಧ್ಯ ಎಂಬ ಪದ ಬೇಕು ಎಂಬುದಾಗಿ ಹೇಳಿದಿರಿ. ಆದರೆ ದ್ರವ್ಯತ್ವ - ಪ್ರಮೇಯತ್ವಾದಿಗಳೂ ಸಹ ಸಾಧ್ಯಸಮಾನಧರ್ಮವಾಗಿರುವುದರಿಂದ ಸಾಧ್ಯಸಮಾನಧರ್ಮವಿಶಿಷ್ಟತ್ವ ಎನ್ನುವುದು ಪಕ್ಷ - ವಿಪಕ್ಷಗಳಲ್ಲಿಯೂ ಇದ್ದೇ ಇದೆಯಾದ್ದರಿಂದ ಅತಿವ್ಯಾಪ್ತಿ ಹಾಗೇ ಉಳಿಯುತ್ತದೆ. ಸಾಧ್ಯ ಎಂಬ ಪದವನ್ನು ಹಾಕಿದರೂ ಅತಿವ್ಯಾಪ್ತಿಪರಿಹಾರ ಆಗುವುದಿಲ್ಲವಲ್ಲ ?

ಮತ್ತು , ಮಹಾನಸೀಯವಹ್ನಿಯು ಪವತೀಯವಹ್ನಿಗೆ ಸಮಾನಧರ್ಮವಾಗಿದೆ ಎಂದರೆ, ಸರ್ವಥಾ ಸಮಾನಧರ್ಮತ್ವವನ್ನು ಹೇಳುತ್ತೀರೋ ? ಅಥವಾ ಯಥಾಕಥಂಚಿತ್ ಸಮಾನಧರ್ಮತ್ವವನ್ನು ಹೇಳುತ್ತೀರೋ ?

ಸರ್ವಥಾ ಸಮಾನಧರ್ಮತ್ವವನ್ನು ಹೇಳುವುದಾದರೆ, ಮಹಾನಸೀಯವಹ್ನಿಯು ಸಂದಿಗ್ಧರೂಪದಿಂದ ಪರ್ವತೀಯವಹ್ನಿಗೆ ಸಮಾನವಾಗುವುದಿಲ್ಲವಾದ್ದರಿಂದ, ಸರ್ವಥಾ ಸಾಧ್ಯಸಮಾನಧರ್ಮವಿಶಿಷ್ಟತ್ವವು ಮಹನಸದಲ್ಲಿಯೇ ಬಾರದ ಕಾರಣ ಅಸಂಭವ ಬರುತ್ತದೆ.

ಇನ್ನು ಯಥಾಕಥಂಚಿತ್ ಸಮಾನಧರ್ಮತ್ವವನ್ನು ವಿವಕ್ಷಿಸುವುದಾದರೆ, ಪರ್ವತೀಯವಹ್ನಿಗೆ ಅಗ್ನ್ಯಭಾವವೂ ಪ್ರಮೇಯತ್ವರೂಪದಿಂದ ಸಮಾನ-ವಾಗುವುದರಿಂದ, ಯಥಾಕಥಂಚಿತ್ ಸಾಧ್ಯಸಮಾನಧರ್ಮವಿಶಿಷ್ಟತ್ವವು ಅಗ್ನ್ಯಭಾವ ಉಳ್ಳ ವಿಪಕ್ಷದಲ್ಲಿಯೂ ಬರುವುದರಿಂದ ಅತಿವ್ಯಾಪ್ತಿ (ವಿಪಕ್ಷವೂ ಸಪಕ್ಷವಾಗ-ಬೇಕಾಗುತ್ತದೆ). ಅಂದಮೇಲೆ ಸಮಾನಧರ್ಮತ್ವವನ್ನು ಹೇಗೆ ವಿವಕ್ಷಿಸುತ್ತೀರಿ?

ಈ ಎಲ್ಲ ಶಂಕೆಗಳಿಗೆ ಟೀಕಾಕೃತ್ಪಾದರು ಉತ್ತರಿಸುತ್ತಾರೆ -

**''ಸಮಾನತ್ವಂ ಚ ಸಾಧ್ಯತ್ವಮಪಹಾಯ ಸಾಕ್ಷಾದೇವೇತಿ ನಾತಿಪ್ರಸಂಗಃ ।''**

ಪರ್ವತೀಯವಹ್ನಿಯಲ್ಲಿರುವ ಸಂದಿಗ್ಧತ್ವ-ದ್ರವ್ಯತ್ವ-ಪ್ರಮೇಯತ್ವಾದಿ-ಧರ್ಮಗಳನ್ನು ಹೊರತುಪಡಿಸಿ, ಸಾಕ್ಷಾತ್ತಾಗಿ ವಹ್ನಿತ್ವಧರ್ಮದಿಂದಲೇ ಸಮಾನತ್ವವನ್ನು ವಿವಕ್ಷಿಸುತೇವೆ. ವಹ್ನಿತ್ವೇನ ವಹ್ನಿಸಮಾನಧರ್ಮ ಎಂದರೆ ಮತ್ತೊಂದು ವಹ್ನಿಯೇ ಆಗಬೇಕು.

ದ್ರವ್ಯತ್ವ-ಪ್ರಮೇಯತ್ವಾದಿಗಳು ವಹ್ನಿತ್ವೇನ ವಹ್ನಿಗೆ ಸಾಕ್ಷಾತ್ತಾಗಿ ಸಮಾನ-ವಾಗುವುದಿಲ್ಲವಾದ್ದರಿಂದ ಆ ದ್ರವ್ಯತ್ವ -ಪ್ರಮೇಯತ್ವಾದಿಗಳ ವಿವಕ್ಷೆಯಿಂದ ಪಕ-ವಿಪಕ್ಷಗಳಲ್ಲಿ ಅತಿವ್ಯಾಪ್ತಿ ಬರುವುದಿಲ್ಲ.

ಪರ್ವತೀಯವಹ್ನಿಗೆ ವಹ್ನಿತ್ವೇನ ಸಮಾನಧರ್ಮ ಎಂದರೆ ಮಹಾನಸೀಯವಹ್ನಿ ಆಗುತ್ತದೆ. ಅಂತಹ ಸಾಧ್ಯಸಮಾನಧರ್ಮವಿಶಿಷ್ಟತ್ವವು ಲಕ್ಷ್ಯವಾದ ಮಹಾನಸದಲ್ಲಿ ಬರುವುದರಿಂದ ಅಸಂಭವವೂ ಬರುವುದಿಲ್ಲ.

ಇನ್ನು ಪಕ್ಷವು ಸಾಧ್ಯಧರ್ಮದಿಂದಲೇ ವಿಶಿಷ್ಟವಾಗಿದೆ ಹೊರತು ಸಾಧ್ಯಸಮಾನಧರ್ಮದಿಂದ ವಿಶಿಷ್ಟವಾಗಿಲ್ಲ. ಹೀಗಾಗಿ ಪಕ್ಷದಲ್ಲಿಯೂ ಅತಿವ್ಯಾಪ್ತಿ ಬರುವುದಿಲ್ಲ.

ವಿಪಕ್ಷವು ಅಗ್ನ್ಯಭಾವ ಉಳ್ಳದ್ದಾದರೂ ವಹ್ನಿತ್ವೇನ ವಹ್ನಿಸಮಾನಧರ್ಮವಾದ ಯಾವ ವಹ್ನಿ ಉಳ್ಳದ್ದೂ ಆಗಿಲ್ಲವಾದ್ದರಿಂದ ವಿಪಕ್ಷದಲ್ಲಿಯೂ ಅತಿವ್ಯಾಪ್ತಿ ಬರುವುದಿಲ್ಲ.

ಆದ್ದರಿಂದ ಸಂದಿಗ್ಧತ್ವಾದಿಧರ್ಮಗಳನ್ನು ಹೊರತುಪಡಿಸಿ ಸಾಕ್ಷಾತ್ತಾಗಿ ವಹ್ನಿತ್ವೇನ ವಹ್ನಿಸಮಾನತ್ವವನ್ನು ವಿವಕ್ಷಿಸಿದ್ದರಿಂದ ಯಾವ ಅತಿಪ್ರಸಂಗವೂ ಇಲ್ಲ ಎಂದು ಭಾವ.

'ಧರ್ಮ' ಮೊದಲಾದ ಉಳಿದ ಪದಗಳ ಕೃತ್ಯವನ್ನು ಪಕ್ಷಲಕ್ಷಣ ತಿಳಿಯುವಾಗ ತಿಳಿದಂತೆ ತಿಳಿಯಬೇಕು.

**ಮೂಲ :- ಸಾಧ್ಯವಿಪರೀತಧರ್ಮವಿಶಿಷ್ಟೋ ವಿಪಕ್ಷಃ ।**

**ಟೀಕಾ :- ವಿಪರೀತೋ ವಿರುದ್ಧಃ । ಯಥಾ ಅಗ್ನಿಮತ್ವಸಾಧನೇ ನಿರಗ್ನಿಕತ್ವಮ್ । ತೇನ ಪಕ್ಷಸಪಕ್ಷಯೋರಪಿ ವ್ಯುದಾಸಃ ।**

**ಅನುವಾದ :-**

**ಮೂಲ :- ಸಾಧ್ಯವಿಪರೀತಧರ್ಮವಿಶಿಷ್ಟಃ ವಿಪಕ್ಷಃ ।**

**ಮೂಲಾರ್ಥ :-** ಸಾಧ್ಯವಿಪರೀತ(ವಿರುದ್ಧ)ವಾದ ಸಾಧ್ಯಸಮಾನಧರ್ಮ-ವಿಪರೀತ(ವಿರುದ್ಧ)ವಾದ ವಹ್ನ್ಯಭಾವರೂಪಧರ್ಮದಿಂದ ವಿಶಿಷ್ಟವಾದದ್ದು (ಹ್ರದವು) ವಿಪಕ್ಷ ಎನಿಸುತ್ತದೆ.

ವಿಪರೀತ ಎಂದರೆ ವಿರುದ್ಧ ಎಂದರ್ಥ. ಸಾಧ್ಯವಿಪರೀತಧರ್ಮ ಎಂದರೆ ಸಾಧ್ಯವಿರುದ್ಧಧರ್ಮ ಎಂದರ್ಥ. ಉದಾ - ಪರ್ವತದಲ್ಲಿ ವಹ್ನಿಯನ್ನು ಸಾಧಿಸುವಾಗ ಸಾಧ್ಯ ವಹ್ನಿ, ವಹ್ನಿವಿರುದ್ಧವಾದದ್ದು ಎಂದರೆ ವಹ್ನ್ಯಭಾವ. ಅಂತಹ ಸಾಧ್ಯವಿರುದ್ಧ ವಹ್ನ್ಯಭಾವರೂಪಧರ್ಮ ಉಳ್ಳ ಹ್ರದವು ವಿಪಕ್ಷ ಎನಿಸುತ್ತದೆ.

ಇಲ್ಲಿ ಸಾಧ್ಯವಿರುದ್ಧಧರ್ಮ, ಸಾಧ್ಯಸಮಾನಧರ್ಮವಿರುದ್ಧಧರ್ಮ ಎಂಬುದಾಗಿ ಎರಡನ್ನೂ ವಿವಕ್ಷಿಸಬೇಕು. ಅದರಿಂದ ಪಕ್ಷ-ಸಪಕ್ಷಗಳಲ್ಲಿ ಅತಿವ್ಯಾಪ್ತಿಪರಿಹಾರ-ವಾಗುತ್ತದೆ.

ಅಂದರೆ :- ಕೇವಲ 'ಸಾಧ್ಯಧರ್ಮವಿಶಿಷ್ಟಃ ವಿಪಕ್ಷಃ' ಎಂದಷ್ಟೇ ಹೇಳಿದರೆ ಪಕ್ಷವು ಸಾಧ್ಯಧರ್ಮವಿಶಿಷ್ಟವಾದ್ದರಿಂದ ಪಕ್ಷದಲ್ಲಿ ಅತಿವ್ಯಾಪ್ತಿ ಬರುತ್ತದೆ. ಅದಕ್ಕಾಗಿ 'ಸಾಧ್ಯವಿಪರೀತಧರ್ಮವಿಶಿಷ್ಟಃ' ಎಂದು ಹೇಳಬೇಕು. ಪಕ್ಷವು ಸಾಧ್ಯವಿಪರೀತಧರ್ಮ (ವಹ್ನ್ಯಭಾವ) ಉಳ್ಳದ್ದಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಬರುವುದಿಲ್ಲ.

ಇನ್ನು 'ಸಮಾನಧರ್ಮವಿಶಿಷ್ಟಃ ವಿಪಕ್ಷಃ' ಎಂದಷ್ಟೇ ಹೇಳಿದರೆ ಸಪಕ್ಷವು ಸಮಾನಧರ್ಮವಿಶಿಷ್ಟವಾಗಿರುವುದರಿಂದ ಸಪಕ್ಷದಲ್ಲಿ ಅತಿವ್ಯಾಪ್ತಿ ಬರುತ್ತದೆ. ಅದಕ್ಕಾಗಿ ಸಾಧ್ಯಸಮಾನಧರ್ಮವಿಪರೀತಧರ್ಮವಿಶಿಷ್ಟಃ ಎಂದು ಹೇಳಬೇಕು. ಸಪಕ್ಷವು ಸಮಾನಧರ್ಮವಿಶಿಷ್ಟವಾದರೂ ಸಮಾನಧರ್ಮವಿಪರೀತಧರ್ಮ(ವಹ್ನ್ಯಭಾವ)-ವಿಶಿಷ್ಟವಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಬರುವುದಿಲ್ಲ ಎಂದು ಅಭಿಪ್ರಾಯ.

**ಮೂಲ :- ಪಕ್ಷವಚನಂ ಪ್ರತಿಜ್ಞಾ ।**

**ಟೀಕಾ :- ನನ್ವೇವಂ ಸತಿ 'ಪಕ್ಷಃ' ಇತ್ಯಾದೇಃ ಪ್ರತಿಜ್ಞಾತ್ವಂ ಸ್ಯಾತ್ । ನ ಸ್ಯಾತ್ । ಯೇನಾಕಾರೇಣ ಯೋಽರ್ಥಃ ಪರಂ ಪ್ರತಿ ಜಿಜ್ಞಾಪಯಿಷಿತಃ ತಥಾ ತನ್ನಿರ್ದೇಶಸ್ಯ ವಿವಕ್ಷಿತತ್ವಾತ್ । ಅತ ಏವ ನ ನಿಗಮನೇ ಪ್ರಸಂಗಃ ।**

**ಅನುವಾದ :-**

**ಮೂಲ :- ಪಕ್ಷವಚನಂ ಪ್ರತಿಜ್ಞಾ ।**

**ಮೂಲಾರ್ಥ :-** ಪಕ್ಷವನ್ನು ತಿಳಿಸಿಕೊಡುವ ವಚನವು (ಪರ್ವತಸಂಬಂಧಿಯಾಗಿ ವಹ್ನಿಯನ್ನು ತಿಳಿಸಿಕೊಡುವ ವಾಕ್ಯವು) ಪ್ರತಿಜ್ಞಾ ಎನಿಸುತ್ತದೆ.

'ಪಕ್ಷವನ್ನು ತಿಳಿಸಿಕೊಡುವ ವಚನ ಪ್ರತಿಜ್ಞಾ' ಎನ್ನುವುದಾದರೆ, ಪಕ್ಷಃ ಎಂಬ ಪ್ರಥಮಾವಿಭಕ್ತ್ಯಂತವಾದ ಪದವೂ ಪಕ್ಷವನ್ನು ತಿಳಿಸಿಕೊಡುವುದರಿಂದ ಅಂತಹ ಪದದಲ್ಲಿ ಅತಿವ್ಯಾಪ್ತಿ ಬರುತ್ತದೆಯಲ್ಲವೇ ?

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಅತಿವ್ಯಾಪ್ತಿ ಬರುವುದಿಲ್ಲ. ಏಕೆಂದರೆ -ಯಾವ ಪರ್ವತಸಂಬಂಧಿತ್ವಾಕಾರದಿಂದ ಯಾವ ವಹ್ನ್ಯಾದಿರೂಪವಾದ ಅರ್ಥವು ಪರರಿಗೆ ತಿಳಿಸಲು ಇಷ್ಟವಾಗಿದೆಯೋ ಅಂತಹ ಪರ್ವತಸಂಬಂಧಿತ್ವರೂಪದಿಂದಲೇ ಪಕ್ಷನಿರ್ದೇಶ ಮಾಡುವುದು ಪಕ್ಷವಚನ ಪದದಿಂದ ವಿವಕ್ಷಿತವಾಗಿದೆ. ಅಂತಹ ಆಕಾರ ಎಂದರೆ - 'ಪರ್ವತೋ ವಹ್ನಿಮಾನ್' ಇತ್ಯಾದಿರೂಪವಾಗಿದೆ.

ಹೀಗೆ ವಿವಕ್ಷೆ ಮಾಡಿದ್ದರಿಂದ ಪಕ್ಷಃ ಎಂಬ ಪದಕ್ಕೆ ಪ್ರತಿಜ್ಞಾತ್ವ ಬರುವ ಪ್ರಸಕ್ತಿ ಇಲ್ಲ. ಕಾರಣ ವಹ್ನಿಯನ್ನು ತಿಳಿಯುವ ಜಿಜ್ಞಾಸೆ ಉಳ್ಳ ಪರನಿಗೆ ಪರ್ವತಸಂಬಂಧಿಯಾಗಿಯೇ ಪಕ್ಷತ್ವಾಕಾರವು ಜಿಜ್ಞಾಪಯಿಷಿತವಾಗಿದೆ. ಇನ್ನು ಕೆಲವೊಮ್ಮೆ 'ಪಕ್ಷಃ ಕಃ ?' ಎಂಬುದಾಗಿ ಪಕ್ಷತ್ವವೇ ಜಿಜ್ಞಾಸಿತವಾದಾಗ ಆಗ ಅವರನ್ನು ಕುರಿತು ''ಅಯಂ ಪಕ್ಷಃ'' ಎಂಬ ವಚನವೂ ಸಹ ಪ್ರತಿಜ್ಞಾ ಆಗಿಯೇ ಆಗುತ್ತದೆ ಎಂದು ಭಾವ.

ಪಕ್ಷವಚನಂ ಎನ್ನುವುದಕ್ಕೆ 'ಯೇನಾಕಾರೇಣ.....' ಇತ್ಯಾದಿಯಾಗಿ ವಿವಕ್ಷೆ ಮಾಡಿದ್ದರಿಂದಲೇ ನಿಗಮನದಲ್ಲಿ ಅತಿಪ್ರಸಂಗ ಬರುವುದಿಲ್ಲ.

ಅಂದರೆ - ಪಕ್ಷವಚನಂ ಎನ್ನುವುದಕ್ಕೆ 'ಯೇನಾಕಾರೇಣ ....' ಎಂಬ ಅಭಿಪ್ರಾಯವನ್ನು ವಿವಕ್ಷಿಸದಿದ್ದರೆ,

**'ತಸ್ಮಾತ್ ವಹ್ನಿಮಾನೇವ '**

ಎಂಬ ನಿಗಮನವೂ ಪಕ್ಷವಚನವಾಗಿರುವುದರಿಂದ (ಪಕ್ಷವನ್ನು ತಿಳಿಸಿಕೊಡುವ ವಾಕ್ಯವಾಗಿರುವುದರಿಂದ) ಪ್ರತಿಜ್ಞಾಲಕ್ಷಣಕ್ಕೆ ನಿಗಮನದಲ್ಲಿ ಅತಿವ್ಯಾಪ್ತಿ ಬರುತ್ತದೆ.

ಪಕ್ಷವಚನಂ ಎನ್ನುವುದಕ್ಕೆ 'ಯೇನಾಕಾರೇಣ......' ಎಂಬುದಾಗಿ ವಿವಕ್ಷಿಸಿದರೆ ಅತಿವ್ಯಾಪ್ತಿ ಬರುವುದಿಲ್ಲ. ಏಕೆಂದರೆ - ಯಾವ ಪರ್ವತಸಂಬಂಧಿತ್ವಾಕಾರದಿಂದ ಯಾವ ವಹ್ನಿರೂಪವಾದ ಅರ್ಥವು ಪರರಿಗೆ ಜಿಜ್ಞಾಪಯಿಷಿತವಾಗಿದೆಯೋ ಅಂತಹ ಪರ್ವತಸಂಬಂಧಿತ್ವರೂಪದಿಂದ ವಹ್ನಿನಿರ್ದೇಶ ಎನ್ನುವುದು ನಿಗಮನದಲ್ಲಿ ಇಲ್ಲ. ಕಿಂತು

**'ತಸ್ಮಾತ್ ಧೂಮವತ್ವಾತ್ ವಹ್ನಿಮಾನ್ '**

ಎಂಬುದಾಗಿ ಸಾಧನೋಪಲಕ್ಷಿತವಹ್ನಿಯೇ ಪರ್ವತಸಂಬಂಧಿಯಾಗಿ ನಿರ್ದಿಶ್ಯಮಾನವಾಗಿದೆ. ಆದರೆ ಸಾಧನೋಪಲಕ್ಷಿತವಾದ ವಹ್ನಿಯು ಜಿಜ್ಞಾಪಯಿಷಿತ-ವಾಗಿಲ್ಲ. ಕಿಂತು ಸಾಧನಅನುಪಲಕ್ಷಿತವಾದ ವಹ್ನಿಯೇ ಪರ್ವತಸಂಬಂಧಿಯಾಗಿ ಜಿಜ್ಞಾಪಯಿಷಿತವಾಗಿದೆ. ಆದ್ದರಿಂದ 'ಯೇನಾಕಾರೇಣ ...' ಇತ್ಯಾದಿಯಾಗಿ ವಿವಕ್ಷೆ ಮಾಡಿರುವುದರಿಂದ ಪ್ರತಿಜ್ಞಾಲಕ್ಷಣಕ್ಕೆ ನಿಗಮನದಲ್ಲಿ ಅತಿವ್ಯಾಪ್ತಿ ಬರುವುದಿಲ್ಲ ಎಂದು ಭಾವ.

**ಮೂಲ :- ಲಿಂಗಂ ಹೇತುಃ ।**

**ಟೀಕಾ :- ವ್ಯಾಪ್ತಿಬಲೇನ ಅರ್ಥಗಮಕಂ ಲಿಂಗಮ್ । ಯದ್ಯಪಿ ಹೇತುಶಬ್ದಃ ಸಾಧನತ್ವಾಭಿವ್ಯಂಜಕಲಿಂಗವಚನೇ ಪ್ರಸಿದ್ಧಃ । ತಥಾಪ್ಯರ್ಥ-ಸ್ಯೈವಾತ್ರ ವಿವಕ್ಷಿತತ್ವಾತ್ ತಲ್ಲಕ್ಷಣಮೇವೋಕ್ತಮಿತಿ ಅರ್ಥೇ ವರ್ತತೇ ।**

**ಅನುವಾದ :-** ವ್ಯಾಪ್ತಿಬಲದಿಂದ ಅರ್ಥವನ್ನು (ಸಾಧ್ಯವನ್ನು) ತಿಳಿಸಿಕೊಡುವುದು (ಸಾಧನವು) ಲಿಂಗ ಎನಿಸುತ್ತದೆ.

ಯದ್ಯಪಿ -

**ಲಿಂಗಸ್ಯ ವಚನಂ ಹೇತುಃ ಸಾಧಕತ್ವಪ್ರಕಾಶಕಮ್ ।**

ಎಂಬುದಾಗಿ ಹೇಳಿದಂತೆ ಸಾಧನತ್ವಾಭಿವ್ಯಂಜಕವಾದ ಪಂಚಮೀವಿಭಕ್ತ್ಯಂತವಾದ ಅಥವಾ ತೃತೀಯಾವಿಭಕ್ತ್ಯಂತವಾದ ವಚನವು (ಉದಾ- ಧೂಮಾತ್ ಎಂಬ ಪದವು) ಹೇತು ಎಂದು ಪ್ರಸಿದ್ಧವಾಗಿದೆ. ಆದರೂ ಸಹ ಈ ಗ್ರಂಥದಲ್ಲಿ ಹಿಂದೆ

**'' ಅಸಿದ್ಧೋ ಹೇತುಃ ''**

ಎಂಬುದಾಗಿ ದೃಶ್ಯತ್ವರೂಪವಾದ ಅರ್ಥದ ಅಸಿದ್ಧಿಯನ್ನೇ ಹೇಳಿದ್ದಾರೆ.

'' **ಹೇತುರಿತಿ ತದರ್ಥೋ ಲಿಂಗಮುಚ್ಯತೇ** ''

ಎಂದು ಅದಕ್ಕೆ ವ್ಯಾಖ್ಯಾನವನ್ನೂ ಮಾಡಲಾಗಿದೆ. ಹೀಗೆ ಇಲ್ಲಿ ಅರ್ಥವೇ ವಿವಕ್ಷಿತವಾಗಿರುವುದರಿಂದ ಲಕ್ಷಣಾವೃತ್ತಿಯನ್ನು ಆಶ್ರಯಿಸಿ (ಪ್ರತಿಪಾದ್ಯಪ್ರತಿಪಾದಕ-ಭಾವಸಂಬಂಧವನ್ನು ಲಕ್ಷಣಾಬೀಜವನ್ನಾಗಿ ವಿವಕ್ಷಿಸಿ) 'ಲಿಂಗಂ ಹೇತುಃ' ಎಂಬುದಾಗಿ ವಚನಾರ್ಥಕಹೇತುಶಬ್ದೋಪಲಕ್ಷಿತವಾದ ಅರ್ಥದ ಲಕ್ಷಣವನ್ನೇ ಹೇಳಿದ್ದಾರೆ ಎಂದು ಅಭಿಪ್ರಾಯ.

**ಮೂಲ :- ನಿದರ್ಶನಂ ದೃಷ್ಟಾಂತಃ ।**

**ಟೀಕಾ :- ನಿದರ್ಶ್ಯತೇ ಸಾಧ್ಯಸಾಧನಯೋಃ ಧರ್ಮಯೋಃ ವ್ಯಾಪ್ತಿಃ ಯಸ್ಮಿನ್ ತನ್ನಿದರ್ಶನಮ್ । ವ್ಯಾಪ್ತಿಗ್ರಹಣಸ್ಥಲಮಿತಿ ಯಾವತ್ । ತದ್ವಚನಮುದಾಹರಣಂ ಪ್ರಸಿದ್ಧಮೇವೇತಿ ।**

**ಅನುವಾದ :-** ಯಾವ ಸ್ಥಳದಲ್ಲಿ ಸಾಧ್ಯಧರ್ಮ-ಸಾಧನಧರ್ಮಗಳಲ್ಲಿ ವ್ಯಾಪ್ತಿಯು ತೋರಿಸಲ್ಪಡುವುದೋ ಅಂತಹ ಸ್ಥಳ ನಿದರ್ಶನ ಎನಿಸುತ್ತದೆ.

'' **ವ್ಯಾಪ್ತಿಸಂವೇದನಸ್ಥಾನಂ ದೃಷ್ಟಾಂತ ಇತಿ ಗೀಯತೇ ।** ''

ಎಂಬುದಾಗಿ ಹೇಳಿದಂತೆ ವ್ಯಾಪ್ತಿಗ್ರಹಣಸ್ಥಳಕ್ಕೆ ನಿದರ್ಶನ ಎಂದು ಕರೆಯುತ್ತಾರೆ.

ಉದಾ - 'ಯತ್ರ ಧೂಮಃ ತತ್ರ ವಹ್ನಿಃ ಯಥಾ ಮಹಾನಸಃ' ಎಂಬುದಾಗಿ ವಹ್ನಿ-ಧೂಮಗಳಿಗೆ ವ್ಯಾಪ್ತಿಯನ್ನು ಮಹಾನಸದಲ್ಲಿ ತೋರಿಸುವುದರಿಂದ ಮಹಾನಸವು ನಿದರ್ಶನವಾಗುತ್ತದೆ.

ಹೌದು, ಆಚಾರ್ಯರು ಉದಾಹರಣದ ಲಕ್ಷಣವನ್ನು ಹೇಳಬೇಕಿತ್ತು .

**'ಯದಿತ್ಥಂ ತತ್ತಥಾ ಯಥಾ ಸಂಪ್ರತಿಪನ್ನಮ್'**

ಎಂಬುದಾಗಿ ಉದಾಹರಣವನ್ನೂ ವ್ಯವಹರಿಸಿದ್ದರಿಂದ ಉದಾಹರಣದ ಲಕ್ಷಣವನ್ನೂ ಹೇಳಬೇಕಿತ್ತಲ್ಲವೇ ? ನಿದರ್ಶನದ ಲಕ್ಷಣವನ್ನು ಹೇಳಿ ಉದಾಹರಣದ ಲಕ್ಷಣವನ್ನು ಹೇಳದ ಕಾರಣ ನ್ಯೂನತಾ ಬರುತ್ತದೆ !

ಈ ರೀತಿಯಾಗಿ ಶಂಕೆ ಬಂದರೆ, ಅದಕ್ಕೆ ಟೀಕಾಕೃತ್ಪಾದರು ಹೇಳಿದರು -

**''ತದ್ವಚನಂ ಉದಾಹರಣಂ ಪ್ರಸಿದ್ಧಮೇವ ।''**

ಅಂದರೆ -

**ದ್ವಿಧೋದಾಹರಣಂ ಸಮ್ಯಗ್ವ್ಯಾಪ್ತಿನಿರ್ದೇಶಪೂರ್ವಕಮ್ ।**
**ದೃಷ್ಟಾಂತವಚನಂ ತತ್‌ಸ್ಯಾತ್....**

ಎಂಬುದಾಗಿ ಹೇಳಿದಂತೆ ಸಮ್ಯಕ್ ವ್ಯಾಪ್ತಿನಿರ್ದೇಶಪೂರ್ವಕವಾಗಿ ದೃಷ್ಟಾಂತವಚನವು ಉದಾಹರಣ ಎನಿಸುತ್ತದೆ. ಹೀಗಾಗಿ ದೃಷ್ಟಾಂತಲಕ್ಷಣವನ್ನು ಹೇಳುವದರಿಂದಲೇ ಉದಾಹರಣೆಯ ಲಕ್ಷಣವನ್ನೂ ಪ್ರಾಯಃ ಹೇಳಿದಂತೆಯೇ ಆಗುತ್ತದೆ. ಆದ್ದರಿಂದ ನ್ಯೂನ್ಯತಾ ಬರುವುದಿಲ್ಲ ಎಂದು ಅಭಿಪ್ರಾಯ.

**ಟೀಕಾ :- ಯತ್ಪ್ರಸಾದಾತ್ ಯತ್ಪ್ರೀತ್ಯೈವ ಚ ಇದಂ ಪ್ರಕರಣಂ ಕೃತವಾಂಸ್ತಮೇವಾಚಾರ್ಯೋಽಂತೇ ಸ್ತುತಿಪ್ರಣಾಮಾಭ್ಯಾಂ ಪ್ರೀಣಯತಿ -**

**ಯೋ ದೃಶ್ಯತೇ ಸದಾನಂದನಿತ್ಯವ್ಯಕ್ತಚಿದಾತ್ಮನಾ ।**
**ನಿರ್ದೋಷಾಖಿಲಕಲ್ಯಾಣಗುಣಂ ವಂದೇ ರಮಾಪತಿಮ್ ॥**

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ
ಪ್ರಪಂಚಮಿಥ್ಯಾತ್ವಾನುಮಾನಖಂಡನಂ ಸಂಪೂರ್ಣಮ್ ॥

**ದೃಶ್ಯತೇ ಇತ್ಯನೇನ 'ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ' ಇತ್ಯಾದಿಶ್ರುತಿಂ ಸೂಚಯತಿ । ತೇನ ಯದುಕ್ತಂ 'ಆತ್ಮನೋಽಪಿ ದೃಶ್ಯತ್ವಾತ್' ಇತಿ ತದುಪಪಾದಿತಂ ಭವತಿ ।**

**ಅನುವಾದ :-** ಶ್ರೀಮದಾಚಾರ್ಯರು ಯಾವ ಭಗವಂತನ ಪ್ರಸಾದದಿಂದ (ಅನುಗ್ರಹದಿಂದ) ಮತ್ತು ಯಾವ ಭಗವಂತನ ಪ್ರೀತಿಗಾಗಿ ಈ 'ಪ್ರಪಂಚಮಿಥ್ಯಾತ್ವಾನುಮಾನಖಂಡನ' ಎಂಬ ಪ್ರಕರಣವನ್ನು ರಚಿಸಿದರೋ ಅಂತಹ ಭಗವಂತನನ್ನು ಸ್ತೋತ್ರ - ನಮಸ್ಕಾರಗಳಿಂದ ಸಂತೋಷಪಡಿಸುತ್ತಾರೆ -

**ಮೂಲ :- ಯೋ ದೃಶ್ಯತೇ ಸದಾನಂದನಿತ್ಯವ್ಯಕ್ತಚಿದಾತ್ಮನಾ ।**
**ನಿರ್ದೋಷಾಖಿಲಕಲ್ಯಾಣಗುಣಂ ವಂದೇ ರಮಾಪತಿಮ್ ॥**

**ಮೂಲಾರ್ಥ :-** ಯಃ = ಯಾವ ಪರಮಾತ್ಮನು, ಸದಾನಂದನಿತ್ಯವ್ಯಕ್ತ-ಚಿದಾತ್ಮನಾ = ನಿರ್ದೋಷ ನಿತ್ಯವ್ಯಕ್ತ ಜ್ಞಾನ-ಆನಂದಾತ್ಮಕವಾದ, ಚಿದ್ರೂಪವಾದ ದೇಹ-ಇಂದ್ರಿಯಗಳುಳ್ಳವನಾಗಿ ದೃಶ್ಯತೇ = ಅಪರೋಕ್ಷಜ್ಞಾನದಲ್ಲಿ ತೋರುವನೋ ತಂ=ಅಂತಹ, ನಿರ್ದೋಷಾಖಿಲಕಲ್ಯಾಣಗುಣಂ = ನಿರ್ದೋಷವಾದ ಕಲ್ಯಾಣವಾದ (ಪರಿಪೂರ್ಣವಾದ - ಒಂದೊಂದು ಗುಣವೂ ಪ್ರತ್ಯೇಕ ಪ್ರತ್ಯೇಕವಾಗಿ ಅನಂತ ಎಂಬ ಆನಂತ್ಯ ಉಳ್ಳ) ಗುಣಗಳಿಂದ ವಿಶಿಷ್ಟನಾದ, ರಮಾಪತಿಂ=ಲಕ್ಷ್ಮೀಪತಿಯಾದ ಆ ಪರಮಾತ್ಮನನ್ನು ವಂದೇ = ನಮಸ್ಕರಿಸುತ್ತೇನೆ.

ಮೂಲದಲ್ಲಿ 'ದೃಶ್ಯತೇ ' ಎಂದು ಹೇಳುವುದರಿಂದ 'ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ' 'ಆತ್ಮಾ ವಾ ಅರೇ ದ್ರಷ್ಟವ್ಯಃ' ಇತ್ಯಾದಿ ಶ್ರುತಿಯನ್ನು ಸೂಚಿಸುತ್ತಿದ್ದಾರೆ ಆಚಾರ್ಯರು. ಹೀಗೆ ಶ್ರುತಿಸೂಚನೆ ಮಾಡುವುದರಿಂದ 'ಆತ್ಮನೋಽಪಿ ದೃಶ್ಯತ್ವಾತ್' ಎಂಬುದಾಗಿ ಹಿಂದೆ ಆತ್ಮನಿಗೆ ಏನು ದೃಶ್ಯತ್ವವನ್ನು ಹೇಳಿದರೋ ಅದನ್ನು ಶ್ರುತಿಸಮ್ಮತಿಯಿಂದ ಉಪಪಾದನೆ ಮಾಡಿದಂತಾಗುತ್ತದೆ.

ಇಲ್ಲಿ ''ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ'' ಎಂಬ ಶ್ರುತಿಗೆ ಅಗ್ರ್ಯಯಾ = ಶ್ರವಣಮನನ ಸಹಕೃತವಾದ ಬುದ್ಧ್ಯಾ = ಧ್ಯಾನದಿಂದ ದೃಶ್ಯತೇ = ಅಪರೋಕ್ಷೀಕರಿಸಿಕೊಳ್ಳಲ್ಪಡುತ್ತಾನೆ. ಅಥವಾ ಬುದ್ಧ್ಯಾ ದೃಶ್ಯತೇ = ಅಪರೋಕ್ಷಜ್ಞಾನದಿಂದ ವಿಷಯೀಕರಿಸಲ್ಪಡುತ್ತಾನೆ ಎಂಬುದಾಗಿ ಅರ್ಥ ತಿಳಿಯಬೇಕು.

**ಟೀಕಾ :- ದೃಶ್ಯತೇ ಚೇದ್ರೂಪಾದಿಮತ್ತ್ವೇನಾನಿತ್ಯತ್ವಂ ಪ್ರಸಜ್ಯೇತೇತಿ ಚೇನ್ನ । ನಿರ್ದೋಷಾನಂದನಿತ್ಯಾಭಿವ್ಯಕ್ತಜ್ಞಾನಾತ್ಮಕತ್ವೇನ ಅಜಡತ್ವಾತ್ । ತದಾಹ ಸದಾನಂದೇತಿ ।**

**ಇತ್ಥಭೂತಲಕ್ಷಣೇ ತೃತೀಯಾ ।**

**ನ ಕೇವಲಂ ನಿರ್ದೋಷಾನಂದಚಿದಾತ್ಮಕಃ । ನಾಪ್ಯಭೇದಾತ್ ಗುಣಗುಣಿಭಾವಾಭಾವ ಇತ್ಯುಕ್ತಂ ನಿರ್ದೋಷೇತಿ । ಕಲ್ಯಾಣತ್ವಂ ಪರಿಪೂರ್ಣತ್ವಾದಿನಾ । ರಮಾಪತಿಮಿತ್ಯನೇನ ಭಗವತೀ ಚಾಪಿ ವಂದಿತಾ ಭವತೀತಿ।**

**ಉತ್ಪತ್ತಿಸ್ಥಿತಿಭಂಗಂ ವಿಶ್ವಂ ಯಸ್ಮಾತ್ ಪ್ರಪದ್ಯತೇ ಪುರುಷಾತ್ ।**
**ಸ ಜಯತಿ ಜಗತಾಮಂತರ್ಯಾಮೀ ಸ್ವಾಮೀ ರಮಾನಾಥಃ ॥**

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ-
ಪ್ರಪಂಚಮಿಥ್ಯಾತ್ವಾನುಮಾನಖಂಡನವಿವರಣಂ
ಜಯತೀರ್ಥಭಿಕ್ಷುವಿರಚಿತಂ ಸಂಪೂರ್ಣಮ್ ॥

**ಅನುವಾದ :-** ಭಗವಂತನು ಶರೀರ - ಇಂದ್ರಿಯಗಳುಳ್ಳವನಾಗಿ ದೃಶ್ಯನಾಗುತ್ತಾನೆ ಎಂದಾದರೆ ಅವನಿಗೆ ಮರಣವು ಪ್ರಸಕ್ತವಾಗುವುದಲ್ಲವೇ ? ಅಂದರೆ - ಭಗವಂತನು ದೃಶ್ಯನಾಗಿದ್ದಾನೆ ಎಂದು ಹೇಳುವುದರಿಂದ ಶರೀರ-ಇಂದ್ರಿಯಗಳು ಇವೆ ಎಂದು ಸಿದ್ಧವಾಗುತ್ತದೆ. ಜಡಶರೀರ-ಇಂದ್ರಿಯಗಳು ಅನಿತ್ಯತ್ವವನ್ನು ತಂದುಕೊಡುವುದಾಗಿ ಜೀವರಲ್ಲಿ ಕಂಡಿದ್ದರಿಂದ, ಭಗವಂತನಿಗೂ ಶರೀರ - ಇಂದ್ರಿಯಗಳು ಇರುವುದಾದರೆ ಅನಿತ್ಯನಾಗಬೇಕಾಗುತ್ತದೆಯಲ್ಲವೇ ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ - ಜಡವಾದ ಶರೀರ - ಇಂದ್ರಿಯಗಳೇ ಅನಿತ್ಯತ್ವಾಪಾದಕವಾಗಿ (ಜೀವರಲ್ಲಿ) ಕಂಡಿದೆ. ಪ್ರಕೃತ ಭಗವಂತನ ಶರೀರ - ಇಂದ್ರಿಯಗಳು ಜಡವಾದದ್ದಲ್ಲ. ಕಿಂತು -

**''ಯದಾತ್ಮಕೋ ಭಗವಾಂಸ್ತದಾತ್ಮಿಕಾ ವ್ಯಕ್ತಿಃ । ಕಿಮಾತ್ಮಕೋ ಭಗವಾನ್ । ಜ್ಞಾನಾತ್ಮಕಃ ಐಶ್ವರ್ಯಾತ್ಮಕಃ ಸುಖಶಕ್ತ್ಯಾತ್ಮಕಃ ।''**

ಎಂಬುದಾಗಿ ಶ್ರುತಿಯು ಹೇಳುವಂತೆ ಜ್ಞಾನಾನಂದಾತ್ಮಕವಾಗಿದೆ. ಭಗವಂತನಿಂದ ಅಭಿನ್ನವಾಗಿವೆ. ಚೇತನರೂಪವಾಗಿವೆ. ಹೊರತು ಜಡವಾದದ್ದಲ್ಲ. ಅಂತಹ ಜ್ಞಾನಾನಂದಾದ್ಯಾತ್ಮಕವಾದ ಶರೀರ-ಇಂದ್ರಿಯಗಳು ಅನಿತ್ಯತ್ವಾಪಾದಕವಾಗುವುದಿಲ್ಲ-ವಾದ್ದರಿಂದ ಭಗವಂತನಿಗೆ ಅನಿತ್ಯತ್ವ (ಮರಣ)ದ ಪ್ರಸಕ್ತಿ ಇಲ್ಲ. ಅದನ್ನು ಆಚಾರ್ಯರು ಹೇಳಿದರು -

**''ಸದಾನಂದನಿತ್ಯವ್ಯಕ್ತಚಿದಾತ್ಮನಾ ದೃಶ್ಯತೇ ''**

ಎಂಬುದಾಗಿ ಎಂದು ಭಾವ.

ಹೌದು, 'ಕರ್ತೃಕರಣಯೋಸ್ತೃತೀಯಾ'' ಎಂಬ ಸೂತ್ರದಿಂದ ಕರ್ತ್ರರ್ಥದಲ್ಲಿ ಹಾಗೂ ಕರಣಾರ್ಥದಲ್ಲಿ ತೃತೀಯಾ ವಿಹಿತವಾಗಿದೆ. 'ವ್ಯಾಸೇನ ಕೃತಂ' 'ಬಾಣೇನ

ಹತಃ' ಇತ್ಯಾದಿಗಳು ಉದಾಹರಣೆ. ಪ್ರಕೃತದಲ್ಲಿ ಚಿದಾತ್ಮಕತ್ವಕ್ಕೆ ಕರ್ತೃತ್ವವೂ ಇಲ್ಲ ಕರಣತ್ವವೂ ಇಲ್ಲ ಎಂದಮೇಲೆ 'ಚಿದಾತ್ಮನಾ' ಎಂದು ತೃತೀಯಾವಿಭಕ್ತಿಯಿಂದ ಪ್ರಯೋಗ ಹೇಗೆ ?

ಈ ಪ್ರಶ್ನೆಗೆ ಶ್ರೀಮಟ್ಟೀಕಾಕೃತ್ಪಾದರು ಉತ್ತರ ಹೇಳಿದರು -

**'' ಇತ್ಥಂಭೂತಲಕ್ಷಣೇ ತೃತೀಯಾ ''**

ಎಂದು. ಅದರ ಅಭಿಪ್ರಾಯ ಇಷ್ಟು :-

**''ಕಂಚನ ಪ್ರಕಾರಂ ಪ್ರಾಪ್ತಃ ಇತ್ಥಂಭೂತಃ । ತಲ್ಲಕ್ಷಣೇ ತದ್ಜ್ಞಾಪಕೇ ತೃತೀಯಾ ಸ್ಯಾತ್ । ಯಥಾ ಛಾತ್ರೇಣ ಉಪಾಧ್ಯಾಯಮದ್ರಾಕ್ಷೀತ್ ।''**

ಅದರರ್ಥ - ಯಾವುದಾದರೂ ಒಂದು ಪ್ರಕಾರವನ್ನು ಹೊಂದಿದವನು ಇತ್ಥಂಭೂತ. ಅಂತಹ ಪ್ರಕಾರವನ್ನು ತಿಳಿಸುವುದಕ್ಕೆ ತೃತೀಯಾ ಬರುತ್ತದೆ. ಉದಾಹರಣೆಗೆ :- 'ಛಾತ್ರೇಣ ಉಪಾಧ್ಯಾಯಮದ್ರಾಕ್ಷೀತ್' ಎನ್ನುವಲ್ಲಿ ಶಿಷ್ಯರ ಎದುರಿನಲ್ಲಿ ಗುರುಗಳು ಪಾಠ ಹೇಳಲು ಕುಳಿತಿರುವಾಗ, ಅಲ್ಲಿ ಉಪಾಧ್ಯಾಯರು ಯಾರು ಎಂಬ ಜಿಜ್ಞಾಸೆ ಉಂಟಾಗಿ, ಉಪಾಧ್ಯಾಯತ್ವ ಎಂಬ ಪ್ರಕಾರವು ಇತರರಲ್ಲಿ (ಶಿಷ್ಯರಲ್ಲಿ) ಪ್ರಸಕ್ತವಾದಾಗ ಆ ಪ್ರಸಕ್ತಿಯನ್ನು ಪರಿಹರಿಸುವುದಕ್ಕಾಗಿ ಆ ಉಪಾಧ್ಯಾಯತ್ವವನ್ನು ತಿಳಿಸುವ ಛಾತ್ರಶಬ್ದಕ್ಕೆ ತೃತೀಯಾ ಬರುತ್ತದೆ. 'ಛಾತ್ರೇಣ ಉಪಾಧ್ಯಾಯಮದ್ರಾಕ್ಷೀತ್ ।'

ಅದರಂತೆ ಪ್ರಕೃತದಲ್ಲಿಯೂ ದೃಶ್ಯತೇ ಎಂದು ಹೇಳಿದ ದರ್ಶನಕ್ರಿಯಾವಿಷಯತ್ವ ಎನ್ನುವ ಪ್ರಕಾರವನ್ನು ಹೊಂದಿದ ರಮಾಪತಿಯು ಇತ್ಥಂಭೂತ. ಅವನಲ್ಲಿ ದರ್ಶನವಿಷಯತ್ವ ಯಾವ ರೀತಿಯಿಂದ ? ನಿರ್ಗುಣತ್ವೇನ ದರ್ಶನವಿಷಯತ್ವವೋ ಅಥವಾ ಬೇರೆ ಆಕಾರದಿಂದ ದರ್ಶನವಿಷಯತ್ವವೋ ಎಂದು ಶಂಕೆ ಬಂದಾಗ, ದರ್ಶನವಿಷಯತ್ವ ಎಂಬ ಪ್ರಕಾರವನ್ನು ತಿಳಿಸುವುದು ಚಿದಾತ್ಮಕತ್ವ. ಅದಕ್ಕೆ ತೃತೀಯಾ ಬರುತ್ತದೆ. ಹೀಗಾಗಿ ''ಚಿದಾತ್ಮನಾ ದೃಶ್ಯತೇ'' ಎಂದು ಹೇಳಿದ್ದು ಇತ್ಥಂಭೂತಲಕ್ಷಣೇ ತೃತೀಯಾ ಎಂದು ಅಭಿಪ್ರಾಯ.

ಭಗವಂತನು ನಿರ್ದೋಷವಾದ ಆನಂದ, ನಿರ್ದೋಷವಾದ ಜ್ಞಾನ, ಈ ಗುಣದ್ವಯಾತ್ಮಕನಾಗಿದ್ದಾನೆ ಅಷ್ಟೇ (ನಿರ್ದೋಷಜ್ಞಾನ, ನಿರ್ದೋಷ ಆನಂದ, ಹೀಗೆ

ಎರಡು ಗುಣಗಳು ಮಾತ್ರ ಭಗವಂತನಲ್ಲಿ ಇವೆ) ಎಂದು ತಿಳಿಯಬೇಡಿ. ಕಿಂತು ನಿರ್ದೋಷ ಸಕಲಗುಣಪರಿಪೂರ್ಣನಾಗಿದ್ದಾನೆ ಎಂದು ತಿಳಿಯಿರಿ ಎಂಬ ತತ್ತ್ವವನ್ನು

**'ನಿರ್ದೋಷ ಅಖಿಲಕಲ್ಯಾಣಗುಣಂ '**

ಎಂಬುದಾಗಿ ಅಖಿಲಶಬ್ದಪ್ರಯೋಗ ಮಾಡುವ ಮೂಲಕ ಸೂಚಿಸುತ್ತಿದ್ದಾರೆ ಆಚಾರ್ಯರು.

ಮತ್ತು ಚಿದಾತ್ಮನಾ ಎಂದು ಹೇಳಿದ್ದರಿಂದ ಭಗವಂತನಿಗೂ ಅವನ ಗುಣಗಳಿಗೂ ಅಭೇದವಿದೆ ಎಂದು ತಿಳಿಯುತ್ತದೆ. ಹೀಗೆ ಭಗವಂತನಿಗೂ ಅವನ ಗುಣಗಳಿಗೂ ಅಭೇದ ಇರುವುದರಿಂದ ಎರಡರಲ್ಲಿ ಗುಣ-ಗುಣಿಭಾವ ಇಲ್ಲ ಎಂದು ತಿಳಿಯಬೇಡಿ ಎಂಬ ತತ್ತ್ವವನ್ನೂ ಸಹ -

**'ಅಖಿಲಕಲ್ಯಾಣಗುಣಂ'**

(ಕಲ್ಯಾಣಾಃ ಗುಣಾಃ ಯಸ್ಯ ಸಃ ಕಲ್ಯಾಣಗುಣಃ ತಂ) ಎಂಬುದಾಗಿ ಬಹುವ್ರೀಹಿ ಸಮಾಸದ ಮೂಲಕ ತಿಳಿಸುತ್ತಿದ್ದಾರೆ. ಅಂದರೆ - ಭಗವಂತ, ಅವನ ಗುಣಗಳು ಎರಡರಲ್ಲಿ ಅಭೇದ ಇದ್ದರೂ ಸಹ ಭೇದಕಾರ್ಯಕಾರೀ ಆದ ವಿಶೇಷ ಏನಿದೆ ಆ ವಿಶೇಷದ ಬಲದಿಂದಾಗಿ ಭಗವಂತನ - ಅವನ ಗುಣಗಳ ನಡುವೆ ಗುಣ-ಗುಣಿಭಾವವು ಯುಕ್ತವೇ ಆಗಿದೆ ಎಂದು ಅಭಿಪ್ರಾಯ.

'ಅಖಿಲಕಲ್ಯಾಣಗುಣಂ' ಎಂದು ಹೇಳುವಾಗ 'ಕಲ್ಯಾಣವಾದ ಗುಣಗಳು' ಎಂದು ಹೇಳುತ್ತಿದ್ದೀರಿ. ಇಲ್ಲಿ ಗುಣಗಳು ಕಲ್ಯಾಣವಾಗಿವೆ ಎಂದರೆ ಏನು ಅರ್ಥ ? ಎಂಬ ಶಂಕೆಗೆ ಸಮಾಧಾನ ಹೇಳುತ್ತಾರೆ -

**'ಕಲ್ಯಾಣತ್ವಂ ಪರಿಪೂರ್ಣತ್ವಾದಿನಾ'**

ಎಂಬುದಾಗಿ. ಅಂದರೆ - ಪರಿಪೂರ್ಣವಾಗಿವೆ ಎಂದರೆ ಪ್ರತ್ಯೇಕ ಪ್ರತ್ಯೇಕವಾಗಿ ಅಪರಿಚ್ಛಿನ್ನವಾಗಿವೆ ಮತ್ತು ಭಗವತ್ಸ್ವರೂಪವಾಗಿವೆ ಎಂದು ಅರ್ಥ.

**ಪ್ರತ್ಯೇಕಶೋ ಗುಣಾನಾಂ ತು ನಿಸ್ಸೀಮತ್ವಮುದೀರ್ಯತೇ ।**
**ತದಾನಂತ್ಯಂ ಹಿ ಗುಣತಸ್ತೇ ಚಾನಂತಾ ಹಿ ಸಂಖ್ಯಯಾ ॥**

ಎಂಬುದಾಗಿ ಹೇಳಿದಂತೆ, ಗುಣಗಳಿಗೆ ಸಂಖ್ಯೆಯಿಂದ ಆನಂತ್ಯವನ್ನು 'ಅಖಿಲ' ಎಂಬುವುದರಿಂದ ಹೇಳಿದ್ದರಿಂದ, ಗುಣಗಳು ಪ್ರತ್ಯೇಕ ಪ್ರತ್ಯೇಕವಾಗಿ ಒಂದೊಂದು ಗುಣವೂ ನಿಸ್ಸೀಮವಾಗಿವೆ = ಅನಂತವಾಗಿವೆ ಎಂಬ ಗುಣತಃ ಆನಂತ್ಯವೇನಿದೆ ಅದನ್ನು ಕಲ್ಯಾಣಶಬ್ದದಿಂದ ತಿಳಿಸುತ್ತಿದ್ದಾರೆ ಎಂದು ಭಾವ.

ಸಕಲವಾಙ್ಮನಸದೇವತೆಯಾದ್ದರಿಂದ ಮಹಾಲಕ್ಷ್ಮೀದೇವಿಯ ನಮಸ್ಕಾರ ಗ್ರಂಥದ ಆರಂಭದಲ್ಲಿ ಹೇಗೆ ಆವಶ್ಯಕವೋ ಅದರಂತೆಯೇ ಗ್ರಂಥದ ಅಂತ್ಯದಲ್ಲಿಯೂ ಆವಶ್ಯಕವೇ ಆಗಿದೆ. ಹಾಗೆಂದು ಮಹಾಲಕ್ಷ್ಮೀದೇವಿಯನ್ನು ಪ್ರತ್ಯೇಕವಾಗಿಯೂ (ಭಗವಂತನನ್ನು ಬಿಟ್ಟು ಸ್ವತಂತ್ರವಾಗಿಯೂ) ನಮಿಸುವಂತಿಲ್ಲ. ಅದಕ್ಕಾಗಿ ಆಚಾರ್ಯರು -

**'ರಮಾಪತಿಂ ವಂದೇ'**

ಎಂಬುದಾಗಿ ಲಕ್ಷ್ಮೀವಿಶಿಷ್ಟನಾದ ಭಗಂತನಿಗೆ ನಮಸ್ಕಾರ ಮಾಡಿದ್ದಾರೆ.

**''ವಿಶಿಷ್ಟಸ್ಯ ಯತ್ ಭವತಿ ವಿಶೇಷಣಸ್ಯಾಪಿ ತತ್ ಭವತಿ''**

(ವಿಶಿಷ್ಟವಾದದ್ದಕ್ಕೆ ಏನು ಹೇಳುತ್ತೇವೆಯೋ ಅದು ವಿಶೇಷಣಕ್ಕೂ ಅನ್ವಯಿಸುತ್ತದೆ) ಎಂಬ ನಿಯಮಪ್ರಕಾರ ಲಕ್ಷ್ಮೀವಿಶಿಷ್ಟನಾದ ಭಗವಂತನಿಗೆ ನಮಸ್ಕಾರ ಮಾಡಿದರೆ ವಿಶೇಷಣಗಳಾದ ಮಹಾಲಕ್ಷ್ಮೀದೇವಿಗೂ ನಮಸ್ಕಾರ ಸಲ್ಲುತ್ತದೆ ಎಂಬ ಅಭಿಪ್ರಾಯದಿಂದ ರಮಾಪತಿಗೆ ನಮಸ್ಕಾರ ಮಾಡಿದ್ದಾರೆ ಆಚಾರ್ಯರು ಎಂದು ಅಭಿಪ್ರಾಯ.

ಶ್ರೀಮಟ್ಟೀಕಾಕೃತ್ಪಾದರು ತಾವು ಬರೆಯುತ್ತಿರುವ ''ಪ್ರಪಂಚಮಿಥ್ಯಾತ್ವಾನು-ಮಾನಖಂಡನಟೀಕಾ'' ಗ್ರಂಥವನ್ನು ಸಮಾಪ್ತಿಗೊಳಿಸಿದವರಾಗಿ ಗ್ರಂಥದ ಕೊನೆಯಲ್ಲಿಯೂ ಸಹ ಮಂಗಲವನ್ನು ಆಚರಿಸುತ್ತಾರೆ -

**ಟೀಕಾ :- ಉತ್ಪತ್ತಿಸ್ಥಿತಿಭಂಗಂ ವಿಶ್ವಂ ಯಸ್ಮಾತ್ ಪ್ರಪದ್ಯತೇ ಪುರುಷಾತ್ ।**
**ಸ ಜಯತಿ ಜಗತಾಮಂತರ್ಯಾಮೀ ಸ್ವಾಮೀ ರಮಾನಾಥಃ ॥**

ಸತ್ಯಜಗದುದಯಾದಿನಿಮಿತ್ತಕಾರಣತ್ವರೂಪವಾದ ಪರಬ್ರಹ್ಮಲಕ್ಷಣವನ್ನು 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಿಂದ ವ್ಯಾಸರು ಏನು ಹೇಳಿದರೋ ಅದನ್ನು

ಪರರು ಹೇಳುವ ಪ್ರಪಂಚಮಿಥ್ಯಾತ್ವಪ್ರಮಾಣಗಳಿಗೆ ಆಭಾಸತ್ವವನ್ನು ಹೇಳುವುದರಿಂದ ಸಮರ್ಥಿಸಲಾಯಿತು. ಅಂತಹ ಜಗದುದಯಾದಿನಿಮಿತ್ತಕಾರಣತ್ವಲಕ್ಷಣವನ್ನು ಮನಸ್ಸಿನಲ್ಲಿಟ್ಟುಕೊಂಡು ಸ್ತುತಿಸುತ್ತಾರೆ -

ವಿಶ್ವಂ = ಜಗತ್ತು, ಉತ್ಪತ್ತಿಸ್ಥಿತಿಭಂಗಂ = ಉತ್ಪತ್ತಿ ಸ್ಥಿತಿ ಸಂಹಾರಗಳನ್ನು ಯಸ್ಮಾತ್ ಪುರುಷಾತ್ = ಯಾವ ಭಗವಂತನಿಂದ ಪ್ರಪದ್ಯತೇ = ಪಡೆಯುತ್ತದೆಯೋ ಸಃ = ಅಂತಹ ಜಗತಾಮಂತರ್ಯಾಮೀ = ಜಗತ್ತಿನೆಲ್ಲೆಡೆ ಅಂತರ್ಯಾಮಿಯಾಗಿ ಇರುವ ಸ್ವಾಮೀ = ಸರ್ವಸ್ವಾಮಿಯಾದ ರಮಾನಾಥಃ = ಲಕ್ಷ್ಮೀಪತಿಯಾದ ಭಗವಂತನು ಜಯತಿ = ಉತ್ಕೃಷ್ಟನಾಗಿದ್ದಾನೆ.

॥ ಶ್ರೀಕೃಷ್ಣಾರ್ಪಣಮಸ್ತು ॥
॥ ಶ್ರೀಮಧ್ವೇಶಾರ್ಪಣಮಸ್ತು ॥
॥ ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಲಮ್ ॥

॥★★★॥



## ಶ್ರೀಸತ್ಯಾತ್ಮತೀರ್ಥರ ಪ್ರವಚನ ಸಂಗ್ರಹ ಕೃತಿಗಳು

1) ಜಿಜ್ಞಾಸೆ
2) ಸತ್ಯಾತ್ಮಸುಧಾ
3) ಧೀಮಹಿ
4) ವೈಷ್ಣವ
5) ಬಹುಚಿತ್ರಜಗತ್
6) ಗೋವಿಂದ
7) ಕಾಡ್ಗಿಚ್ಚು ಕುಡಿದ ಕೃಷ್ಣ
8) ಕೃಷ್ಣ ಏಕೆ ಮಣ್ಣು ತಿಂದ ?
9) ರಾಮಾಯಣಸಂದೇಶ ಭಾಗ-1
10) ರಾಮಾಯಣಸಂದೇಶ ಭಾಗ-2
11) ಅಂಬುಜೇಕ್ಷಣ
12) ಸ್ವಯಂಭೂ
13) ಆತ್ಮಲಹರಿ
14) ಪರಂಜ್ಯೋತಿ
15) ಭಾಗವತ ಚತುರ್ಥಸ್ಕಂಧ (ಸಹ ಸಂಪಾದನೆ)

## ಸ್ವತಂತ್ರ ಕೃತಿಗಳು

16) ಕರ್ಮಸಮರ್ಪಣೆ
17) ಮಾತೊಂದು ಮಾಣಿಕ್ಯ
18) ಮತತ್ರಯರೀತ್ಯಾ ಬಿಂಬಪ್ರತಿಬಿಂಬಭಾವಸಮೀಕ್ಷಾ (ಸಂಶೋಧನಗ್ರಂಥ)

## ಕನ್ನಡ ಅನುವಾದ ಕೃತಿಗಳು

19) ವಾದಾವಲೀ
20) ಬೃಹದಾರಣ್ಯಖಂಡಾರ್ಥ ಭಾಗ-1
21) ಬೃಹದಾರಣ್ಯಖಂಡಾರ್ಥ ಭಾಗ-2
22) ಸೂತ್ರಾರ್ಥರತ್ನಾವಲೀ
23)ಮಾಯಾವಾದಖಂಡನ
24) ಉಪಾಧಿಖಂಡನ
25) ಪ್ರಪಂಚಮಿಥ್ಯಾತ್ವಾನುಮಾನಖಂಡನ

ಹರಿವಾಯುಗುರುಗಳು ನನ್ನಲ್ಲಿ ನಿಂತು ಬರೆಸಿದ
25 ಕೃತಿಗಳನ್ನು ಶ್ರೀಜಯತೀರ್ಥವಿದ್ಯಾಪೀಠದ ರಜತಮಹೋತ್ಸವ
ಶುಭಸಂದರ್ಭದಲ್ಲಿ ಗುರುಗಳ ಪಾದಾರವಿಂದಗಳಲ್ಲಿ ಸಮರ್ಪಿಸುತ್ತೇನೆ

ಕಾಂತೇಶಾಚಾರ್ಯ ಕದರಮಂಡಲಗಿ